# ಕಸ್ತೂರಿ



ಜುಲೈ, ೧೯೬೧

ಜ್ಞಾನ ಮತ್ತು ಮನೋರಂಜನ

## ಸಂತಸದ ಸುದ್ದಿ



# "ಕಸ್ತೂರಿ ಬಳಗ" ಸೇರಲು ಮತ್ತೆ ೩ ತಿಂಗಳ ಅವಧಿ

(ಸಪ್ಟೆಂಬರ ೩೦ ರ ವರೆಗೆ)

"ಕಸ್ತೂರಿ ಬಳಗ" ಯೋಜನೆಯ ಅವಧಿ ಜೂನ್ ೩೦, ೧೯೬೧ ಕ್ಕೆ ಮುಗಿಯುತ್ತಿದ್ದರೂ ನೂರಾರು ಓದುಗರ ಒತ್ತಾಯಕ್ಕೆ ಮಣಿದು ಅವಧಿಯನ್ನು ವಿಸ್ತರಿಸಲಾಗಿದೆ.

ವಿವರಗಳಿಗೆ ಮುಂದಿನ ಪುಟ ನೋಡಿರಿ

# "ಕಸ್ತೂರಿ ಬಳಗ"ದ ಯೋಜನೆ

## ೬೦ ಸಂಚಿಕೆಗಳು ಪುಕ್ಕಟೆ!

ಪ್ರತಿತಿಂಗಳ ೧ನೇ ದಿನಾಂಕ ಪ್ರಕಟವಾಗುವದು



ಲೋಕಶಿಕ್ಷಣ ಟ್ರಸ್ಟಿನ ಪ್ರಕಾಶನ

* "ಕಸ್ತೂರಿ" ಇಂದು ನಮ್ಮ ಸರ್ವಶ್ರೇಷ್ಠ ಡೈಜೆಸ್ಟ್-ಸಾರಸಾಹಿತ್ಯ.
* ಪ್ರತಿ ತಿಂಗಳೂ ಎಷ್ಟೋ ಓದುಗರು ಪ್ರತಿಗಳ ಬಗ್ಗೆ ನಿರಾಶೆಯಾಗುತ್ತಿದ್ದಾರೆ. ಅದಕ್ಕಾಗಿ ಈ ಯೋಜನೆ. ಇಂದಿನಿಂದಲೇ "ಕಸ್ತೂರಿ"ಯು ಮುಂದಿನ ೬೦ ಸಂಚಿಕೆಗಳನ್ನು ಕಾಯ್ದಿರಿಸಿ. ಅದು ಪ್ರತಿ ತಿಂಗಳೂ ನೀವಿದ್ದಲ್ಲಿ ಕೈಸೇರುವದು.
* ನೀವು ಪ್ರತ್ಯೇಕ ಚಂದಾ ಹಣ ಕಳಿಸಬೇಕಾಗಿಲ್ಲ!
* ಕೇವಲ ರೂಪಾಯಿ ಒಂದುನೂರಾ ಇಪ್ಪತ್ತು (ರೂ. ೧೨೦) ಠೇವು ಇಟ್ಟರೆ ಸಾಕು.
* ಐದು ವರ್ಷಗಳಲ್ಲಿ ೬೦ ಸಂಚಿಕೆಗಳನ್ನೂ ಪಡೆದುದಲ್ಲದೆ ನಿಮ್ಮ ೧೨೦ ರೂ. ಗಳ ಠೇವನ್ನು ಮರಳಿ ಪಡೆಯುವಿರಿ.
* ಈ ಯೋಜನೆ ಸೆಪ್ಟೆಂಬರ್ ೩೦, ೧೯೬೧ರ ವರೆಗೆ ಮಾತ್ರ ಊರ್ಜಿತದಲ್ಲಿರುವದು.
* ಕೂಡಲೇ "ಕಸ್ತೂರಿ ಬಳಗ" ಕ್ಕೆ ಸೇರಿರಿ.

**ಕೆಳಗಿನ ಫಾರ್ಮನ್ನು ತುಂಬಿ ಹಣ ಸಹಿತ ಇಂದೇ ಕಳಿಸಿರಿ.**

**ವ್ಯವಸ್ಥಾಪಕರು "ಕಸ್ತೂರಿ ಬಳಗ," ಪೋ. ಬಾ. ನಂ. ೩೦, ಹುಬ್ಬಳ್ಳಿ.**

ಮಿತ್ರರೆ, ನಿಮ್ಮ "ಕಸ್ತೂರಿ ಬಳಗ" ದ ಯೋಜನೆಯಲ್ಲಿ ಭಾಗ ವಹಿಸಲು ನಾನು ಅಪೇಕ್ಷಿಸುತ್ತೇನೆ. ಅದಕ್ಕಾಗಿ ರೂ. ೧೨೦ ನ್ನು ಇಂದು ಮ. ಆ./ಚೆಕ್ಕು/ಡ್ರಾಪ್ಟ್ ಮೂಲಕ ಕಳಿಸಿದ್ದೇನೆ. ಈ ಯೋಜನೆಯಂತೆ........೧೯೬೧ ರಿಂದ ೫ ವರ್ಷ ಕಾಲ ಕಸ್ತೂರಿ ಸಂಚಿಕೆಗಳನ್ನೂ ಆ ಅವಧಿಯ ಕೊನೆಗೆ ರೂ. ೧೨೦ ನ್ನೂ ಪಡೆಯಲು ಹಕ್ಕು ನನಗಿದೆ. ಕೂಡಲಿ "ಕಸ್ತೂರಿ ಬಳಗದ ಠೇವಿನ ರಶೀದಿ"ಯನ್ನು ಕಳಿಸಿರಿ.

ಹೆಸರು (ಪೂರ್ಣ) ____________________

ವಿಳಾಸ ____________________

ಪೋಸ್ಟ್ __________ (ಜಿಲ್ಲಾ) __________

ಕಸ್ತೂರಿ

# ಕಸ್ತೂರಿ

ಕನ್ನಡ ಡೈಜೆಸ್ಟ್

ಪ್ರತಿತಿಂಗಳ ೧ ನೆ ದಿನಾಂಕ
ಪ್ರಕಟವಾಗುವುದು.

ಮುಖ್ಯ ಸಂಪಾದಕರು :
ರಂಗನಾಥ ದಿವಾಕರ

ಸಹಾಯಕ ಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕ ಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತಕರ್ನಾಟಕಮುದ್ರಣಾಲಯ
ಹುಬ್ಬಳ್ಳಿ

ಮುಖಚಿತ್ರ :
ಸಾಗರ ಮುಖದಲ್ಲಿ
ಶ್ರೀ ಪ್ರಹ್ಲಾದ ಕೋನೇರಿ

ಚಂದಾ ದರ :

| | |
|---|---|
| ವಾರ್ಷಿಕ (ಅಂಚೆಸೇರಿ). | ರೂ.೮.೦೦ |
| ಅರ್ಧ ವರ್ಷ — | ರೂ.೪.೫೦ |
| ಬಿಡಿಸಂಚಿಕೆ — | ರೂ.೦.೭೫ |

Kasturi, July 1961


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವುದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವುದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ "ಕಸ್ತೂರಿ"ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ"ಕಸ್ತೂರಿ"ಆಯಾ ತಿಂಗಳ ೧ನೇ ದಿನಾಂಕದೊಳಗೇ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ



ಪುಸ್ತಕವಿಭಾಗ

ಕಸ್ತೂರಿ



ಸಂಚಿಕೆ ೧೧ ಜುಲೈ, ೧೯೬೧ ವರ್ಷ ೫

# ಹಕ್ಕಿಯಾಗಬಯಸಿದ ಮೀನು

**ಸ್ವಭಾವಾನುಗುಣ ಜೀವನದಲ್ಲೇ ಮಾನವ ಸುಖಿಯಾದಾನು**

ಮೀನೊಂದು ನಿತ್ಯಕ್ರಮದಂತೆ ಕೆರೆಯಲ್ಲಿ ಈಸುತ್ತಲಿತ್ತು. ಒಮ್ಮೆ ಅದು ನೀರ ಮೇಲಕ್ಕೆ ಬಂದು ಆಕಾಶವನ್ನು ನೋಡಿದಾಗ ಆನಂದದಿಂದ ಹಾರಾಡುತ್ತಿದ್ದ ಹಕ್ಕಿಗಳು ಅದರ ಕಣ್ಣಿಗೆ ಬಿದ್ದವು. ಮೀನು ಆಗ ದೇವರಿಗೆ ಮೊರೆಯಿಟ್ಟಿತು: "ದೇವಾ, ನನ್ನನ್ನೊಂದು ಹಕ್ಕಿಯನ್ನಾಗಿ ಮಾಡು."

ಪರಮಾತ್ಮ, "ಹುಚ್ಚಾ, ಹಕ್ಕಿಯಾಗಿ ನೀನೇನು ಮಾಡುವಿ?" ಎಂದು ಕೇಳಿದ.

"ಆಕಾಶದಲ್ಲಿ ಹಾರುವೆ. ಈ ಗಿಡದಿಂದ ಆ ಗಿಡಕ್ಕೆ ಹಾರಿ ಅದರ ಮೇಲೆ ಕೂಡ್ರುವೆ. ಮತ್ತೆ ಆಕಾಶಕ್ಕೆ ನೆಗೆಯುವೆ. ಈ ಕೆರೆಯ ದಂಡೆಯಲ್ಲಿ ಕುಳಿತಿರುವ ಕಪ್ಪೆಗಳು! ಛಿ! ಅವುಗಳ ಮುಖವನ್ನು ನೋಡಲಾಸಲ್ಲ. ಅವುಗಳ ಕುರೂಪವನ್ನು ಕಂಡು ನನಗೆ ಓಕರಿಕೆ ಬರುತ್ತದೆ. ಅದರಿಂದಲೆ ನನಗೆ ಇಲ್ಲಿಯ ಜೀವನ ಬೇಡವಾಗಿದೆ. ಇಲ್ಲಿರುವುದೂ ಬೇಡ, ಈ ಈಸಾಟವೂ ಬೇಡ. ಯಾವುದೂ ಬೇಡ. ಆಕಾಶದಲ್ಲಿ ನಾನು ಹಾರಾಡುತ್ತಿದ್ದರೆ ಈ ದರಿದ್ರ ಕಪ್ಪೆಗಳ ಮುಖ ನೋಡುವುದು ತಪ್ಪೀತು."

"ಸರಿ ಸರಿ. ನನ್ನ ಮಾತನ್ನು ಕೇಳಿ ನೀನು ಕಪ್ಪೆಗಳ ಮೇಲಿನ ನಿನ್ನ ಸಿಟ್ಟನ್ನು ಬಿಟ್ಟುಬಿಡು. ನೀನು ಅವುಗಳ ಹೆಸರನ್ನೆತ್ತಿದೆಯಾದರೆ ನೀನೂ ಕಪ್ಪೆಯಾಗಿ ಬಿಡುವೆ. ನೆನಪಿರಲಿ ನಿನ್ನನ್ನೀಗ ನಿನ್ನ ಬಯಕೆಯಂತೆ ಹಕ್ಕಿಯನ್ನಾಗಿ ಮಾಡುವೆ."

ಮೀನು ಒಂದು ಸುಂದರವಾದ ಹಕ್ಕಿಯಾಯಿತು. ಸುಂದರವಾದ ಚುಂಚು, ಎರಡು ಕಾಲುಗಳು, ಗರಿಗಳು! ನೀರಿನಲ್ಲಿ ತನ್ನ ಹೊಸ ರೂಪದ ಪ್ರತಿಬಿಂಬವನ್ನು ಕಂಡು ಅದು ಹಿಗ್ಗಿ ಹೋಯಿತು. ಹಿಗ್ಗಿ ಥಕಥಕ ಕುಣಿಯಹತ್ತಿತು. ಹಾಡುತ್ತ ಕುಣಿಯುತ್ತ ಆಕಾಶದಲ್ಲಿ ಹಾರಾಡತೊಡಗಿತು. ಆದರೆ ಆಶ್ಚರ್ಯವೆಂದರೆ ಅದು ಆ ಕೆರೆಯ ಮೇಲ್ಗಡೆಯಲ್ಲಿ ಮಾತ್ರ ಹಾರಾಡು

ತ್ತಿತ್ತು. ಕೆರೆಯ ಸೀಮೆಯನ್ನು ಬಿಟ್ಟು ಬೇರೆಡೆ ಹಾರಿ ಹೋಗಲು ಅದಕ್ಕೆ ಧೈರ್ಯವಾಗುತ್ತಿರಲಿಲ್ಲ.

ಹೀಗೆಯೇ ಅದು ಹಾರಾಡುತ್ತಿದ್ದಾಗ ಇನ್ನೊಂದು ಹಕ್ಕಿ ಕೇಳಿತು : "ಯಾಕಣ್ಣಾ, ಇಲ್ಲೆ ಸುತ್ತಾಡುವಿ? ನಡೆ ನನ್ನೊಡನೆ. ದೂರ-ದೂರ ಹಾರಿ ಹೋಗೋಣ."

ಹಕ್ಕಿಯಾದ ಮೀನು ಉತ್ತರವಿತ್ತಿತು: "ನಿನ್ನ ಮಾತು ಬೇರೆ. ನೀನು ಜನ್ಮತಃ ಪಕ್ಷಿಯಾಗಿರುವಿ. ಆದರೆ ನಾನು ಕೆಳಗೆ ಕಾಣಿಸುವ ಆ ಕೆರೆಯಲ್ಲಿ ಒಂದು ಮೀನಾಗಿದ್ದೆ. ನನ್ನ ಬಯಕೆಯಂತೆ ದೇವರು ನನ್ನನ್ನು ಹಕ್ಕಿಯನ್ನಾಗಿ ಮಾಡಿದ್ದಾನೆ. ಅಕಸ್ಮಾತ್ ಏನಾದರೂ ದೇವರ ವಿಚಾರ ಬದಲಾಗಿ ಆತ ನಾನು ಹಾರುತ್ತಿರುವಾಗಲೇ ಮತ್ತೆ ನನ್ನನ್ನು ಮೀನನ್ನಾಗಿ ಮಾಡಿಬಿಟ್ಟರೆ! ಆಗ ಕೆಳಗೆ ಬಿದ್ದರೂ ನಾನು ಕೆರೆಯಲ್ಲಿಯೇ ಬೀಳುವೆನಲ್ಲವೆ? ಪುನಃ ಆ ದರಿದ್ರ ಕಪ್ಪೆಗಳ ಮುಖ ನೋಡಬೇಕಾಗಿ ಬಂದರೂ ಬದುಕುಳಿಯುವೆನಲ್ಲ. ಆದ್ದರಿಂದಲೇ ಇಲ್ಲಿಯೇ ಸುತ್ತಾಡುತ್ತಿದ್ದೇನೆ."

ಇಷ್ಟೆನ್ನುವುದೇ ತಡ, ಅದು ಕಪ್ಪೆಯಾಗಿ ಧೊಪ್ಪೆಂದು ಕೆಳಗೆ ಕೆರೆಯಲ್ಲಿ ಬಿತ್ತು. ಈಸಿ ಅದು ದಂಡೆಗೆ ಬಂತು. ಕಪ್ಪೆಗಳೊಡನೆ ವಾಸಿಸತೊಡಗಿತು. ಬರಬರುತ್ತ ಅದಕ್ಕೆ ಆ ಜೀವನ ಪ್ರಿಯವೆನಿಸಹತ್ತಿತು. ಉಳಿದೆಲ್ಲ ಕಪ್ಪೆಗಳಿಗಿಂತ ಅದು ಹೆಚ್ಚು ಜೋರಾಗಿ, ಸುಂದರವಾಗಿ "ಡರಾಂವ್", "ಡರಾಂವ್" ಎಂದು ಒದರತೊಡಗಿತು. ತನ್ನ ಬಂಧುಗಳಾದ ಕಪ್ಪೆಗಳ ಬಗ್ಗೆ ಅದಕ್ಕೆ ಎಷ್ಟೊಂದು ಅಭಿಮಾನ! ....... 

*

ಗದ್ದೆಯಲ್ಲಿ ಜೋಳ ಹುಲುಸಾಗಿ ಬೆಳೆದಿತ್ತು. ಎತ್ತೊಂದು ಅಲ್ಲಿ ಮೇಯುತ್ತಿದರೂ ಅತ್ಯಂತ ಪ್ರಾಮಾಣಿಕತೆಯಿಂದ ಜೋಳದ ತೆನೆಯೊಂದನ್ನೂ ಮುಟ್ಟದೆ ಹುಲ್ಲನ್ನು ಮಾತ್ರ ತಿನ್ನುತ್ತಿತ್ತು. ಅದು ಹಾಗೆ ಮೇಯುತ್ತಿದ್ದಾಗ ನೆಲದಲ್ಲಿದ್ದ ಒಂದು ಬಿಲದಿಂದ ಇಲಿ ಹೊರಬಂದಿತು. "ಎತ್ತ ಹೊರಟಿರುವಿಯೊ ಉಡಾಳಾ ?" ಎಂದು ಕೇಳಿತು ಎತ್ತು.

"ಎತ್ತೇ, ನಿನ್ನಷ್ಟಕ್ಕೆ ನೀನು ಹುಲ್ಲನ್ನು ತಿನ್ನು. ನಾನು ಹೊರಟಿದ್ದೇನೆ ಜೋಳದ ತೆನೆಯಲ್ಲಿರುವ ರಸಭರಿತ ಕಾಳನ್ನು ತಿನ್ನಲು" ಎಂದು ಇಲಿ ಸರ್ರನೆ ಓಡಿಹೋಯಿತು.

ಎತ್ತು ತನ್ನಷ್ಟಕ್ಕೆ ಅಂದುಕೊಂಡಿತು : "ಎಂಥ ಕೀಳು ಪ್ರಾಣಿ ! ತಿನ್ನುವುದಕ್ಕಿಂತ ಹಾಳು ಮಾಡುವುದೇ ಹೆಚ್ಚು. ನಾನು ಮೈಮುರಿದು ಹೊಲದಲ್ಲಿ ದುಡಿಯುತ್ತೇನೆ. ಆದರೆ ಈ ಉಡಾಳ ಇಲಿಗೆ ಜೋಳದ ಕಾಳುಗಳು ಸಿಗುತ್ತವೆ. ನನಗೆ ಸಿಗುವುದು ಬರೀ ಹುಲ್ಲು. ದೇವಾ, ನಿನ್ನ ರಾಜ್ಯದಲ್ಲಿ ಇದೇ ನ್ಯಾಯವೇ ?"

ಅಷ್ಟರಲ್ಲಿ "ಚೀ . . . ಚೀ" ಎಂಬ ಚೀತ್ಕಾರ ಕೇಳಿಸಿತು. ಜೋಳದ ಕಾಳುಗಳನ್ನು ಧ್ವಂಸ ಮಾಡುತ್ತಿದ್ದ ಇಲಿಯನ್ನು ಹದ್ದೊಂದು ಬಂದು ಹಿಡಿದು ಎತ್ತಿಕೊಂಡು ಆಕಾಶದಲ್ಲಿ ಹಾರಿತ್ತು.

ಆಗಲೇ ರೈತ ಬಂದ. ಎತ್ತಿನ ಬೆನ್ನನ್ನು ಚಪ್ಪರಿಸಿ "ನಡಿ ನನ್ನ ರಾಜಾ!" ಎಂದು ನೀರು ಕುಡಿಸಲೆಂದು ಅದನು ಬಾವಿಯ ಬಳಿಗೆ ಕರೆದೊಯ್ದ. *

(ಕವಿ ಸೋಹನಲಾಲ ದ್ವಿವೇದಿ ಚೌಧರಿಯವರಿಗೆ ಅವರ ತಾಯಿ ಹೇಳಿದ ಕಥೆ)



ಒಂದು ಕಲ್ಲಿನ ತುಂಡನ್ನು ತೆಗೆದುಕೊಂಡು ತಿಂಗಳುಗಟ್ಟಲೆ ಕೆಲಸಮಾಡಿ ಅದು ಕಲ್ಲಿನ ತುಂಡಿನಂತೆಯೆ ಕಾಣುವ ಹಾಗೆ ಮಾಡುವವನೇ ಆಧುನಿಕ ಶಿಲ್ಪಿ.

# ಡಾ. ಎಸ್. ರಾಧಾಕೃಷ್ಣನ್

ಪಾವೆಂ

ತತ್ವಜ್ಞಾನಿಯೊಬ್ಬನ ಭಾಷಣಕ್ಕೆ ಜನ ಮುತ್ತ ತೊಡಗಿದರೆ ಎಲ್ಲೋ ಏನೋ ಸರಿಯಾಗಿಲ್ಲ ಎಂದು ಸಂಶಯಪಡಬೇಕಾಗುತ್ತದೆ" ಎಂದು ಒಮ್ಮೆ ಸರ್ವಪಲ್ಲಿ ರಾಧಾಕೃಷ್ಣನ್ ನಗೆಯಲ್ಲಿ ಹೇಳಿದ್ದರು. ಅವರು ಹೇಳಿದ ಆ ಅತಿ ಜನಪ್ರಿಯ ತತ್ವಜ್ಞಾನಿ ಮತ್ತಾರೂ ಆಗಿರದೆ ಸ್ವತಃ ಅವರೇ ಆಗಿದ್ದರು. ಏನೋ ಎಲ್ಲೋ ಸರಿಯಾಗಿರಲಿ ಸರಿಯಾಗಿಲ್ಲದಿರಲಿ, ಮದ್ರಾಸ್ ಪ್ರೆಸಿಡೆನ್ಸಿ ಕಾಲೇಜಿನ ಈ ತತ್ವಜ್ಞಾನದ ಪ್ರೊಫೆಸರನ ಭಾಷಣಗಳು ಎಷ್ಟು ಜನಾಕರ್ಷಕವಾಗಿದ್ದವೆಂದರೆ, ಅವರು ತತ್ವಜ್ಞಾನದ ಬಗ್ಗೆ ಭಾಷಣ ಮಾಡುತ್ತಿದ್ದರೆ ಕಾಲೇಜಿನ ಹಾಲುಗಳಲ್ಲಲ್ಲ, ಬೀಚಿನಲ್ಲಿ, ಯಾವನೊಬ್ಬ ಜೆಂಕಿನವಾಬ ರಾಜಕಾರಣಿಯ ಭಾಷಣದಂತೆ ಅದನ್ನು ಏರ್ಪಡಿಸಬೇಕಾಗುತ್ತಿತ್ತು.

ಇದೇ ವಿಶೇಷ. ಭಾರತದ ಇಂದಿನ ಅತಿ ಶ್ರೇಷ್ಠ ತತ್ವಜ್ಞಾನಿಗಳಲ್ಲೊಬ್ಬರಾದ ಡಾಕ್ಟರ್ ಸರ್ ಸರ್ವಪಲ್ಲಿ ರಾಧಾಕೃಷ್ಣನ್ನರು ಜೀವಮಾನವೆಲ್ಲ ಜನಪ್ರಿಯರಾಗಿಯೆ ಇದ್ದಾರೆ. ಮದ್ರಾಸಿನಲ್ಲಿ, ಅನಂತರ ಮೈಸೂರು ವಿಶ್ವವಿದ್ಯಾಲಯದಲ್ಲಿ, ಆಮೇಲೆ ಕಲ್ಕತ್ತಾ ವಿಶ್ವವಿದ್ಯಾಲಯದಲ್ಲಿ ತತ್ವಜ್ಞಾನದ ಪ್ರೊಫೆಸರರಾಗಿ ಅವರು ಜನಪ್ರಿಯರಾಗಿದ್ದರು. ವಿದೇಶಗಳಲ್ಲಿ ಅವರು ಭಾರತೀಯ ತತ್ವಜ್ಞಾನದ ಬಗ್ಗೆ ಭಾಷಣ ಮಾಡಲು ಹೋದಾಗ ಸಿ. ಇ. ಎಂ. ಜೋಡರಂಥ ಪ್ರಥಮ ಶ್ರೇಣಿಯ ತತ್ವಜ್ಞಾನಿಗಳ ನಡುವೆಯೂ ಜನಪ್ರಿಯರಾಗಿದ್ದರು. ಬನಾರಸ ಹಿಂದೂ ವಿಶ್ವವಿದ್ಯಾಲಯಕ್ಕೆ ಒಂದು ದಶಕ ಕಾಲ ಉಪಕುಲಪತಿಗಳಾಗಿ ಅವರು ಅತ್ಯಂತ ಜನಪ್ರಿಯರಾಗಿದ್ದರು.

ಭಾರತ ಸ್ವತಂತ್ರವಾದ ಮೇಲೆ ಮಾಸ್ಕೋದಲ್ಲಿ ರಾಯಭಾರಿಯಾಗಿ ನಿಯಮಿಸಲ್ಪಟ್ಟಾಗ ರಾಧಾಕೃಷ್ಣನ್ನರ ಜನಪ್ರಿಯತೆ ಕೇವಲ ವೈಚಾರಿಕ ವಿಶ್ವಕ್ಕೆ ಮಿತವಾಗಿರದೆ ರಾಯಭಾರ ನಿರ್ವಹಣದಲ್ಲೂ ಪ್ರಕಟವಾಗಬಲ್ಲದೆಂದು ಸಿದ್ಧವಾಯಿತು. ಭಾರತದ ವಿಚಾರಧಾರೆಗೆ ಸಂಪೂರ್ಣ ವಿರುದ್ಧವಾದ ನಿಷ್ಠುರ ವಿಚಾರಧಾರೆಯನ್ನನುಸರಿಸುವ ಒಂದು ದೇಶಕ್ಕೆ ರಾಯಭಾರಿಯಾಗಿ ಹೋಗಿ ಸೋವಿಯಟ್ ನಾಯಕರಲ್ಲಿ ಅವರು ಜನಪ್ರಿಯತೆಯನ್ನು ಪಡೆದರಲ್ಲದೆ ರಶಿಯದೊಡನೆ ನಮ್ಮ ಸುಖತರ ಸಂಬಂಧದ ತಳಪಾಯವನ್ನು ಹಾಕಿದರು. "ದಿನದ ಇಪ್ಪತ್ತನಾಲ್ಕು ತಾಸೂ ಓದುವ ಈ ಪ್ರೊಫೆಸರರನ್ನು ನಾನು ಕಾಣಲೇಬೇಕು" ಎಂದು ಸ್ಟಾಲಿನ್ ತಾನಾಗಿ ಅವರನ್ನು ಕ್ರೆಮ್ಲಿನ್ ಭವನಕ್ಕೆ ಕರೆಸಿಕೊಂಡನಂತೆ. ಸ್ಟಾಲಿನ್ನನ ಸಂದರ್ಶನ ಪಡೆಯುವುದು ಮಹಾ ಮಹಾ ರಾಷ್ಟ್ರಗಳ ರಾಯಭಾರಿಗಳಿಗೂ ನಿಲುಕದ ಹಣ್ಣಾಗಿತ್ತು ಎಂಬುದನ್ನು ನಾವು ನೆನೆದುಕೊಳ್ಳಬೇಕು.

ಭಾರತದ ಉಪರಾಷ್ಟ್ರಪತಿಗಳಾಗಿ ಮತ್ತು

ರಾಜ್ಯಸಭೆಯ ಸಭಾಪತಿಗಳಾಗಿ ರಾಧಾಕೃಷ್ಣನ್ನರು ಅದಕ್ಕಿಂತ ಕಡಿಮೆ ಜನಪ್ರಿಯರಾಗಿಲ್ಲ. ಅವರು ತಕ್ಕಡಿ ಹಿಡಿದಾಗ ವಿರುದ್ಧ ಪಕ್ಷದ ಅತಿ ಮೊರಟ ಸದಸ್ಯನೂ ಅದರ ಸಮತ್ವವನ್ನು ಪ್ರಶ್ನಿಸುವುದಿಲ್ಲ. ಅವರು ಮುಂದೊಂದು ದಿನ ಈ ದೇಶದ ರಾಷ್ಟ್ರಪತಿಗಳಾದರೆ ಆಶ್ಚರ್ಯಪಡಬೇಕಾಗಿಲ್ಲ; ಮತ್ತು ಅವರು ಆ ಪದದಲ್ಲಿಯೂ ಅಷ್ಟೇ ಜನಪ್ರಿಯರಾಗುವುದರಲ್ಲಿ ಸಂದೇಹವೂ ಇಲ್ಲ.




ರಾಧಾಕೃಷ್ಣನ್ನರು ಮದ್ರಾಸಿನ ಸಮೀಪದಲ್ಲಿರುವ ಚಿಕ್ಕ ಹಳ್ಳಿ, ಆದರೆ ದೊಡ್ಡ ತೀರ್ಥಕ್ಷೇತ್ರವಾದ ತಿರುತ್ತಣಿಯಲ್ಲಿ ೧೮೮೮ ರಲ್ಲಿ ಜನಿಸಿದರು. ಅವರ ತಂದೆ-ತಾಯಿ ಬಡವರು. ಬಾಲ್ಯದಲ್ಲಿ ಅವರು ತಿರುತ್ತಣಿ ಮತ್ತು ಇನ್ನೂ ಆಚೆಗಿರುವ ತಿರುಪತಿ ಹೊರತು ಹೊರ ಜಗತ್ತನ್ನು ನೋಡಲಿಲ್ಲ. ತಿರುಪತಿಯಲ್ಲಿ ಮತ್ತು ವೆಲ್ಲೂರಿನಲ್ಲಿ ಮಿಶನ್ ಕಾಲೇಜುಗಳಲ್ಲಿ ಅವರ ವಿದ್ಯಾಭ್ಯಾಸವಾಯಿತು ಮಿಶನ್ ವಿದ್ಯಾಸಂಸ್ಥೆಗಳಲ್ಲಿ ಶಿಕ್ಷಣವಾದದ್ದೇ— ವಿರೋಧಾಭಾಸವೆನಿಸುವಂತೆ—ಅವರನ್ನು ಹಿಂದೂ ತತ್ವಜ್ಞಾನದ ಗಾಢ ಅಭಿಮಾನಿಯನ್ನಾಗಿಯೂ ಪಂಡಿತರನ್ನಾಗಿಯೂ ಮಾಡಿತೆನ್ನಬೇಕು. ಅಲ್ಲಿ ಹಿಂದೂ ವಿಚಾರ ತತ್ವಜ್ಞಾನಿಗಳ ಟೀಕೆ, ಉಪಹಾಸ ನಡೆಯುತ್ತಿತ್ತು. "ಕ್ರೈಸ್ತ ಟೀಕಾಕಾರರ ಆಕ್ಷೇಪಗಳ ದೆಸೆಯಿಂದಲೇ ನಾನು ಹಿಂದೂ ಧರ್ಮವನ್ನು ಅಭ್ಯಸಿಸಿ, ಅದರಲ್ಲಿ ಕಾಳೆಷ್ಟು ಜೊಳ್ಳೆಷ್ಟು ಎಂದು ಶೋಧಿಸುವುದಕ್ಕೆ ಉದ್ಯುಕ್ತನಾದೆ" ಎನ್ನುತ್ತಾರವರು. ಧಾರಾಳವಾಗಿ ಅವರಿಗೆ ಕಾಳು ಸಿಕ್ಕಿತೆಂಬುದನ್ನು ಅವರ ಪ್ರಪ್ರಥಮ ಪ್ರಬಂಧವಾದ "ಎಥಿಕ್ಸ್ ಆಫ್ ವೇದಾಂತ" ತೋರಿಸಿತು. ಭಾರತೀಯ ತತ್ವಜ್ಞಾನದಲ್ಲಿ ನೀತಿಗೆ ಸ್ಥಾನವಿಲ್ಲ ಎಂಬ ಪಾಶ್ಚಾತ್ಯ ಆಕ್ಷೇಪಕ್ಕೆ ಅದು ಉತ್ತರವಾಗಿತ್ತು.

ಮದ್ರಾಸ್ ಸರಕಾರದ ವಿದ್ಯಾ ಇಲಾಖೆಯಲ್ಲಿ ರೂ. ೧೦೦ ಸಂಬಳದ ಮೇಲೆ ಅವರು ಲೆಕ್ಚರರ್ ಆಗಿ ಕೆಲಸಕ್ಕೆ ಸೇರಿದರು. ಕೆಲವೇ ವರ್ಷಗಳಲ್ಲಿ ಅವರು ಅದರ ತತ್ವಜ್ಞಾನದ ಪ್ರೊಫೆಸರ್ ಪದಕ್ಕೇರಿದರು. ೧೯೧೮ ರಿಂದ ಮೂರು ವರ್ಷ ಮೈಸೂರು ವಿಶ್ವವಿದ್ಯಾಲಯಕ್ಕೆ ಸೇವೆ ಸಲ್ಲಿಸಿದರು. ೧೯೨೧ ರಲ್ಲಿ ಕಲಕತ್ತಾ ವಿಶ್ವವಿದ್ಯಾಲಯದ ಆಶುತೋಷ ಮುಖರ್ಜಿಯವರಿಂದ ಆಮಂತ್ರಣ ಸ್ವೀಕರಿಸಿದಾಗ ಅವರು ಭಾರತದಲ್ಲೆ ಅತಿ ಎಳೆಯ ತತ್ವಜ್ಞಾನ ಪ್ರೊಫೆಸರರಾಗಿದ್ದರು.

ಪ್ರೊಫೆಸರ್ ರಾಧಾಕೃಷ್ಣನ್ನರು "ಭಾರತೀಯ ದರ್ಶನ" (Indian Philosophy) ವನ್ನು ಪ್ರಕಟಿಸಿದಾಗ 'ಪಾಶ್ಚಾತ್ಯ ಜಗತ್ತು ಅದನ್ನೋದಿ ಬೊಟ್ಟು ಕಚ್ಚಿತು. ಇನ್ನೂ ಮೂವತ್ತೈದು

ದಾಟಿರದ ಈ ತರುಣ ಭಾರತೀಯ ದರ್ಶನವನ್ನು ಮಂಡಿಸಿದ ಬಗೆ ನೋಡಿದರೆ ಈ ತತ್ವಜ್ಞಾನವು ಎಂದೋ ಆಗಿಹೋದ ಪುರಾತನರ ಜೇಡರ ಬಲೆ ಬಳಸಿದ ವಿಚಾರಲಹರಿಯಾಗಿರದೆ ಜೀವಂತ, ತೇಜಸ್ವಿ, ಪ್ರಭಾವಶಾಲಿ ಸುವ್ಯವಸ್ಥಿತ ವಿಚಾರಗಳಾಗಿವೆಯೆಂದು ತೋರಿತು. ಅವರನ್ನು ಆಕ್ಸ್‌ಫರ್ಡಿಗೆ ಭಾಷಣವೀಯಲು ಕರೆಯಲಾಯಿತು. ಬಳಿಕ ಚಿಕಾಗೊದಲ್ಲಿ ತುಲನಾತ್ಮಕ ಧರ್ಮದ ವಿಚಾರ ಅವರು ಭಾಷಣವಿತ್ತರು. ೪೧ ದಾಟುವುದರೊಳಗೆ ಅವರು ಆಕ್ಸಫರ್ಡಿನ ಮೆಂಚೆಸ್ಟರ್ ಕಾಲೇಜಿನಲ್ಲಿ ತುಲನಾತ್ಮಕ ಧರ್ಮದ ಪ್ರೊಫೆಸರರಾಗಿದ್ದರು. ಅಲ್ಲಿಂದ ಮರಳಿದಾಗ ಹೊಸದಾಗಿ ಸ್ಥಾಪಿತವಾದ ಆಂಧ್ರ ವಿಶ್ವವಿದ್ಯಾಲಯದ ಉಪಕುಲಪತಿ ಪದ ಅವರಿಗಾಗಿ ಕಾದಿತ್ತು.

ಅಂದಿನಿಂದ ರಾಧಾಕೃಷ್ಣನ್ನರ ಲೇಖನಿಯಿಂದ ತತ್ವಜ್ಞಾನದ ಗಂಗೆ ನಿರಂತರವಾಗಿ ಹರಿಯುತ್ತ ಬಂದಿದೆ ಅವರ An Idealist View of Life—ಜೀವನದ ಆದರ್ಶ ದೃಷ್ಟಿ—ಯಲ್ಲಿ ಅವರು ಆಧುನಿಕ ನಾಗರಿಕತೆಗೆ ಬಡಿದ ರೋಗವನ್ನು ವಿಶ್ಲೇಷಿಸಿ ಜಡವಾದಿಯಾದ ವಿಜ್ಞಾನ ಅದಕ್ಕೆ ಪರಿಹಾರ ಕೊಡಲರಿಯದೆಂದೂ ಬೌದ್ಧಿಕ ಜ್ಞಾನದಷ್ಟೇ ಆತ್ಮಿಕ ಜ್ಞಾನಕ್ಕೂ ಮಹತ್ವ ಕೊಡದೆ ಮಾನವಕುಲಕ್ಕೆ ತರುಣೋಪಾಯವಿಲ್ಲೆಂದೂ ಸಾರಿದರು. "ಆತ್ಮವು ಮಾನವನ ಬದುಕನ್ನೂ ಮೈಯನ್ನೂ ಅಂತರಂಗವನ್ನೂ ವ್ಯಾಪಿಸುವುದೇ ಅವನ ಚರಮ ಧ್ಯೇಯ."

The Hindu View of Life—ಹಿಂದೂ ಜೀವನ ದೃಷ್ಟಿ—ಯಲ್ಲಿ ಅವರು ಹಿಂದೂ ಚಿಂತನೆಯ ಮತ್ತು ಧರ್ಮದ ಇತಿಹಾಸವನ್ನು ರೇಖಿಸಿದ್ದಾರೆ. ಹಿಂದೂ ಧರ್ಮದ ಬಗ್ಗೆ ಮಿಶನರಿಗಳ ಆಕ್ಷೇಪವನ್ನು ಅವರು ರಭಸದಿಂದ ನಿರಾಕರಿಸಿದ್ದರೂ ಆ ಧರ್ಮದ ಬೆಳವಣಿಗೆಯೊಡನೆ ಬಂದಣಿಗೆಯ ಹಾಗೆ ಅದಕ್ಕೆ ತಗಲಿಕೊಂಡ ಅಪಾಯಕರ ಕಂದಾಚಾರಗಳನ್ನು ಮನ್ನಿಸಿಲ್ಲ.

Kalki, or The Future of Civilization— ಕಲ್ಕಿ, ಅಥವಾ ನಾಗರಿಕತೆಯ ಭವಿತವ್ಯ—ದಲ್ಲಿ ರಾಧಾಕೃಷ್ಣನ್ನರು ಋಷಿಗಳಂತೆ ಮಾನವನ ಭವಿತವ್ಯದ ಕಲ್ಪನೆಯನ್ನು ನಮ್ಮ ಮುಂದಿಟ್ಟಿದ್ದಾರೆ. ಇಂದಿನ ಆಧ್ಯಾತ್ಮಿಕ ಅವನತಿಯಿಂದ ಮೇಲೆದ್ದು ಆತ್ಮಿಕ ಜೀವನದಿಂದ ಚೆಲುವು-ನಲವುಗಳಿಂದಲೂ ಪ್ರೇಮ-ಭಕ್ತಿಗಳಿಂದಲೂ ಓತಪ್ರೋತನಾದ ಪರಿಪೂರ್ಣ ಮಾನವ ರೂಪುಗೊಳ್ಳುವ ಕವಿ ಸದೃಶವಾದ ಕನಸು ಆ ಪುಸ್ತಕ.

"ಭಾರತೀಯ ದರ್ಶನ" ವಂತೂ ಅವರ ಗ್ರಂಥರತ್ನ. ಎರಡು ಸಂಪುಟಗಳಲ್ಲಿ ಅವರು ಭಾರತದಲ್ಲಿ ತಲೆಯೆತ್ತಿದ ದರ್ಶನಗಳೆಲ್ಲವುಗಳ ಸಾರ ಸಂಗ್ರಹ ಮಾಡಿದ್ದಾರೆ. ಅದು ಬರಿಯ ಅಂಧ ಪ್ರಶಂಸೆಯ ನೈವೇದ್ಯವಲ್ಲ. ಅದು ಸಂಪೂರ್ಣ ಸ್ವತಂತ್ರ ಚಿಂತಕನೊಬ್ಬನು ಭಾರತೀಯ ದರ್ಶನಗಳ ಸೌರಭವನ್ನು ಬಿತ್ತರಿಸಿ ತೋರಿಸಿದಂತಿದೆ. "ಮೂರಾರು ಎರಡೊಂದು" ಮತಗಳಲ್ಲಿನ ತಪ್ಪುತಡೆಗಳನ್ನವರು ತೋರಿಸಲು ಹಿಂಗದಿದ್ದರೂ ಆದ್ಯ ಉಪನಿಷದಾಚಾರ್ಯರಿಂದ ಅರ್ವಾಚೀನ ನೈಯಾಯಿಕರವರೆಗಿನ ಭಾರತೀಯ ಚಿಂತಕರು ಶೋಧಿಸದಿದ್ದ ಯಾವ ಬೌದ್ಧಿಕ ರತ್ನಖನಿಯೂ ಜಗತ್ತಿನಲ್ಲಿ ಉಳಿದಿಲ್ಲವೆಂದು ಅವರು ತೋರಿಸಿದ್ದಾರೆ. "ಎನ್ಸೈಕ್ಲೊಪೀಡಿಯಾ ಬ್ರಿಟಾನಿಕಾ" ದಲ್ಲಿ ಹಿಂದೂ ದರ್ಶನದ ಬಗ್ಗೆ ಲೇಖ ಬರೆಯಲು ಡಾ. ರಾಧಾಕೃಷ್ಣನ್ನರನ್ನು ಆಮಂತ್ರಿಸಿದ್ದರಿಂದ ಅವರು ಜಗತ್ತಿನ ಜ್ಞಾನ ತಪಸ್ವಿಗಳಲ್ಲಿ ಎಷ್ಟು ಮೇಲ್ಮಟ್ಟದವರೆಂದು ತಿಳಿಯುತ್ತದೆ.

ಡಾ. ರಾಧಾಕೃಷ್ಣನ್ನರ ಕೈಯಲ್ಲಿ ತತ್ವಜ್ಞಾನವು ಕೆಲ ನಿಶ್ಚಿತ ಮತಿಗಳು ತಮಗೇ ಅರ್ಥವಾಗುವ ಸ್ವಂತ ಭಾಷೆಯಲ್ಲಿ ನಡೆಸುವ ಶುಷ್ಕ "ಘಟ-

ಪಟ" "ಭಾವಾಭಾವ" ಚರ್ಚೆಯಾಗಿ ಉಳಿಯದೆ ಸಾಮಾನ್ಯ ಜನರೂ ಮೆಚ್ಚಬಹುದಾದ ರಸಭರಿತ ವಿವೇಚನೆಯಾಗುತ್ತದೆ. ಅವರಿಗಿಂತ ಕುಶಲ ರಾದ ತತ್ವಜ್ಞಾನಿಗಳು ಈ ದೇಶದಲ್ಲಿರಬಹುದು. ಆದರೆ ಯಾವ ತತ್ವಜ್ಞಾನಿಯೂ ಅವರ ಹಾಗೆ ಭಾರತೀಯ ತತ್ವಜ್ಞಾನವನ್ನು ಇತರರಿಗೆ ಅನು-ವಾದ ಮಾಡಿ ಹೇಳಲು ಸಮರ್ಥನಾಗಿಲ್ಲ. ಬೇರೆ ಬೇರೆ ದರ್ಶನಗಳ ಅಂತರಂಗವನ್ನು ಪ್ರವೇಶಿಸಿ ಅದರ ಸಾರ ಸರ್ವಸ್ವವನ್ನು ಸುಕುಮಾರವಾಗಿ ತೆರೆದು ತೋರಿಸುವ ಪರಕಾಯ ಪ್ರವೇಶ ವಿದ್ಯೆ ಅವರದು. ಅವರ ಭಾಷೆ ಮಧುರ, ಶೈಲಿ ಜುಳು-ಜುಳು ಹರಿಯುವ ತೊರೆ, ಅದರ ಗತಿ ಅಸ್ಖಲಿತ.

ಅವರು ಮಾತಾಡುತಿದ್ದರೆ ವಾತಾವರಣ ಚಮತ್ಕೃತವಾಗುತ್ತದೆ. ನೀಳವಾದ ಮೈಕಟ್ಟು, ನಯವಾದ ಮುಖಭಾವದ ಈ ಆಧುನಿಕ ಋಷಿ ಇಳಿಬಿದ್ದ ರೇಶ್ಮೆ ಅಂಗಿ ಧರಿಸಿ ಮಾತಾಡುವಾಗ ತತ್ವಜ್ಞಾನದ ಗಂಧವರಿಯದವರಿಗೂ ಕೇಳುತ್ತ ನಿಲ್ಲೋಣವೆನ್ನಿಸುತ್ತದೆ.

ಅವರ ಬರಹದಲ್ಲಿಯೂ ಮಾತಿನಲ್ಲಿಯೂ ಸೂತ್ರರೂಪ ವಾಕ್ಯಗಳು ಚಿಮ್ಮುತ್ತಲೇ ಇರುತ್ತವೆ. ಅವುಗಳಲ್ಲಿ ಕೆಲವು ತುಂಬ ಪ್ರಸಿದ್ಧವಾಗಿವೆ : "ಇತಿಹಾಸವಾಗಲು ಶತಮಾನಗಳು ಬೇಕಾಗುತ್ತವೆ ; "ಸಂಪ್ರದಾಯವಾಗಲು ಇತಿಹಾಸಗಳ ಶತಮಾನಗಳು ಬೇಕಾಗುತ್ತವೆ." ಎಂದೊಮ್ಮೆ ಅವರು ಹೇಳಿದರು. "ಕವಿಗಳೂ ಪ್ರವಾದಿಗಳೂ ಸಮಿತಿಗಳಲ್ಲಿ ಸೇರುವುದಿಲ್ಲ"; ಚರಿತ್ರಾರ್ಹ ಸಮಯವೆಂದರೆ "ಎಲ್ಲ ತಲೆಗಳೂ ಗಟ್ಟಿಯಾಗಿ, ಎಲ್ಲ ದಿಂಬುಗಳೂ ಮೆತ್ತಗಾಗಿ ಇರುವ ಕಾಲ"; "ಗಾಳಿಯಲ್ಲಿ ಹಕ್ಕಿಯಂತೆ ಹಾರಲು ನಮಗೆ ಕಲಿಸುತ್ತಾರೆ; ನೀರಲ್ಲಿ ಮೀನಿನಂತೆ ಈಸಲು ಕಲಿಸುತ್ತಾರೆ; ಆದರೆ ನೆಲದ ಮೇಲೆ ಮಾನವರಾಗಿ ಬಾಳಲು ಮಾತ್ರ ಯಾರೂ ಅರಿಯರು" ಎಂದೊಮ್ಮೆ ಅವರು ಪಾಶ್ಚಾತ್ಯ ನಾಗರಿಕತೆಯ ಬಗ್ಗೆ ಹೇಳಿದ್ದರು. "ನಾವೆಲ್ಲ ಪ್ರಾಯಸ್ಥ ಹಸುಳೆಗಳು. ದೇವರು ಮಾನವಕುಲಕ್ಕೆ ಒಂದು ಬಗೆಯ ದಾದಿ" ಎಂದು ಇನ್ನೊಂದು ಸಂದರ್ಭದಲ್ಲಿ ಅವರು ಬರೆದಿದ್ದಾರೆ. "ಅಜ್ಞಾನವು ಮನುಷ್ಯನ ವಿಶೇಷ ಹಕ್ಕಲ್ಲ, ತಾನು ಅಜ್ಞಾನಿ ಎಂದು ಅರಿಯುವುದು ಅವನೊಬ್ಬನಿಗೇ ಬಂದ ಹಕ್ಕು."

ಭಾರತದ ತತ್ವಜ್ಞಾನದ ರಾಯಭಾರಿಯಾಗಿ ಅವರು ಪಾಶ್ಚಾತ್ಯಜಗತ್ತಿಗೆ ಈ ನಾಡಿನ ದರ್ಶನವನ್ನು ಅನುವಾದಿಸಿದ್ದಾರೆ. ಜಡವಾದದ ಮಧ್ಯದಲ್ಲಿ ಚೈತನ್ಯವಾದದ ದೀಪ ಹೊತ್ತಿಸಿದ್ದಾರೆ. ಅದಕ್ಕಾಗಿ ವಿಶ್ವವ್ಯಾಪಿ ಕೀರ್ತಿಗೆ ಭಾಜನರಾಗಿದ್ದಾರೆ. ಆದರೆ ಅಂತರಂಗರಲ್ಲಿ ಅವರು ತುಂಬ ವಿನೀತರು. ಎಲ್ಲ ಮನುಜರಂತೆ ತಾವೂ ದುರ್ಬಲರು—ತೀರ ಮಾನವರು ಎಂದವರು ಹೇಳುತ್ತಾರೆ. ಹೆಚ್ಚಿನ ಮಾನವರು ಆಮಿಷದಲ್ಲಿ ಆತ-ತಾಯಿಗಳೂ ಸ್ಫೂರ್ತಿಯಲ್ಲಿ ಶೂರರೂ ಆಗುತ್ತಾರೆಂದೂ ತಮ್ಮ ಹಿರಿಮೆಗೆ ತಮ್ಮ ಸುದೈವವೇ ಕಾರಣವೆಂದೂ ಹೇಳುವಷ್ಟು ಸೌಜನ್ಯ ಅವರಲ್ಲಿದೆ.

ನೀವು ಅವರೊಡನೆ ಭಿನ್ನಾಭಿಪ್ರಾಯ ತಾಳಿದರೆ ಅವರು ರೋಷಗೊಳ್ಳರು. ನಿಜವಾಗಿ ನಿಮ್ಮ ಭಿನ್ನಾಭಿಪ್ರಾಯದ ತಿರುಳನ್ನು ನಿಮಗಿಂತ ಚೆನ್ನಾಗಿ ಅವರೇ ಪ್ರತಿಪಾದಿಸುತ್ತಾರೆ. ಬ್ರಿಟಿಶ್ ತತ್ವಜ್ಞಾನಿ ಜೋಡ್ ಹೇಳುವಂತೆ, ರಾಧಾಕೃಷ್ಣನ್ನರು ಯಾರೊಡನೆ ಅಸಹಮತರಾಗಿದ್ದಾರೋ ಅವರ ದೃಷ್ಟಿಕೋಣವನ್ನು ಕೂಡ ಎಷ್ಟು ಚೆನ್ನಾಗಿ ವಿವರಿಸುತ್ತಾರೆಂದರೆ ಅವರು ಸಹಮತರಾಗಿಲ್ಲವೆಂದು ತಿಳಿಯುವದೇ ಕಷ್ಟವಾಗುತ್ತದೆ. ಅಷ್ಟು ಗಾಢವಾದದ್ದು ಅವರ ಪರೇಂಗಿತ ಪ್ರಜ್ಞೆ.

ರಾಧಾಕೃಷ್ಣನ್ ಆಡಿದರೆ ಮುತ್ತು ಉದುರಿದ ಹಾಗೆ. ಇಂಥ ವಾಕ್ಸಿದ್ಧರಿಗೆ ತಮ್ಮ ದನಿಯನ್ನೇ ಆಲಿಸುವ ಚಪಲ ಬಂದುಬಿಡುವುದು ರೂಢಿ. ಇವರು ಹಾಗಲ್ಲ. ಅವರು ನಿರರ್ಗಳವಾಗಿ

ಮಾತಾಡಬಲ್ಲರು; ಅದಕ್ಕೂ ನಿರರ್ಗಳವಾಗಿ ಮೌನವಾಗಿರಬಲ್ಲರು. ಇಂಗ್ಲಂಡಿನಲ್ಲಿ ಅವರು ಎಚ್. ಜಿ. ವೆಲ್ಸರ ಅತಿಥಿಯಾಗಿ ಭೋಜನ ಕೂಟಕ್ಕೆ ಹೋದ ಪ್ರಸಂಗವನ್ನು ಜೋಡರು ವರ್ಣಿಸಿದ್ದಾರೆ. ವೇಲ್ಸ್, ಜೋಡ್ ಮತ್ತು ವಿಜ್ಞಾನ ಲೇಖಕ ಜೆ. ಡಬ್ಲ್ಯು ಸುಲಿವಾನ್, ಮತ್ತು ರಾಧಾಕೃಷ್ಣನ್ ಈ ನಾಲ್ಕೇ ಜನ ಅಲ್ಲಿದ್ದವರು. ವಿಜ್ಞಾನ ಜಗತ್ತಿನ ಸ್ಥಿತಿ, ನಾಗರಿಕತೆಯ ಅಧಃಪತನ ಮೊದಲಾದ ವಿಚಾರಗಳು ಚರ್ಚಿಸಲ್ಪಟ್ಟವು. ರಾಧಾಕೃಷ್ಣನ್ ಏನನ್ನೂ ತಿನ್ನದೆ, ನೀರನ್ನಷ್ಟೇ ಕುಡಿಯುತ್ತ ಆಲಿಸುತ್ತಿದ್ದರು. ಉದ್ದಕ್ಕೂ ಅವರು ಮೌನವಹಿಸಿದ್ದರು. ಕೇಳಿದಾಗ ಚುಟುಕಾಗಿ ಖಚಿತವಾಗಿ ಉತ್ತರಿಸುತ್ತಿದ್ದರು. ಇಂಥ ವಾಗ್ಮಿ ಅಂದು ವಹಿಸಿದ ಮೌನವು ಅವರು ಮಾತಾಡಿದ್ದರೆ ಆಗಬಹುದಾದ್ದಕ್ಕಿಂತ ಹೆಚ್ಚು ಪ್ರಭಾವಶಾಲಿಯಾಗಿತ್ತು ಎಂದು ಜೋಡ್ ಹೇಳಿದ್ದಾರೆ.

ಆರಾಧಕರ ತಂಡದಿಂದ ಬಳಸಲ್ಪಟ್ಟಿರುವ ಅವರಲ್ಲಿ ಸಹಜವಾಗಿಯೆ ಸ್ವಾಭಿಮಾನ ಬಹಳವಾಗಿದೆ. ತಮ್ಮನ್ನು ಮಹಾಪುರುಷನೆಂದೊಪ್ಪದವರು ದಡ್ಡರಿರಬೇಕೆಂಬ ಭಾವವನ್ನು ಅವರ ಚರ್ಯೆಯಿಂದ ಅರ್ಥಮಾಡಿಕೊಳ್ಳಬಹುದು. ಆದರೆ ರಾಧಾಕೃಷ್ಣನ್ನರ ತಿರಸ್ಕಾರ ಕೂಡ ತತ್ವಜ್ಞಾನದಿಂದ ಉದಾತ್ತೀಕೃತವಾಗಿರುತ್ತದೆ.

ರಾಧಾಕೃಷ್ಣನ್ನರು ಧಾರ್ಮಿಕರು; ಆದರೆ ಸಾಮಾನ್ಯವಾದ ಅರ್ಥದಲ್ಲಲ್ಲ. ವಿವೇಕಕ್ಕೆ ರಜಾ ಕೊಡಬೇಕೆನ್ನುವುದು ಧರ್ಮವಾಗದು ಎನ್ನುತ್ತಾರವರು. ನಮ್ಮ ಸಂಶಯ ಹೆಚ್ಚಿದಷ್ಟೂ ಧಾರ್ಮಿಕತ್ವ ಹೆಚ್ಚುತ್ತದೆ. ವಿವೇಕದಿಂದಲೇ ದೇವರೆಂದರೆ ಕೆಲವರು ಹೇಳುವ ಹಾಗೆ ಒಬ್ಬ ಭಾರಿ ಪತ್ತೇದಾರಿ, ಅಥವಾ ನಿರಂಕುಶ ಸರ್ವಾಧಿಕಾರಿ ಅಥವಾ ಉದಾತ್ತೀಕೃತ ಶಾಲಾ ಮಾಸ್ತರನಲ್ಲ ಎಂದು ನಾವರಿಯ ಬಲ್ಲೆವು— ಎಂದು ಅವರು ಸಾರುತ್ತಾರೆ.

ಧಾರ್ಮಿಕ ಅನುಭೂತಿಯಲ್ಲಿ ಕ್ಲೇಶ ಸಹನೆಯ ಮಹತ್ವವನ್ನವರು ಒತ್ತಿ ಹೇಳುತ್ತಾರೆ. "ನೋಯುವ ಹೃದಯವೇ ಪ್ರೀತಿಸುವ ಹೃದಯ." ಒಮ್ಮೆ ಒಬ್ಬ ಸಂತ ಸ್ವರ್ಗಕ್ಕೆ ಹೋದನಂತೆ. ಅವನಿಗೆ ಅಲ್ಲಿ ಒಂದು ಬಂಗಾರದ ಕಿರೀಟವಿತ್ತರು. ಆದರೆ ಉಳಿದ ಸಂತರ ಕಿರೀಟಗಳೆಲ್ಲ ರತ್ನಖಚಿತವಾಗಿದ್ದರೆ ಇವನದು ಮಾತ್ರ ಬರಿ ಬಂಗಾರದ್ದಾಗಿತ್ತು. "ನನಗೇಕೆ ರತ್ನಗಳಿಲ್ಲ?" ಎಂದಾತ ದೇವತೆಗಳನ್ನು ಕೇಳಿದ. "ನೀನು ಅವನ್ನು ಗಳಿಸಲಿಲ್ಲ. ರತ್ನಗಳೆಂದರೆ ಸಂತರು ಬದುಕಿದ್ದಾಗ ಸುರಿಸಿದ ಕಣ್ಣೀರ ಹನಿಗಳು. ನೀನು ಕಣ್ಣೀರು ಬಿಡಲಿಲ್ಲ" ಎಂದುತ್ತರ ಬಂತು. ಈ ಕಥೆಯನ್ನು ರಾಧಾಕೃಷ್ಣನ್ ಪುನರುಚ್ಚರಿಸುತ್ತಿರುತ್ತಾರೆ.

ರಾಧಾಕೃಷ್ಣನ್ನರಿಗೆ ಸ್ವಂತಕ್ಕಾಗಿ ಕಣ್ಣೀರು ಸುರಿಸುವ ಅವಕಾಶ ವಿಶೇಷವಾಗಿ ಬಂದಿರಲಿಕ್ಕಿಲ್ಲ. ಸುದೀರ್ಘ ಸುಖದಾಂಪತ್ಯದ ನಂತರ ಈಚೆಗಷ್ಟೇ ಅವರ ಪತ್ನಿ ತೀರಿಕೊಂಡರು. ಮೊಮ್ಮಕ್ಕಳೊಡನೆ ಆಡಿ ಈ ತತ್ವಜ್ಞಾನಿ ಸಂಸಾರದ ನಿರ್ವಿಕಾರ ಆನಂದವನ್ನೂ ಅನುಭವಿಸಿದ್ದಾರೆ. ದೇಶಕ್ಕಾಗಿ ಅವರು ಸಲ್ಲಿಸಿದ ಸೇವೆಗೆ ಉಚ್ಚ ಪದವಿಯೂ ಭಾರತರತ್ನ ಪ್ರಶಸ್ತಿಯೂ ಬಂದಿದೆ. ಅವರಿಗೆ ಅಂತಾರಾಷ್ಟ್ರೀಯ ಕೀರ್ತಿಯಿದೆ. ಆದರೆ ಮಾನವತೆಗಾಗಿ ಅವರು ಕಣ್ಣೀರು ಸುರಿಸಿದ್ದಾರೆ. ಅವರ ಕಿರೀಟ ರತ್ನಖಚಿತವಾಗದೆ ಇರದು. ★





# ಜಯಪುರದ ದಿವಾನರು

ಆನಂದ ಪ್ರಕಾಶ ಜೈನ

ಆ ಇಂಗ್ಲೀಷ್ ಮನುಷ್ಯ ದಿವಾನರ ಎದುರಿನಲ್ಲಿ ಪಿಸ್ತೂಲನ್ನಿಟ್ಟು "ದಿವಾನಜಿ, ಇದು ಮೃತ್ಯುವಿನ ದೂತ" ಎಂದ.

"ನಾವು ಈ ಜಗತ್ತಿಗೇ ಮೃತ್ಯುಲೋಕವೆನ್ನುತ್ತೇವೆ, ಕಪ್ತಾನ ಸಾಹೇಬ. ಇಲ್ಲಿ ಪ್ರತಿಯೊಂದು ವಸ್ತುವೂ ಯಮನ ರಾಜದೂತನಾಗಿದೆ. ಈ ರಾಜದೂತರೊಂದಿಗೇ ನಾವು ಜೀವನವಿಡೀ ಕೂಟನೀತಿಯ ಆಟಗಳನ್ನಾಡುತ್ತೇವೆ. ಆದರೆ ಇವು ನಿಮಿತ್ತ ಮಾತ್ರ. ಮೃತ್ಯು ಎಲ್ಲಿಂದಲೋ, ಎಲ್ಲಿ ನಾವು ಅದರ ಬೀಜವನ್ನು ಬಿತ್ತಿಬಂದಿರುವೆವೊ ಅಲ್ಲಿಂದ ಬರುತ್ತದೆ," ದಿವಾನ ಅಮರಚಂದಜಿ ನುಡಿದರು.

ಆ ಇಂಗ್ಲೀಷ್ ಕಪ್ತಾನ ಒಂದೆರಡು ನಿಮಿಷ ದಿವಾನ ಅಮರಚಂದರನ್ನು ತನ್ನ ದೃಷ್ಟಿಯಿಂದ ಅಳೆದ. "ನಾನು ಈಗಲೇ ಈ ಪಿಸ್ತೂಲನ್ನು ಹಾರಿಸಿದರೆ?" ಆತ ಮುಗುಳ್ನಗುತ್ತ ಹೇಳಿದ.

"ಏನಾದರೂ ಋಣವಿದ್ದುದಾದರೆ ಅದು ಮುಟ್ಟಿದಂತಾಗುವುದು," ದಿವಾನ ಅಮರಚಂದಜಿ ಉತ್ತರವಿತ್ತರು.

ಕಪ್ತಾನನಾಗ ಕುತೂಹಲದಿಂದ "ಅಂದರೆ, ನೀವು ನಿಮ್ಮನ್ನುಳಿಸಿಕೊಳ್ಳಲು ಏನೂ ಹೋರಾಟ ನಡೆಸುವುದಿಲ್ಲವೆ?" ಎಂದು ಕೇಳಿದ.

'ಸಾರಿಕಾ' ದಿಂದ

"ಋಣ ತೀರಿಸುವಾಗ ಹೋರಾಟವೆಲ್ಲಿಂದ ಬಂತು?"

"ಆದರೆ ನಿಮ್ಮ ಮಿತ್ರರೊಬ್ಬರು ನಿಮ್ಮ ಋಣ ತೀರಿಸಲು ಬಯಸಿದರೆ?"

"ಭಾವನೆಯ ಬಲದಿಂದಲೆ ಆತನ ಋಣ ತೀರುವುದು. ನಾನು ವಸ್ತುವಿನ ರೂಪದಲ್ಲಿ ಅದನ್ನು ಪಡೆದು ಹೊಸ ಕರ್ಮದ ಬಂಧನವನ್ನೇಕೆ ಹಾಕಿಕೊಳ್ಳಲಿ?" ದಿವಾನಜಿ ನುಡಿದರು.

"ಆದರೆ ನೀವು ನಿಮ್ಮ ಸಂಬಳವನ್ನು ರಾಜನಿಂದ ಪಡೆಯುತ್ತೀರಲ್ಲ!"

"ಇದು ದೇಹದ ಬಂಧನ, ಕಪ್ತಾನ ಸಾಹೇಬ," ದಿವಾನಜಿ ದುಃಖದಿಂದ ಹೇಳಿದರು.

ಕಪ್ತಾನ ಸ್ಮಿಥ್ ವೇದಾಂತಿಯೇನೂ ಅಲ್ಲ. ಆತನ ಜೀವನವೇನೂ ಈ ಚೌಕಟ್ಟಿನಲ್ಲಿ ನಡೆದಿರಲಿಲ್ಲ. ತತ್ತ್ವ-ವೇದಾಂತಗಳು ಬುದ್ಧಿಬಲದ ಆಟವೆಂದಾತ ಭಾವಿಸಿದ್ದ. ಆತ ಚರ್ಚೆಯನ್ನು ಮುಗಿಸುತ್ತ ಎದ್ದು ನಿಂತು, "ದಿವಾನಜಿ, ಮೃತ್ಯು ತಾನೇ ಎದುರು ಬಂದರೂ ನಾನೇನೂ ಅದರೊಡನೆ ಹೋರಾಡದೆ ಇರುವವನಲ್ಲ" ಎಂದ.

ಪಿಸ್ತೂಲು ಮತ್ತೆ ಕಪ್ತಾನನ ಕಿಸೆ ಸೇರುವುದನ್ನು ನೋಡುತ್ತಿದ್ದ ದಿವಾನಜಿ, "ಅದರಿಂದೇನೂ ಲಾಭವಾಗದು. ಮೃತ್ಯು ಬಂದಾಗ ಅದನ್ನು ಸ್ವಾಗತಿಸುವುದರಿಂದ ಮನುಷ್ಯನಿಗೆ ಅಪಾರ ಶಾಂತಿ ದೊರೆಯುವುದು. ಅದರಿಂದ ಅವನ ಎಲ್ಲ ಕರ್ಮಬಂಧನಗಳು ಹರಿದು ಹೋಗುವವು" ಎಂದರು.

"ಇದರ ಎಕ್ಸ್‌ಪೆರಿಮೆಂಟ್ (ಪ್ರಯೋಗ) ಬಹು ಕುತೂಹಲಕಾರಿಯಾಗಬಹುದು" ಎನ್ನುತ್ತ ಕಪ್ತಾನ ದಿವಾನಜಿಯ ಹಸ್ತಾಂದೋಲನ ಮಾಡಿದ.

ಕಪ್ತಾನನ ಕೈಯನ್ನು ತಮ್ಮ ಎರಡೂ ಕೈಗಳಿಂದ ಹಿಡಿದು ದಿವಾನಜಿ, "ನಿಸ್ಸಂದೇಹವಾಗಿ. ಆದರೆ ಈಗ ನಿಮ್ಮ ಜೊತೆಯಲ್ಲಿ ನಿಮ್ಮ ಶಿಬಿರದವರೆಗೆ ಯಾರನ್ನಾದರೂ ಕಳಿಸಿ ಕೊಡಲೆ? ಕತ್ತಲೆ ಹೆಚ್ಚುತ್ತಲಿದೆ. ಇಂದೇ ಈ ಪ್ರಯೋಗ ಆಗುವುದು ಬೇಡವಲ್ಲ," ಎಂದರು.

ಪಿಸ್ತೂಲಿದ್ದ ಕಿಸೆಯನ್ನು ಬಡಿಯುತ್ತ ಕಪ್ತಾನ ಹೇಳಿದ: "ಕಾಳಜಿ ಮಾಡಬೇಡಿ. ದಿವಾನಜಿ, ಮೃತ್ಯುವಿನ ದೂತ ನನ್ನ ಕಿಸೆಯಲ್ಲಿದೆ."

ದಿವಾನಜಿ ಕಂಪೌಂಡಿನ ಬಾಗಿಲವರೆಗೂ ಕಪ್ತಾನ ಸ್ಮಿಥ್‌ನ ಜೊತೆ ನಡೆದರು. ಕಪ್ತಾನ ಹೋದ ಬಳಿಕ ಅವರು ಕೆಲ ಹೊತ್ತು ವಿಚಾರ ಮಗ್ನರಾಗಿ ನಿಂತುಕೊಂಡರು. ಆಮೇಲೆ ಮೆಲ್ಲಗೆ ತಿರುಗಿ ಬಂದು ತಮ್ಮ ಆಸನದ ಮೇಲೆ ಕುಳಿತರು. ಅದೇ ಹೊಸತಾಗಿ ಕೆಲಸಕ್ಕೆ ಸೇರಿದ್ದ ಸೇವಕನೊಬ್ಬ ಬಂದು ಕೈಮುಗಿದ.

"ಸರಕಾರ, ಊಟಕ್ಕೇಳಿ. ಒಡತಿ ಕಾಯುತ್ತಿದ್ದಾರೆ."

ದಿವಾನಜಿ ಮಂದಹಾಸದಿಂದ "ಹುಚ್ಚಾ, ಈ ಮನೆಯಲ್ಲಿ ರಾತ್ರಿ ಊಟ ಮಾಡುವುದಿಲ್ಲ ಎಂಬುದೂ ಗೊತ್ತಿಲ್ಲವೆ? ಬಹುಶಃ ನಿನಗೆ ಊಟ ಬಡಿಸಲು ಕಾಯುತ್ತಿರಬೇಕು" ಎಂದರು.

ಫಿರಂಗಿಯೊಡನೆ ದಿವಾನಜಿ ಊಟ ಮಾಡುವಂತಿರಲಿಲ್ಲ. ಅವನನ್ನು ಕಳಿಸುವಷ್ಟರಲ್ಲಿ ರಾತ್ರಿಯಾಗಿ ಹೋಯಿತು. ಯಜಮಾನರ ಊಟ ತಪ್ಪಿತಲ್ಲ ಎಂದು ಸೇವಕ ಕೆಲ ನಿಮಿಷ ವಿವಂಚನೆಯಿಂದ ನಿಂತ. ಆಮೇಲೆ "ತಪ್ಪಾಯಿತು. ಕ್ಷಮಿಸಬೇಕು" ಎಂದ.

"ಹೋಗು. ಚಿಕ್ಕ ಯಜಮಾನರನ್ನು ಬರ ಹೇಳು."

ತುಸು ಹೊತ್ತಿನಲ್ಲಿ ದಿವಾನರ ಹಿರಿಯ ಮಗ ಬಂದ. ಇಪ್ಪತ್ತೈದು-ಇಪ್ಪತ್ತಾರು ವಯಸ್ಸಿರಬೇಕು ಆತನಿಗೆ. ಅವನನ್ನು ಬಳಿಯಲ್ಲಿ ಕೂಡ್ರಿಸಿಕೊಂಡು ದಿವಾನಜಿ, "ಈ ಮನೆಯಲ್ಲಿ ಕೆಲ ನೌಕರರು ರಾತ್ರಿ ಊಟ ಮಾಡುತ್ತಾರೆ. ಅದನ್ನು ಬಂದುಮಾಡು. ಎಲ್ಲರೂ ಹಗಲಿನಲ್ಲಿಯೆ ಊಟ ಮಾಡಲಿ" ಎಂದರು.

"ಒಳ್ಳೇದು. ಅಮ್ಮನಿಗೆ ತಿಳಿಸುತ್ತೇನೆ."

ಮಗನ ಕಾರ್ಯತತ್ಪರತೆಯಲ್ಲಿ ತಂದೆಗೆ ನಂಬಿಕೆಯಿತ್ತು. "ಸರಿ. ದಿವಾನ ಅಮರಚಂದರು ಇನ್ನು ಮುಂದೆ ಸರಕಾರದ ಬೊಕ್ಕಸದಿಂದ ವೇತನ ಸ್ವೀಕರಿಸುವುದಿಲ್ಲ ಎಂದು ಒಂದು ಮನವಿಯನ್ನು ರಾಜಾಸಾಹೇಬರ ಹೆಸರಿನಲ್ಲಿ ಖಜಾಂಚಿಯ ಹತ್ತಿರ ಬರೆಸು," ಎಂದರು ದಿವಾನಜಿ.

ತಂದೆಯ ತ್ಯಾಗವೃತ್ತಿಯ ಪರಿಚಯವಿದ್ದ ಮಗ "ಸರಿ. ತಾವು ನಿಶ್ಚಿಂತರಾಗಿರಿ ಪಿತಾಜಿ" ಎಂದ.

ಮಗನನ್ನು ಸಂತೋಷದಿಂದ ನೋಡಿ ದೀರ್ಘ ಶ್ವಾಸವನ್ನೆಳೆದುಕೊಂಡು ದಿವಾನರು, "ಚಮನ ಲಾಲ ಲೋಹೇವಾಲರ ಮನೆಯನ್ನು ಬಲ್ಲಿಯಷ್ಟೆ?" ಎಂದು ಕೇಳಿದರು.

"ಬಲ್ಲೆ."

"ಅವರ ಮನೆಗೆ ನೂರು ಉಂಡೆಗಳ ಬುಟ್ಟಿಯನ್ನು ಕಳಿಸು. ಪ್ರತಿಯೊಂದು ಉಂಡೆಯಲ್ಲಿ ಒಂದೊಂದು ಅಶರ್ಫಿ ಇರಲಿ. ಅವರ ಉದ್ಯೋಗ ದಂಧೆಗಳೆಲ್ಲ ಹಾಳಾಗಿವೆ. ಕುಲೀನ ಮನುಷ್ಯ. ಸಂಸಾರಶಕಟವನ್ನು ಎಳೆಯಲಾರದವನಾಗಿದ್ದಾನೆ. ಆತನಿಗೆ ದೈವೀ ಸಹಾಯದ ಅಗತ್ಯವಿದೆಯೆಂದೆನಿಸುತ್ತದೆ. ದೈವವು ಸಂಯೋಗವಶಾತ್ ನಮ್ಮಲ್ಲಿಗೆ ಧನವನ್ನು ಕಳಿಸಿದೆ."

ಮಗ ಫತೇಹಲಾಲನಿಗೆ ತಂದೆ ಚಮನಲಾಲರ ಕಷ್ಟವನ್ನು ಕಣ್ಣಾರೆ ಕಂಡಿರಬೇಕು ಎಂದು ಅನಿಸಿತು.

"ಇನ್ನು ನೀನು ಹೋಗು. ನಾನು ಒಂದಿಷ್ಟು ರಾಜಕಾರ್ಯದ ವ್ಯವಹಾರವನ್ನು ನೋಡಿಕೊಳ್ಳುವೆ. ನಾಳೆ ನಿನಗೆ ಎಲ್ಲವನ್ನೂ ತಿಳಿಸಿ ಹೇಳುವೆ. ಎಲ್ಲವೂ ನಾಳೆಗೇ ಮುಗಿಯಬೇಕು."

"ಜೀ," ಎಂದು ಫತೇಹಲಾಲ ಎದ್ದು ನಿಂತ. ಅವನ ದೃಷ್ಟಿ ಬಾಗಿಲ ಮೇಲೆ ಬಿದ್ದಾಗ ಆತ ಕೈ ಮುಗಿಯುತ್ತ ಆಶ್ಚರ್ಯದಿಂದ, "ದೊಡ್ಡಪ್ಪಾ, ಏನಿದು? ಇಷ್ಟು ರಾತ್ರಿ ಇಲ್ಲಿಗೆ ಬರುವ ಶ್ರಮವನ್ನೇಕೆ ವಹಿಸಿದಿರಿ? ನನಗೆ ಹೇಳಿಕಳಿಸಬೇಕಿತ್ತು. ಬರುತ್ತಿದ್ದೆ," ಎಂದ.

ದಿವಾನ ಅಮರಚಂದಜಿ ಕೂಡ ಅತ್ತ ನೋಡಿದರು. ಬಾಗಿಲಲ್ಲಿ ದಿವಾನ ಝೂಥಾರಾಮಜಿ ನಿಂತಿದ್ದರು. ಅವರು ಅಲ್ಲಿಂದಲೇ "ಈಗ ಕೆಲ ಹೊತ್ತಿನ ಹಿಂದೆ ಕಪ್ತಾನ್ ಸ್ಮಿಥ್ ನಿಮ್ಮನ್ನು ಬೀಳ್ಕೊಂಡು ಹೋದನಲ್ಲವೆ? ಯಾರೋ ಹಿಂದಿನಿಂದ ಬಂದು ಅವನ ಬೆನ್ನಲ್ಲಿ ಚಾಕುವಿನಿಂದ ಇರಿದರು," ಎಂದು ಹೇಳಿ ತಾನೇ ಈ ಅಪರಾಧಗೈದವನಂತೆ ತಲೆ ತಗ್ಗಿಸಿದರು.

"ಆಂ! ಚಾಕುವಿನಿಂದ ಇರಿದರೆ? ಬಹಳ ಕೆಟ್ಟದ್ದಾಯಿತು," ಅಮರಚಂದಜಿ ಹೇಳಿದರು.

ಒಂದೆರಡು ನಿಮಿಷ ಎಲ್ಲರೂ ದಂಗಾಗಿ ನಿಂತಿದ್ದರು. ಆ ಮೇಲೆ ಅಮರಚಂದಜಿ ವಾಸ್ತವಿಕ ಪ್ರಪಂಚಕ್ಕೆ ಬಂದು, "ಹೆಣ ಎಲ್ಲಿದೆ?" ಎಂದು ಕೇಳಿದರು.

"ರಸ್ತೆಯ ಮೇಲಿಂದ ಎತ್ತಿ ಒಳಗೆ ತರಿಸಿದ್ದೇನೆ. ರಾಜಾಸಾಹೇಬರಿಗೆ ತಿಳಿಸುವ ಮೊದಲು ನಿಮಗೆ ತಿಳಿಸುವುದು ಯೋಗ್ಯವೆಂದೆನಿಸಿತು," ದಿವಾನ ಝೂಥಾರಾಮಜಿ ಹೇಳಿದರು.

"ಒಳ್ಳೇದು ಮಾಡಿದಿರಿ," ದಿವಾನ ಅಮರಚಂದಜಿ ಅಸಂತೋಷದ ಉಸಿರುಬಿಡುತ್ತ ಹೇಳಿದರು. "ಕೊಲೆಪಾತಕಿಯ ಶೋಧವನ್ನು ಆದಷ್ಟು ಬೇಗ ಮಾಡಬೇಕು ಹೆಣದೊಂದಿಗೆ ಅಪರಾಧಿಯನ್ನೂ ಇಂಗ್ಲೀಷರ ಕೈಗೆ ಒಪ್ಪಿಸಬೇಕು."

"ಅಪರಾಧಿಯ ಶೋಧಕ್ಕಾಗಿ ಒಂದು ತಂಡವನ್ನೂ ನೇಮಿಸಿಯಾಗಿದೆ. ಈ ಕೊಲೆಯಿಂದ ರಾಜಕೀಯಸಂಕಟ ಪ್ರಾಪ್ತವಾಗದಿದ್ದರೆ ಸಾಕು."

"ನಿಜ. ಅನುಚಿತ ಕಾರ್ಯ ನಡೆದುಬಿಟ್ಟಿದೆ. ತಮ್ಮ ಬುದ್ಧಿಸಾಮರ್ಥ್ಯದ ಮೇಲೆ ಇಡೀ ಜಯಪುರದ ವಿಶ್ವಾಸವಿದೆ. ಅಯ್ಯೋ! ನನ್ನಿಂದ ಈ ಒಂದಿಷ್ಟು ಅಲಕ್ಷ್ಯವಾಗಿರದಿದ್ದರೆ...... ಆದರೆ ಆತ ಜೊತೆಯಲ್ಲಿ ಯಾರನ್ನೂ ಕರೆದೊಯ್ಯಲು ಒಪ್ಪಲಿಲ್ಲ. ನಾನು ಒತ್ತಾಯದಿಂದ ಕಳಿಸದಿ-

ದ್ದುದೇ ತಪ್ಪಾಯಿತು. ಕಪ್ತಾನ ಸ್ಮಿಥ್ ಎಂಥ ಒಳ್ಳೆಯ ಮನುಷ್ಯ! ಹೊಸ ಹೊಸ ಪ್ರಯೋಗಗಳನ್ನು ಮಾಡುವಲ್ಲಿ ಇವನಂತೆ ಹುಮ್ಮಸವಿರುವ ಜನರು ನೂರಾರು ವರ್ಷಗಳಲ್ಲಿ ಒಮ್ಮೆ ಹುಟ್ಟುತ್ತಾರೆ." ದಿವಾನ ಅಮರಚಂದಜಿ ಧೋತರದ ಸೆರಗಿನಿಂದ ಕಣ್ಣೊರಸಿಕೊಂಡರು. ಅದರಿಂದ ಕಣ್ಣೀರು ಹೆಚ್ಚಾಯಿತೇ ಹೊರತು ನಿಲ್ಲಲಿಲ್ಲ. ಇದು ಕಪ್ತಾನ ಸ್ಮಿಥ್‌ನ ಪ್ರಯೋಗವಾಗಿತ್ತು ಎಂಬ ಮಾತು ಪುನಃಪುನಃ ಅವರ ಅಶ್ರುಕೋಶವನ್ನು ಒತ್ತುತ್ತಿತ್ತು.

ಅವರು ಅಸ್ಪಷ್ಟ ಸ್ವರದಲ್ಲಿ ದಿವಾನ ಝೂಥಾರಾಮರು ನಗರದಲ್ಲಿ ಗಡಬಿಡಿಯಾಗದಂತೆ ಏರ್ಪಾಡು ಮಾಡಬೇಕು ಎಂದು ಹೇಳಿದರು. ದಿವಾನ ಝೂಥಾರಾಮರನ್ನು ಕಳಿಸಿ ಫತೇಹಲಾಲ ಬಂದಾಗ ಅಮರಚಂದರು ಎರಡೂ ಕೈಗಳನ್ನು ಗದ್ದಕ್ಕೆ ಹಚ್ಚಿಕೊಂಡು ಕುಳಿತಿದ್ದರು. ಅದು ಅವರು ವಿಚಾರ ಮಾಡುವಾಗಿನ ಮುದ್ರೆಯಾಗಿತ್ತು. ತುಸು ಹೊತ್ತಿನಲ್ಲಿ ಅವರು ಕಣ್ಣು ತೆರೆದು ತಾವಿನ್ನು ಮಲಗುತ್ತೇನೆಂದು ಹೇಳಿದರು. ಅದು ಮಗನಿಗೂ ಇನ್ನು ಹೋಗಿ ಮಲಗಿಕೊ ಎಂಬ ಆದೇಶವೂ ಆಗಿತ್ತು.

ಫತೇಹಲಾಲ ಹೋದ. ಆದರೆ ರಾತ್ರಿಯಿಡೀ ಆತನಿಗೆ ಸರಿಯಾಗಿ ನಿದ್ದೆ ಬರಲಿಲ್ಲ. ಆತ ಎರಡು ಮೂರು ಸಲ ಎದ್ದು ಬಂದು ತಂದೆ ಸರಿಯಾಗಿ ನಿದ್ದೆ ಮಾಡುತ್ತಿದ್ದಾರೆಯೆ ಎಂದು ನೋಡಿಕೊಂಡು ಹೋದ.

ಮರುದಿನ ಆತ ತಂದೆಯ ಆದೇಶವನ್ನು ಅಕ್ಷರಶಃ ಪಾಲಿಸಿದ. ರಾಜಾ ಜಗತ್‌ಸಿಂಹರು ನಗರದ ಪ್ರಮುಖರನ್ನು ಕರೆಸಿ ಆಪ್ತಾಲೋಚನೆ ಮಾಡಿದರು. ನಗರದಲ್ಲಿ ಅಲ್ಲಲ್ಲಿ ಶಿಪಾಯಿಗಳನ್ನು ಕಾವಲಿಗೆ ನಿಲ್ಲಿಸಿದರು. ನಗರದಲ್ಲಿ ಅಶಾಂತಿ ಹಬ್ಬಲಿಲ್ಲ. ಜನ "ಏನಾದೀತು?" ಎಂದು ತರ್ಕವಿತರ್ಕ ನಡೆಸತೊಡಗಿದರು.

ಕೊಲೆಯ ಮೂರನೆಯ ದಿನ ಪೊಲಿಟಿಕಲ್ ಏಜಂಟ್ ಸ್ವತಃ ಬಂದ. ಆತ ಬಂದವನೇ ರಾಜಾಸಾಹೇಬ ಮತ್ತು ದಿವಾನರೊಡನೆ ಖಾಸಗಿಯಾಗಿ ಮಾತನಾಡಲು ಬಯಸಿದ. ಏಜಂಟ್ ಬಲು ವಿನಯಿಯಾಗಿದ್ದ. ಅವನ ಮುಖದ ಮೇಲಾಗಲಿ, ಅವನ ಪರಿವಾರದವರ ಮುಖದ ಮೇಲಾಗಲಿ ಕ್ರೋಧ, ಅಸಮಾಧಾನಗಳ ಲಕ್ಷಣವಿರಲಿಲ್ಲ. ರಾಜಾಸಾಹೇಬರ ಆತಿಥ್ಯವನ್ನು ಮಿತ್ರನಂತೆ ಪೊಲಿಟಿಕಲ್ ಏಜಂಟ್ ಸ್ವೀಕರಿಸಿದ.

ಮಧ್ಯಾಹ್ನ ರಾಜಾಸಾಹೇಬ, ಅವರ ಇಬ್ಬರು ದಿವಾನರು ಮತ್ತು ಪೊಲಿಟಿಕಲ್ ಏಜಂಟರ ಸಭೆ ಸೇರಿತು. ರಾಜಾಸಾಹೇಬರು ದುಃಖಪೂರ್ಣ ಶಬ್ದಗಳಲ್ಲಿ ತಮ್ಮ ಪಶ್ಚಾತ್ತಾಪವನ್ನು ಪ್ರಕಟಿಸಿದರು. ಪೊಲಿಟಿಕಲ್ ಏಜಂಟ ಅದನ್ನು ಶಾಂತಚಿತ್ತದಿಂದ ಕೇಳಿಕೊಂಡು ಹೇಳಿದ: "ಕ್ಯಾಪ್ಟನ್ ಸ್ಮಿಥ್‌ರ ಕೊಲೆಯಿಂದ ಕಂಪನಿ ಸರಕಾರಕ್ಕೆ ತುಂಬ ದುಃಖವಾಗಿದೆ. ಜಯಪುರ ಸಂಸ್ಥಾನದಲ್ಲಿ ಈ ಬಗೆಯ ಅರಾಜಕತೆಯಿರುವುದರಿಂದ ಕಂಪನಿ ಸರಕಾರಕ್ಕೆ ಗಂಡಾಂತರವಿದೆ. ಪ್ರತಿಯೊಬ್ಬ ಆಫೀಸರನ ಜೀವಕ್ಕೆ ಗಂಡಾಂತರವಿದೆ. ಆದ್ದರಿಂದ ಗವರ್ನರ ಜನರಲ್ಲರ ಆದೇಶ ಬರುವವರೆಗೂ ಜಯಪುರದಲ್ಲಿ ಬ್ರಿಟಿಶ್ ಸೈನ್ಯದ ಅಮಲು ಇರಬೇಕು ಎಂದು ಸಾಂಗಾನೇರಿನ ನಮ್ಮ ಸೈನ್ಯಶಿಬಿರದ ಬೋರ್ಡು ನಿರ್ಧರಿಸಿದೆ."

"ಇದು ಸಾಧ್ಯವಿಲ್ಲ," ದಿವಾನ ಝೂಥಾರಾಮಜಿ ಹುಬ್ಬೇರಿಸುತ್ತ ನುಡಿದರು. "ಜಯಪುರದಲ್ಲಿ ನಮಗೇನೂ ಅರಾಜಕತೆ ಕಾಣಿಸುವುದಿಲ್ಲ. ಈಗ ಮೂರು ದಿನಗಳಾದವು. ಒಂದೇ ಒಂದು ಅತ್ಯಾಚಾರದ ಸುದ್ದಿ ಬಂದಿಲ್ಲ. ಕಪ್ತಾನಸಾಹೇಬರ ಈ ಅಕಾಲ ಮೃತ್ಯುವಿನಿಂದ ನಮಗೂ ದುಃಖವಾಗಿದೆ. ಆದರೆ ಜಯಪುರ ರಾಜ್ಯವನ್ನು ಆರೋಪಿಯನ್ನಾಗಿ ಮಾಡುವುದು ಸಾಧ್ಯವಿಲ್ಲ. ಯಾವನೊ ಒಬ್ಬ ತಲೆ ತಿರುಕನ ಕಾರ್ಯಕ್ಕಾಗಿ ಇಡೀ ಜಯಪುರವನ್ನು ಬಳಸಂಚಿನ ಆರೋಪಕ್ಕೆ ಗುರಿಮಾಡಲು ಬಾರದು."

"ನೀವು ಹೇಳುವುದು ಸರಿ. ನಿಮ್ಮ ಅಭಿಪ್ರಾಯವನ್ನು ನಾವು ಮನ್ನಿಸುತ್ತೇವೆ. ಆದರೆ ಆ ತಲೆ ತಿರುಕ ಕೊಲೆಪಾತಕಿ ಎಲ್ಲಿದ್ದಾನೆ? ಆತನನ್ನು ನಮಗೆ ಒಪ್ಪಿಸಿರಿ. ಇದರಲ್ಲಿ ಯಾರ ಯಾರ ಅಂಗ ಏದೆ ಎಂದು ನಾವು ಅವನನ್ನು ಕೇಳುತ್ತೇವೆ. ಆಗ ಹಾಲು ಹಾಲಾಗುವುದು, ನೀರು ನೀರಾಗುವುದು, " ಪೊಲಿಟಿಕಲ್ ಏಜೆಂಟ ಹೇಳಿದ.

"ಅಪರಾಧಿಯ ಶೋಧ ನಡೆದಿದೆ. ಬೇಗನೆ ಆತನನ್ನು ನಿಮಗೆ ಒಪ್ಪಿಸುವೆವು ಎಂದು ನಮಗೆ ವಿಶ್ವಾಸವಿದೆ," ರಾಜಾ ಜಗತ್‌ಸಿಂಹರು ಹೇಳಿದರು.

"ಸರಿ. ಅಪರಾಧಿ ನಮ್ಮ ಕೈಗೆ ಬರುವ ವರೆಗೂ ಜಯಪುರ ನಗರದ ಮೇಲೆ ಸೈನ್ಯದ ಪ್ರಭುತ್ವ ನಡೆಯಬೇಕು ಎಂದು ನಮ್ಮ ಬೋರ್ಡು ನಿಶ್ಚಯಿಸಿದೆ."

"ಬೋರ್ಡಿನ ಆಜ್ಞೆ ಎಲ್ಲಿದೆ?" ದಿವಾನ ಅಮರಚಂದಜಿ ಮೆಲ್ಲಗೆ ಕೇಳಿದರು.

ಏಜಂಟ ತನ್ನೊಬ್ಬ ಆಫೀಸರನತ್ತ ಕೈಚಾಚಿದ. ಆತ ಏಜಂಟನ ಕೈಗೊಂದು ಕಾಗದದ ಸುರುಳಿಯನ್ನಿತ್ತ. ಏಜಂಟ ಬಲು ಗೌರವದಿಂದ ಅದನ್ನು ದಿವಾನ ಅಮರಚಂದರ ಕೈಗಿತ್ತ. ಅಮರಚಂದರು ಕಾಗದವನ್ನೋದಿದರು. ಕಾಗದದಲ್ಲಿ ಏಜಂಟ ಹೇಳಿದಂತೆಯೆ ಇತ್ತು. ಈ ಸಮಯದಲ್ಲಿ ಇವರನ್ನಿಂದು ಹೇಗೆ ಬಲೆಯಲ್ಲಿ ಹಿಡಿದೆ ಎಂಬ ಭಾವದಿಂದ ಹುಬ್ಬೇರಿಸಿಕೊಂಡು ಏಜಂಟ ರಾಜಾಸಾಹೇಬರನ್ನೂ ಅವರ ದಿವಾನರನ್ನೂ ನೋಡುತ್ತಿದ್ದ.

ದಿವಾನ ಅಮರಚಂದರು ಕಾಗದವನ್ನು ಮೆಲ್ಲಗೆ ಮತ್ತೆ ಸುತ್ತಿದರು. ರಾಜಾಸಾಹೇಬರಾಗಲಿ ದಿವಾನ ಝೂಥಾರಾಮರಾಗಲಿ ಒಂದು ಶಬ್ದವನ್ನೂ ಆಡಲು ಸಮರ್ಥರಾಗಲಿಲ್ಲ. ಕಾಗದವನ್ನು ಸುತ್ತಿಯಾದ ಮೇಲೆ ದಿವಾನ ಅಮರಚಂದರು ಎದ್ದು ನಿಂತು, "ರಾಜಾ ಸಾಹೇಬರ ಪರವಾಗಿ ನಾನು ಸೈನ್ಯ ಶಿಬಿರದ ಬೋರ್ಡಿನ ಈ ನಿರ್ಣಯವನ್ನು ಒಪ್ಪುತ್ತೇನೆ. ಅಪರಾಧಿ ನಮ್ಮ ಕೈಗೆ ಸಿಕ್ಕಿದ್ದಾನೆ. ಏಜಂಟ ಸಾಹೇಬ, ನಿಮಗೆ ಯಾವಾಗ ಬೇಕೋ ಆವಾಗ ನೀವು ಅವನನ್ನು ಸಾಂಗಾನೇರಕ್ಕೆ ಕರೆದೊಯ್ಯಬಹುದು" ಎಂದರು.

ಅವರ ಈ ಅಕಸ್ಮಾತ್ ಘೋಷಣೆಯಿಂದ ಸ್ವತಃ ಪೊಲಿಟಿಕಲ್ ಏಜಂಟ ಕೂಡ ಅಪ್ರತಿಭನಾಗಿ ದಿವಾನ ಅಮರಚಂದರು ಅಸಂಭವವನ್ನು ಸಂಭವವನ್ನಾಗಿ ಮಾಡುವ ಜಾದುಗಾರನೊ ಎಂಬಂತೆ ಅವರನ್ನು ನೋಡಿದರು. ಆಮೇಲಿ "ದಿವಾನ್ ಸಾಹೇಬ, ಅಪರಾಧಿಯೆಂದು ಯಾರನ್ನಾದರೂ ನಮಗೆ ಒಪ್ಪಿಸಿದರೆ ನಡೆಯದು ಎಂದು ಲಕ್ಷ್ಯದಲ್ಲಿಟ್ಟುಕೊಳ್ಳಿ. ಈ ಪ್ರಕರಣ ಗವರ್ನರ್ ಜನರಲ್ಲರ ವರೆಗೂ ಹೋಗುವುದು. ಅವರೆದುರಿನಲ್ಲಿ ನಿಜ ಅಪರಾಧಿ ಈತನೇ ಎಂದು ಸಿದ್ಧವಾಗಬೇಕಾಗುವುದು," ಎಂದ.

ರಾಜಾಸಾಹೇಬರ ಕೈಗೆ ಕಾಗದದ ಸುರುಳಿಯನ್ನು ಕೊಟ್ಟು ದಿವಾನ ಅಮರಚಂದರು ನುಡಿದರು: "ಜಗತ್ತಿನ ಯಾವ ನ್ಯಾಯಾಲಯವೇ ಆಗಲಿ, ದಿವಾನ ಅಮರಚಂದರ ಪುರಾವೆಗಳನ್ನು ಸುಳ್ಳು ಮಾಡಲಾರದು."

ಮೇಜನ್ನು ಗುದ್ದಿ ಏಜಂಟ ತುಸು ತೀಕ್ಷ್ಣ ಸ್ವರದಲ್ಲಿ ಹೇಳಿದ: "ನೋ ನೋ. ನೀವು ಇಂಥ ಆಹ್ವಾನವನ್ನೀಯಲಾರಿರಿ. ಎಲ್ಲಿದ್ದಾನೆ ಅಪರಾಧಿ? ನಾವು ಈ ಕ್ಷಣದಲ್ಲಿಯೆ ಅವನ ನಟನೆಯನ್ನು ಬಯಲಿಗೆಳೆಯುವೆವು. ನಮಗೆ ಗೊತ್ತಿದೆ ಇದು ರಾಜಕೀಯ ಪ್ರಕರಣ ಎಂದು. ಇದರಲ್ಲಿ ಅನೇಕಾನೇಕ ಜನರ ಕೈವಾಡವಿದೆ ಎಂದು. ಇದು ಇಡೀ ಶಹರದ ಸಂಚು. ನಮಗೆ ಅಪರಾಧಿಯನ್ನು ತೋರಿಸಿ."

ದಿವಾನ ಅಮರಚಂದಜಿ ಮುಗುಳ್ನಗುತ್ತ ಅಂದರು "ಹಾಗಾದರೆ ಯಾವುದಾದರೂ ನ್ಯಾಯಾಲಯಕ್ಕಿಂತಲೂ ಮೊದಲಿಗೇ ನಿಮ್ಮ ಬುದ್ಧಿಯನ್ನು ಒಡಿಸಿ ಏಜಂಟ ಸಾಹೇಬರೇ. ಅಪ

ರಾಧಿ ನಿಮ್ಮೆದುರಿನಲ್ಲಿದ್ದಾನೆ. ನಾನೇ ಅಪರಾಧಿ. ಕಪ್ತಾನನ ಉದ್ದೇಶವನ್ನು ನಾನು ವ್ಯಕ್ತಿಶಃ ಬಲ್ಲೆ. ಮಿತ್ರತ್ವದ ಸೋಗಿನಲ್ಲಿ ಆತ ಹೇಳುತ್ತಿದ್ದ ವೇದಾಂತವನ್ನು ನಾನು ತಿರಸ್ಕರಿಸುತ್ತಿದ್ದೆ. ಆತ ಮೃತ್ಯುವನ್ನು ಬಾಗಿಲು ಬಡಿದು ಕರೆಯುತ್ತಿದ್ದ. ಪ್ರಯೋಗ ಮಾಡಬಯಸುತ್ತಿದ್ದ. ನಾನು ಆತನ ಆಹ್ವಾನವನ್ನು ಸ್ವೀಕರಿಸಿದೆ. ಆತ ತಿರುಗಿ ಹೋಗುವಾಗ ಹಾದಿಯಲ್ಲೆ ಆತನ ಕೊಲೆ ಮಾಡಿಸಿದೆ. ಇದರಲ್ಲೇನೂ ರಾಜಕಾರಣದ ಆಟ ವಿಲ್ಲ. ಅಂದು ರಾತ್ರಿ ಕಪ್ತಾನ ಸ್ಮಿಥ್ ನನ್ನ ಮನೆಯಿಂದ ಏಕಾಂಗಿಯಾಗಿ ಹೊರಬಿದ್ದನೆಂದು ಇಡೀ ಜಯಪುರವೇ ಬಲ್ಲದು. ಏಜಂಟರೇ, ನಾನು ಸುಳ್ಳು ಹೇಳುತ್ತಿದ್ದೇನೆಂದು ಸಿದ್ಧ ಮಾಡುವ ಕಾರ್ಯ ಇನ್ನು ಮೇಲೆ ನಿಮ್ಮದು."

ಇಷ್ಟರಲ್ಲಿ ದಿವಾನ ಝೂಥಾರಾಮರು ಆವೇಶ ದಿಂದ ನಡುವೆಯೆ ಎದ್ದುನಿಂತು ಮೂರು ಮೂರು ಸಲ "ಇಲ್ಲ. ಇಲ್ಲ." ಎಂದಿದ್ದರು. ರಾಜಾ ಜಗತ್ ಸಿಂಹರು ನಡುನಡುವೆಯೆ "ದಿವಾನಜಿ, ದಿವಾನಜಿ, ಎಚ್ಚರಿರುವಿರಿ ತಾನೆ!" ಎಂದು ಮೆಲ್ಲಗೆ ನುಡಿದಿದ್ದರು. ಏಜಂಟ ಮತ್ತು ಅವನ ಪರಿವಾರ ದವರ ಬಾಯಿಗಳನ್ನು ಮಾತ್ರ ಯಾರೊ ಹೊಲಿದಂತಿತ್ತು.

ದಿವಾನ ಅಮರಚಂದರ ಮಾತು ಮುಗಿದ ಮೇಲೂ ಏಜಂಟ ಒಮ್ಮೆಲೆ ಏನೂ ಹೇಳಲಾರದೆ ಹೋದ. ಆಮೇಲೆ ಆತ ಬಡಬಡಿಸಿದ "ಇಲ್ಲ– ಇಲ್ಲ. ಇದು ಸಾಧ್ಯವಿಲ್ಲ. ನಾನು ನಿಮ್ಮನ್ನು ಬಲ್ಲೆ. ನೀವು ಒಳ್ಳೇ ಜಂಟಲಮನ್ ಎಂದು ನಮಗೆ ಗೊತ್ತಿದೆ. ಒಂದು ಕ್ರಿಮಿಯನ್ನು ಕೂಡ ಕೊಲ್ಲಲು ಬಯಸದ ನೀವು ಒಬ್ಬ ಮಿತ್ರನನ್ನು, ಒಬ್ಬ ಜಂಟಲಮನ್ ಆಫೀಸರನನ್ನು ಹೇಗೆ ಕೊಲ್ಲಬಲ್ಲಿರಿ?"

"ನಿಮ್ಮ ಈ ಸಾಕ್ಷಿ ಏಕಪಕ್ಷೀಯವೆನಿಸುವುದು. ಜಯಪುರ ಸರಕಾರವು ಪ್ರಿವ್ಹಿಕೌನ್ಸಿಲ್ ವರೆಗೆ ಹೋಗಬಲ್ಲದು. ಅಲ್ಲಿ ಬ್ರಿಟಿಶ್ ಕಾಯದೆ ನಿಮ್ಮ ಈ ಅಂಧಶ್ರದ್ಧೆಯ ಮಾತುಗಳನ್ನು ನಿರ್ಜೀವವನ್ನಾಗಿ ಮಾಡುವುದು. ನಾನು ಕಪ್ತಾನ ಸ್ಮಿಥ್‌ರ ಕೊಲೆ ಮಾಡಿರುವೆ. ಕೊನೆಯ ವರೆಗೂ ನಾನು ಈ ಮಾತಿಗೆ ಅಂಟಿಕೊಳ್ಳುವೆ," ಎಂದರು ದಿವಾನ ಅಮರಚಂದಜಿ.

ತಮ್ಮ ತಲೆಯ ಮೇಲಿನ ಮುಂಡಾಸವನ್ನು ಕಳಚಿ ರಾಜಾ ಜಗತ್‌ಸಿಂಹರ ಕೈಯಲ್ಲಿರಿಸುತ್ತ ದಿವಾನ ಅಮರಚಂದರು, "ನಾನು ಈಗ ಜಯಪುರದ ದಿವಾನ ಪದವಿಯ ಈ ಸನ್ಮಾನ್ಯ ಮುಂಡಾಸವನ್ನು ತಿರುಗಿ ಒಪ್ಪಿಸುತ್ತಿದ್ದೇನೆ. ಅದು ನಿಷ್ಕಲಂಕವಾಗಿರಲಿ. ಯಾವನಾದರೂ ಪ್ರಾಮಾಣಿಕ, ಸ್ವಾಮಿಭಕ್ತ, ಕರುಣಾಳು ವ್ಯಕ್ತಿ ದಿವಾನನಾಗಿ ಜಯಪುರ ರಾಜ್ಯದ ಉಚಿತಸೇವೆ ಮಾಡಲು ಅನುಕೂಲವಾಗಲೆಂದು ನನ್ನ ಹುದ್ದೆಯನ್ನು ಬಿಟ್ಟುಕೊಡುತ್ತಿದ್ದೇನೆ," ಎಂದರು.

ರಾಜಾ ಜಗತ್‌ಸಿಂಹರು ತಮ್ಮ ಕೈಲಿದ್ದ ಮುಂಡಾಸವನ್ನೆ ನೋಡುತ್ತ ಕುಳಿತುಬಿಟ್ಟರು. ತಮ್ಮ ಎಲ್ಲ ರಾಜಕಾರಣದ ದಾಳಗಳು ಈ ಸರಳತೆ ಮತ್ತು ಆತ್ಮತ್ಯಾಗದ ಎದುರು ಪುಡಿಪುಡಿಯಾದವು ಎಂದು ದಿವಾನ ಝೂಥಾರಾಮರಿಗೆ ಅನಿಸಿತು. ಪೊಲಿಟಿಕಲ್ ಏಜಂಟ ಒಳಗೊಳಗೆ ಹಲ್ಲು ಮಸೆಯುತ್ತ "ದಿವಾನ ಅಮರಚಂದ, ಇದಕ್ಕೆ ಯಾವ ಶಿಕ್ಷೆ ಸಿಗುತ್ತದೆ ಎಂದು ಗೊತ್ತಿದೆ ತಾನೇ?" ಎಂದು ಕೇಳಿದ.

"ಫಾಸಿ" ಶಾಂತ ಸ್ವರದಲ್ಲಿ ಉತ್ತರ ಬಂತು.

"ಶಿಕ್ಷೆಯ ಉಗ್ರ ಸ್ವರೂಪವನ್ನು ಬಹು ಕಡಿಮೆ ಮಾಡಿದಿರಿ. ನಾನು ಹೇಳುತ್ತೇನೆ ಕೇಳಿ. ಪ್ರಾಣ ಹೋಗುವ ವರೆಗೂ ಚಂಡಾಲರ ಕೈಯೊಳಗಿನ ಹಗ್ಗ ನಿಮ್ಮ ಕುತ್ತಿಗೆಗೆ ಉರುಲು ಹಾಕುವುದು."

ಕಣ್ಮುಚ್ಚಿಕೊಂಡು ದಿವಾನ ಅಮರಚಂದರು ಮನದಲ್ಲಿಯೆ ಪವಿತ್ರ ಶ್ಲೋಕವೊಂದನ್ನು ಪಠಿಸಿದರು. "ನನ್ನನ್ನು ಬೇಗನೆ ಸಾಂಗಾನೇರಕ್ಕೆ ಒಯ್ಯಿರಿ. ನನ್ನ ಬಂಧು ದಿವಾನರಿಗೆ ಇನ್ನೂ ಇಷ್ಟು ಅಪರಾಧಿಗಳನ್ನು ಹುಡುಕುವ ಪ್ರಸಂಗ

ಬರದಂತಾಗಲಿ."

ಅವರು ಈ ಮಾತುಗಳಿಂದ ಜನತೆಯಲ್ಲಿ ಉಂಟಾಗಬಹುದಾದ ಕ್ಷೋಭೆಯನ್ನು ಸೂಚಿಸಿದ್ದರು. ಈಗ ಇಪ್ಪತ್ತೈದು ವರ್ಷಗಳಿಂದಲೂ ದಿವಾನ ಅಮರಚಂದರ ಪ್ರಭಾವ ಜನತೆಯ ಮೇಲೆ ಬಿದ್ದಿತ್ತು. ಜನರು ರೊಚ್ಚಿಗೇಳುವ ಮೊದಲೇ ಪೊಲಟಿಕಲ್ ಏಜಂಟ ದಿವಾನರನ್ನು ಕರೆದೊಯ್ದ. ಜನರಿಗೆ ವಿಚಾರ ತಿಳಿದಾಗ ಅವರು ಅರಮನೆಯನ್ನೆ ಮುತ್ತಿದರು. ದಿವಾನ ಝೂಥಾರಾಮರು ಅವರೆದುರು ಬಂದು ಕಣ್ಣೀರು ಸುರಿಸುತ್ತ ಹೇಳಿದ ಮಾತುಗಳು ಸರಿಯಾಗಿ ಯಾರಿಗೂ ತಿಳಿಯಲಿಲ್ಲ. ಅಷ್ಟಿಷ್ಟು ತಿಳಿದುಕೊಂಡವರು ಉಳಿದವರಿಗೆ ಹೇಳಿದರು. ಜಯಪುರದ ಮನೆ ಮನೆಯಲ್ಲಿ ಚರ್ಚೆ ನಡೆಯತೊಡಗಿತು ; ದುಃಖ ವ್ಯಾಪಿಸಿತು.

ಅಂದು ರಾತ್ರಿ ದಿವಾನ ಅಮರಚಂದರ ಮನೆಯಲ್ಲಿ ಮನೆಯವರ ಹಾಗೂ ಅವರನ್ನು ಸಂತಯಿಸಲು ಬಂದವರ ಕಣ್ಣೀರು ಕಾಲುವೆಯಾಗಿ ಹರಿಯುತ್ತಿದ್ದಾಗ ಒಬ್ಬಾತ ಬಂದು ಫತೇಹಲಾಲನ ಕಾಲಿಗೆ ಬಿದ್ದ. ಹೆಬ್ಬಾಗಿಲನ್ನು ಮುಚ್ಚಲು ಆಗ ಫತೇಹಲಾಲ ನೌಕರರಿಗೆ ಆದೇಶವೀಯುತ್ತಲಿದ್ದ.

ಫತೇಹಲಾಲ ಚಕಿತನಾಗಿ ಕಾಲಿಗೆರಗಿದವನನ್ನು ಮೇಲೆತ್ತಿ, " ಯಾರು ? ಚಮನಲಾಲಜಿ! ಓ! ಬಹುಶಃ ನೀವು ಉಪಕಾರ ಸ್ಮರಿಸಲು ಬಂದಿರಬೇಕು. ಈಗ ನನಗೆ ಸಮಯವಿಲ್ಲ. ತಂದೆಯ ಹೇಳಿಕೆಯ ಪ್ರಕಾರ ನಿಮಗೆ ಬರೀ ಉಂಡೆಗಳನ್ನಷ್ಟೆ ಕಳಿಸಿದ್ದೆ. ಅವುಗಳಲ್ಲಿ ಮತ್ತೇನಾದರೂ ಇದ್ದರೆ ಅದು ನಿಮ್ಮ ಪುಣ್ಯ ಫಲ. ನಾನೇನೂ ದಾನ ಮಾಡಿಲ್ಲ" ಎಂದ.

ಚಮನಲಾಲ ದೊಡ್ಡ ದನಿಯಲ್ಲಿ ಅತ್ತ. ಅಳುತ್ತಳುತ್ತ ಆತ ಫತೇಹಲಲಾಲನ ಹೆಗಲುಗಳನ್ನು ಹಿಡಿದುಕೊಂಡು ಹೇಳಿದ: " ಬಂಧು, ನಾನೇ ಕೊಲೆಗಡಕ. ನಾನೇ ಸ್ಮಿಥ್‌ನನ್ನು ಕೊಂದ ಅಪರಾಧಿ. ನನ್ನನ್ನು ತಿರಸ್ಕಾರದಿಂದ ನೋಡದಿರು. ನನ್ನನ್ನು ಬೇಗನೆ ಸಾಂಗಾನೇರಕ್ಕೆ ಕರೆದೊಯ್ಯಿ. ರಾಜಭಕ್ತಿಯಿಂದ ಹುಚ ನಾಗಿ ನಾನೇ ಆ ಅಪರಾಧ ಮಾಡಿದೆ. ಬೇಗನೆ ದಿವಾನಜಿಯನ್ನು ಬಿಡಿಸಿಕೊಂಡು ಬನ್ನಿ. ಇಲ್ಲವಾದರೆ ಬೆಳಗಾಗುವುದರೊಳಗೆ ನನ್ನ ಪ್ರಾಣಪಕ್ಷಿ ಹಾರಿ ಹೋಗುವುದು."

ಫತೇಹಲಾಲ ದಂಗಾಗಿ ಹೋದ. ಎರಡು ನಿಮಿಷ ಆತ ಚಮನಲಾಲನ ಮುಖವನ್ನು ನೋಡುತ್ತಲೇ ನಿಂತ. ಆ ಮೇಲೆ ಸೇವಕನನ್ನು ಕರೆದು ಗಾಡಿಯನ್ನು ಸಿದ್ಧಗೊಳಿಸಲು ಹೇಳಿದ.

ಅವರಿಬ್ಬರೂ ದಿವಾನ ಝೂಥಾರಾಮರ ಮನೆಗೆ ಬಂದರು. ಅವರೂ ದಂಗಾದರು. ಆ ಮೇಲೆ ಚಮನಲಾಲನ ಬೆನ್ನು ಚಪ್ಪರಿಸಿ ಅವನ ರಾಜಭಕ್ತಿಯನ್ನು ಕೊಂಡಾಡಿ, ಅವನ ವಂಶಜರಿಗೆ ಜಹಗೀರು ಹಾಕಿ ಕೊಡುವುದಾಗಿ ಆಶ್ವಾಸನವಿತ್ತು, ರಾಜಾ ಜಗತಸಿಂಹರಿಗೆ ಈ ಸಮಾಚಾರವನ್ನು ಸೇವಕರ ಮುಖಾಂತರ ತಿಳಿಸಿ ಚಮನಲಾಲನನ್ನು ಕರೆದುಕೊಂಡು ಸಾಂಗಾನೇರಕ್ಕೆ ಹೊರಟರು.

ಆದರೆ ಮಾರನೆಯ ದಿನವೂ ಪೊಲಿಟಿಕಲ್ ಏಜಂಟ ಮುಖ ಬಿಗಿದುಕೊಂಡೇ ಇದ್ದ. ಮೊದಮೊದಲಿಗಂತೂ ಆತ ದಿವಾನ ಝೂಥಾರಾಮರನ್ನು ಭೆಟ್ಟಿಯಾಗಲು ಕೂಡ ಒಪ್ಪಲಿಲ್ಲ. ಆದರೆ ದಿವಾನ ಝೂಥಾರಾಮರು " ಫಿರಂಗಿಯವರ ಯುಕ್ತಿ ಫಲಿಸಲಿಲ್ಲ. ಆದರೆ ನಾವು ಮಾತ್ರ ನಮ್ಮ ಶಕ್ತಿಗೆ ಮೀರಿದ ಬೆಲೆ ತೆತ್ತಿದ್ದೇವೆ. ಇದರಲ್ಲಿ ಅರ್ಧದಷ್ಟಾದರೂ ನಮಗೆ ತಿರುಗಿ ದೊರೆತರೆ ಫಿರಂಗಿಯವರು ಅರ್ಧ ಗೆದ್ದಂತೆ. ಸೋಲುವವರು ಸಿಟ್ಟಿಗೇಳುವುದೇಕೆ ?" ಎಂದು ಹೇಳಿ ಕಳಿಸಿದಾಗ ಪೊಲಿಟಿಕಲ್ ಏಜಂಟನಿಗೆ ಅರ್ಥವಾಯಿತು. ದಿವಾನ ಅಮರಚಂದರನ್ನು ಒಪ್ಪಿಸಬೇಕಾಗಿದೆ ಎಂದು ತಿಳಿಸಿದರೂ ನಿಜ ಅಪರಾಧಿ ಯಾರು ಎಂದು ದಿವಾನ ಝೂಥಾರಾಮರು ತಿಳಿಸಿರಲಿಲ್ಲ. ಆದರೆ ನಿಜ ಅಪರಾಧಿ ಸಿಕ್ಕಿದ್ದಾನೆ ಎಂದು ಮಾತ್ರ ಖಂಡಿತವಾಗಿತ್ತು. ದಿವಾನ ಅಮರಚಂದರು ನಿಜ ಅಪರಾಧಿಯನ್ನು ಮುಂದೆ ನಿಲ್ಲಿಸಲು ಒಪ್ಪಿದರೆ ಕಂಪನಿಯ ಗತ್ತು ಫಲಿಸಲು ಅನುಕೂಲವಾಗುವುದು ಎಂದು ದಿವಾನ ಝೂಥಾರಾಮರೇ ಹೇಳಿದಂತಾಗಿತ್ತು. ಆತ

ದಿವಾನ ಅಮರಚಂದರನ್ನು ಭೆಟ್ಟಿಯಾಗಲು ದಿವಾನ ಝೂಥಾರಾಮರಿಗೆ ಅಪ್ಪಣೆ ಕೊಟ್ಟ.

ಮಾತುಕಥೆ ನಡೆದಿದ್ದಾಗ ಚಮನಲಾಲ, ದಿವಾನ ಅಮರಚಂದರ ಮುಂದೆ ಸಾಷ್ಟಾಂಗ ಹಾಕಿಕೊಂಡೇ ಬಿದ್ದಿದ್ದ. ಎಲ್ಲವನ್ನೂ ಕೇಳಿಕೊಂಡನಂತರ ಅವರು ಗಂಭೀರ ಸ್ವರದಲ್ಲಿ ಹೇಳಿದರು: "ಎಲ್ಲರೂ ಕಿವಿಗೊಟ್ಟು ಕೇಳಿರಿ. ನಾನು ಈ ಅಪರಾಧವನ್ನು ಒಪ್ಪಿಕೊಂಡಾಗ ನನ್ನ ಮನಸ್ಸಿನಲ್ಲಿ ಯಾವ ಕಲಂಕವೂ ದ್ವೇಷವೂ ಇರಲಿಲ್ಲ. ಈಗಲೂ ಇಲ್ಲ. ಚಮನಲಾಲ ಅಪರಾಧ ಸ್ವೀಕರಿಸಿದರೆ ಜಯಪುರ ಉಳಿದುಕೊಳ್ಳದು. ಜಯಪುರದ ಮೇಲೆ ಫಿರಂಗಿಯವರ ಹಲ್ಲು ಎಷ್ಟು ಬಲವಾಗಿ ಊರಿದೆಯೆಂದರೆ ಅದನ್ನು ಮುರಿಯಲು ಒಂದು ದೊಡ್ಡ ಸುತ್ತಿಗೆಯೆ ಬೇಕು. ಈಗ ನಮ್ಮ ಎದುರು ಎರಡೇ ಮಾರ್ಗಗಳಿವೆ. ದಿವಾನರ ಆಶೆಗಾಗಿ ದೇಶವನ್ನು ಶತ್ರುವಿಗೊಪ್ಪಿಸಬೇಕು ಅಥವಾ ದಿವಾನರನ್ನು ಬಲಿಕೊಟ್ಟು ದೇಶವನ್ನು ಉಳಿಸಿಕೊಳ್ಳಬೇಕು. ಚಮನಲಾಲರನ್ನು ಮುಂದೆ ಮಾಡಿದರೆ ಅವನನ್ನೂ ದೇಶವನ್ನೂ ಕೂಡಿಯೆ ಕಳೆದುಕೊಳ್ಳಬೇಕಾಗುವುದು."

"ದಿವಾನಜಿ!" ಚಮನಲಾಲ ಗೋಳೋ ಎಂದು ಅತ್ತ.

"ಹುಚ್ಚಾ, ನೀನು ನಿಮಿತ್ತ ಮಾತ್ರ. ಇಷ್ಟಕ್ಕಾಗಿ ಅಳುವಿಯಾ? ನೀನು ಅಪರಾಧವನ್ನೊಪ್ಪಿ ನಿನ್ನ ಅಂತಃಕರಣವನ್ನು ಶುದ್ಧಗೊಳಿಸಿಕೊಂಡಿರುವೆ. ಹೋಗು. ಸುಖಿಯಾಗು. ಬಂಧು ಝೂಥಾರಾಮಜಿ, ನೀವು ರಾಜಕಾರಣವನ್ನು ನನಗಿಂತ ಚೆನ್ನಾಗಿ ಬಲ್ಲವರು. ನಿಮಗೆಲ್ಲ ತಿಳಿದಿರಬೇಕು. ಹೋಗಿ. ವ್ಯರ್ಥ ನನ್ನ ಮೋಹವನ್ನೇಕೆ ಕೆರಳಿಸುವಿರಿ? ಈ ಹತಭಾಗ್ಯ ಚಮನಲಾಲನಿಗೆ ಆತ್ಮಗ್ಲಾನಿಯ ಅನುಭವವಾಗದಂತೆ ನೋಡಿಕೊಳ್ಳಿ. ಒಂದಿಷ್ಟು ಜಹಗೀರನ್ನು ಅವನಿಗೆ ಕೊಡಿಸಿ. ಇಂಥ ಮನುಷ್ಯ ಸಿಗುವುದು ವಿರಳ."

ಝೂಥಾರಾಮರ ಕಂಠ ಬಿಗಿದು ಬಂತು. ಅವರು ಗದ್ಗದ ಸ್ವರದಲ್ಲಿ "ಮತ್ತೇನೂ ಇಚ್ಛೆಯಿಲ್ಲವೆ, ಬಂಧು"? ಎಂದು ಕೇಳಿದರು.

ಫತೇಹಲಾಲನ ದುಃಖಪೂರ್ಣ ಮುಖವನ್ನು ನೋಡುತ್ತ, ಆಮೇಲೆ ತಮ್ಮ ಕಣ್ಣುಗಳನ್ನು ಬೇರೆಡೆಗೆ ತಿರುಗಿಸುತ್ತ ದಿವಾನ ಅಮರಚಂದರು ಹೇಳಿದರು "ಇದೆ. ಪ್ರೀವ್ಹಿ ಕೌನ್ಸಿಲಿನ ವರೆಗೆ ಪ್ರಕರಣವನ್ನೊಯ್ದು ಹಣ ಹಾಳು ಮಾಡಲಾಗದು. ಎಷ್ಟೇ ಪ್ರಿಯವಾದದ್ದಿರಲಿ, ರತ್ನ ಹೋಯಿತು ಎಂದು ತಿಳಿದುಕೊಂಡು ಪ್ರತಿಷ್ಠೆಯ ರಕ್ಷಣೆಗೆ ಎಷ್ಟು ಬೇಕೋ ಅಷ್ಟೇ ಖರ್ಚು ಮಾಡಬೇಕು."

"ನಿಮಗಾಗಿ, ನಿಮ್ಮ ಸಲುವಾಗಿ ಯಾವ ಇಚ್ಛೆಯೂ ಇಲ್ಲವೆ?"

"ಒಂದು ಕೊನೆಯ ಸ್ವಾರ್ಥಪೂರ್ಣ ಇಚ್ಛೆ ಇದೆ. ಆದರೆ ಏಜಂಟ ಒಪ್ಪುವುದಿಲ್ಲ. ಆತ ತಾನು ಹೇಳಿದ್ದನ್ನೆ ಮಾಡುವನು. ಚಂಡಾಲನ ಕೈಯಿಂದಲೇ ಮರಣ ಬರಬೇಕೇ? ಎಂದು ಯೋಚಿಸುತ್ತಿದ್ದೆ."

ಫತೇಹಲಾಲ ಮೂರ್ಛೆ ಹೋದ. ಚಮನಲಾಲ ನೆಲಕ್ಕೆ ತಲೆ ಜಜ್ಜಿಕೊಂಡು ಅಳತೊಡಗಿದ. ಝೂಥಾರಾಮರು ತಮ್ಮ ಮುಂಗೈ ಕಚ್ಚಿಕೊಂಡರು.

ಏಜಂಟರಿಗೆ ಈ ಭೆಟ್ಟಿಯ ಪರಿಣಾಮ ತಿಳಿಯಿತು. ಆತ ಕ್ರೋಧದಿಂದ ಗವರ್ನರ ಜನರಲ್ಲರಿಗೆ ಒಂದು ಖಂಡಿತ ಪತ್ರ ಬರೆದ. ಸ್ಥಳೀಯ ಕೋರ್ಟಿನಲ್ಲಿ ಪ್ರಕರಣದ ಇತ್ಯರ್ಥ ಮಾಡಲು ಗವರ್ನರ ಜನರಲ್ಲರು ಬರೆದರು. ನ್ಯಾಯಾಲಯ ತೀರ್ಪು ಹೇಳಿತು: 'ಚಂಡಾಲನ ಕೈಯಿಂದ ಉರುಲು ಹಾಕಿಸಿ ಕೊಲ್ಲಿಸಬೇಕು.'

ಫಾಸಿಗೇರಿಸುವ ದಿನ ಫಾಸಿ ಗೃಹದ ಮುಂದೆ ಸಾಂಗಾನೇರಕ್ಕೆ ಬರಲು ಸಾಧ್ಯವಿದ್ದವರೆಲ್ಲ ಜಯಪುರದಿಂದ ಬಂದಿದ್ದರು. ನಸುಕಿನಿಂದಲೂ ಚಂಡಾಲ ಹಗ್ಗವನ್ನು ಮೇಣಬತ್ತಿಯಿಂದ ಹುರಿ ಮಾಡುತ್ತಿದ್ದ. ಫಾಸಿಯ ಸಮಯದಲ್ಲಿ ದಿವಾನ ಝೂಥಾರಾಮ ಮತ್ತು ಅಮರಚಂದರ ಮಗ—ಇವರಿಬ್ಬರು ಗೋಡೆಯಾಚೆ ನಿಂತು ನೋಡಬಹುದು ಎಂದು ಫಿರಂಗಿ ನ್ಯಾಯಾಲಯ ವಿಧಿಸಿತ್ತು.

ಜೇಲರ್ ಬಂದ, ಡಾಕ್ಟರರು ಬಂದರು.

ಸಿಪಾಯಿಗಳು ಬಂದರು. ಪೊಲಿಟಿಕಲ್ ಏಜಂಟ ಮತ್ತು ಅತನ ಸಂಗಡಿಗರಾದ ಹತ್ತಿಪ್ಪತ್ತು ಜನ ಬಂದರು. ಎಲ್ಲರೂ ಸಾಲಾಗಿ ನಿಂತರು. ಏಜಂಟ ಗೋಡೆಯಾಚೆ ನಿಂತವರಿಗೆ ಕೇಳಿಸುವಂತೆ ಉಚ್ಚ ಸ್ವರದಲ್ಲಿ "ಕೈದಿ ತನ್ನ ಕೊನೆಯ ಇಚ್ಛೆಯನ್ನು ಹೇಳಿದ್ದಾನೆ. ಘನ ಕಂಪನಿ ಸರಕಾರ ಅವನ್ನು ಪೂರೈಸಲು ಒಪ್ಪಿದೆ. ಸಾಯುವ ಮೊದಲು ಒಂದು ತಾಸು ಧ್ಯಾನ ಮಾಡಲು ಕೈದಿ ಅಪ್ಪಣೆ ಕೇಳಿದ್ದು ಅವನಿಗೆ ಒಂದು ತಾಸು ಜೀವದಾನ ಮಾಡಲಾಗಿದೆ. ಇದೇ ದಯಾಪೂರ್ಣ ನ್ಯಾಯ" ಎಂದ.

ದಿವಾನ ಝೂಥಾರಾಮರು ಅರ್ಥಪೂರ್ಣ ದೃಷ್ಟಿಯಿಂದ ಫತೇಹಲಾಲನನ್ನು ನೋಡಿದರು. ಆದರೆ ಏನೂ ಬಗೆಹರಿಯಲಿಲ್ಲ. ಅಮರಚಂದರು ಅನಿವಾರ್ಯವಾದ ಮೃತ್ಯುವಿನಿಂದ ಒಂದು ತಾಸು ತಪ್ಪಿಸಿಕೊಳ್ಳುವ ಮೋಹಕ್ಕೆ ಬಿದ್ದರೆ? ಅಥವಾ ಇದು ಈ ದುಷ್ಟ ಏಜಂಟನ ಕ್ರೂರ ಲೀಲೆಯ?

ಒಂದು ತಾಸೂ ಮೆಲ್ಲಗೆ ಕಳೆದು ಹೋಯಿತು. ಸೂರ್ಯನ ಮೊದಲನೆಯ ಕಿರಣ ಫಾಸಿ ಕಂಬಕ್ಕೆ ತೂಗಿ ಬಿದ್ದಿದ್ದ ಹಗ್ಗದ ಮೇಲೆ ಬಿದ್ದಿತು. ತನ್ನ ಕೊನೆಯ ಕೆಲಸ ಪೂರೈಸಲು ಡಾಕ್ಟರ ಫಾಸಿಯ ಕೋಣೆಗೆ ನಡೆದ.

ಮರುಕ್ಷಣದಲ್ಲಿಯೆ ಆತ ಓಡೋಡುತ್ತ ಬಂದು "ಸರ್, ಇನ್ನು ನೀವು ಈ ಕೈದಿಗೆ ಫಾಸಿ ಕೊಡಲಾರಿರಿ. ಅದು ಕಾಯದೆಗೆ ವಿರುದ್ಧವಾದೀತು" ಎಂದ.

"ಏಯ್ ಕೆಟ್ಟ ಮೋರೆಯವನೇ, ಏನು ಬಡಬಡಿಸುತ್ತಿರುವಿ?" ಏಜಂಟ್ ಗದ್ದರಿಸಿದ.

"ನಾನು ನಿಜವನ್ನೇ ಹೇಳುತ್ತೇನೆ. ಇತ್ತ ನೋಡಿ."

ಎಲ್ಲರೂ ನೋಡಿದರು. ದಿವಾನ ಅಮರಚಂದರ ಧ್ಯಾನಸ್ಥ ಶರೀರವನ್ನು ಭವ್ಯ ಪ್ರತಿಮೆಯನ್ನು ಹೊತ್ತು ತರುವಂತೆ ಇಬ್ಬರು ಜಮಾದಾರರು ಹೊತ್ತು ತರುತ್ತಿದ್ದರು. ಆಸನ ಹಾಕಿ ಕುಳಿತಿದ್ದ ಆ ದೇಹದ ತಲೆ ಅಲುಗಾಡುತ್ತಿರಲಿಲ್ಲ. ಕೈ ಸರಿದಾಡುತ್ತಿರಲಿಲ್ಲ. ಡಾಕ್ಟರ್ ಕೂಗಿ ಹೇಳಿದ: "ನೀವು ಹೆಣವನ್ನು ಫಾಸಿಗೇರಿಸಲಾರಿರಿ, ಏಜಂಟ್ ಸಾಹೇಬ."

"ಏನು ಬಡಬಡಿಸುವಿ?" ಎಂದು ಗರ್ಜಿಸಿ ಏಜಂಟ್ ಡಾಕ್ಟರನ ಕಪಾಳಕ್ಕೆ ಬಿಗಿದು ಅವನನ್ನು ದೂರ ಕೆಡವಿದ. ಆ ಮೇಲೆ "ಏರಿಸಿ ಫಾಸಿಗೆ" ಎಂದು ಕೂಗಿದ.

ಫಾಸಿಗೇರಿಸುವವ ಆ ಪ್ರತಿಮೆಯತ್ತ ಧಾವಿಸಿದ. ಆದರೆ ಅವನ ಕೈ-ಕಾಲುಗಳು ನಡುಗುತ್ತಿದ್ದವು.

ಫತೇಹಲಾಲನ ಮುಖ ಪ್ರಸನ್ನತೆಯಿಂದ ಅರಳಿತು. ಆತ ದಿವಾನ ಝೂಥಾರಾಮರ ಹೆಗಲ ಮೇಲೆ ಕೈಯಿಟ್ಟು ತನ್ನೆಲ್ಲ ಸಂತೋಷವನ್ನು ಪ್ರಕಟಿಸುತ್ತ "ಸಮಾಧಿ ಮರಣ" ಎಂದು ಒಂದೇ ಶಬ್ದವನ್ನು ಉಚ್ಚರಿಸಿದ.

ಆತನ ಬೆನ್ನಮೇಲೆ ಕೈಯಾಡಿಸುತ್ತ ಕಣ್ಣುಗಳಲ್ಲಿ ಬಂದ ನೀರನ್ನು ಒರೆಸಿಕೊಳ್ಳುತ್ತ, "ಹೌದು. ಸಮಾಧಿಮರಣ. ನಡೆ. ಇನ್ನು ಮಣ್ಣಿನ ಫಜೀತಿಯನ್ನು ಕಂಡು ಏನಾಗಬೇಕು? ಏಜಂಟ ತನ್ನ ಮನವನ್ನು ತಣಿಸಿಕೊಳ್ಳಲಿ" ಎಂದರು.

ಅವರೊಂದಿಗೆ ನಡೆಯುತ್ತ ಫತೇಹಲಾಲ ಹೇಳಿದ: "ದೊಡ್ಡಪ್ಪ, ನನಗೆಷ್ಟು ಸಂತೋಷವಾಗಿದೆ ಎನ್ನುತ್ತೀರಿ. ಕೊನೆಯ ಗಳಿಗೆಯಲ್ಲಿ ಚಂಡಾಲನ ಹಸ್ತಸ್ಪರ್ಶವಾಗದಿರಲಿ ಎಂಬ ಇಚ್ಛೆಯನ್ನು ಪೂರೈಸಿಕೊಳ್ಳಲು ಪಿತಾಜಿ ಎಂಥ ಮನೋಬಲವನ್ನು ಪಡೆದುಕೊಂಡಿರಬೇಡ"

ಅವನ ಬೆನ್ನು ತಟ್ಟುತ್ತ ದಿವಾನ ಝೂಥಾರಾಮಜಿಯವರು ನುಡಿದರು, "ಕೊನೆಗೂ ಹುಚ್ಚನಂತೆಯೆ ಆಡಿದೆಯಲ್ಲ. ಅವರ ಈ ಕೊನೆಯ ಇಚ್ಛೆ ಹೇಗೆ ಪೂರೈಸಲ್ಪಡುತ್ತಿತ್ತು? ನೀನೇ ಹೇಳು. ಈ ಕೊನೆಯ ಇಚ್ಛೆಯನ್ನು, ಈ ಕೊನೆಯ ಗ್ಲಾನಿಯನ್ನು ವಿಸರ್ಜಿಸುವುದಕ್ಕಾಗಿ ಅವರ ಮನೋಬಲವು ಈ ಜೀವನದ ಸಂಸ್ಕಾರಗಳೊಡನೆ ಭೀಕರವಾಗಿ ಹೋರಾಡಿರಬೇಕು. ಯಾವುದೇ ಇಚ್ಛೆ, ಯಾವುದೇ ರಾಗದ್ವೇಷಗಳು ಮನದಲ್ಲಿರುವಾಗ ಸಮಾಧಿ ಮರಣವೆಂಬುದು ಸಾಧ್ಯವೇ ಇಲ್ಲ." *



ಹಿಂದೂ ತಂದೆ, ಇಂಗ್ಲಿಷ್ ತಾಯಿಯ ಮಗನೊಬ್ಬನ
ಸ್ವಾರಸ್ಯ ಅನುಭವಗಳು

# ನನ್ನ ಅಜ್ಜಿ ಮತ್ತು ಹೊಲಸು ಇಂಗ್ಲೀಷರು

ಆಬ್ರಿ ಮೆನನ್

ಮೊದಲನೆಯ ಜಾಗತಿಕ ಯುದ್ಧಕ್ಕೆ ಕೆಲವು ವರ್ಷಗಳ ಮೊದಲು ನನ್ನತಂದೆ ಭಾರತದಲ್ಲಿದ್ದ ವಂಶಪರಂಪರಾಗತವಾಗಿ ಬಂದ ತನ್ನ ತೆಂಗಿನ ತೋಟದ ಆಸ್ತಿಯನ್ನು ಬಿಟ್ಟು ಇಂಗ್ಲೆಂಡಿಗೆ ಬಂದ. ಇಂಗ್ಲೆಂಡಿನಲ್ಲಾತ ಓರ್ವ ಐರಿಶ್ ತರುಣಿಯನ್ನು ಲಗ್ನವಾದ. ಆತ ಉಚ್ಚ ಕುಲದ ಹಿಂದು. ಆತ ತಾನೊಬ್ಬ ಬಿಳಿಯ ಹೆಂಗಸನ್ನು ಲಗ್ನವಾಗಲಿರುವೆನೆಂದು ಬರೆದಾಗ ನನ್ನಜ್ಜಿಗೆ ವಜ್ರಾಘಾತವಾಗಿಹೋಯಿತು. ೨೨ ವಯಸ್ಸಿನ ಇಂಗ್ಲಿಷ್ ಹುಡುಗನೊಬ್ಬ ತಾನು ಮನುಷ್ಯಭಕ್ಷಕನಾಗಲಿದ್ದೇನೆಂದು ತನ್ನವರಿಗೆ ಬರೆದಂತಿತ್ತು ಈ ಸಮಾಚಾರ ಅವಳಿಗೆ. ನನ್ನಜ್ಜಿಯೆ ಕುಟುಂಬದ ಯಜಮಾನಿಯಾಗಿದ್ದುದರಿಂದ ಅವಳು ನನ್ನ ಅಪ್ಪನಿಗೆ ಆಸ್ತಿಯಲ್ಲಿ ಒಂದು ಕಾಸು ಕೂಡ ಸಿಗದಂತೆ ಮಾಡಿಬಿಟ್ಟಳು.

ನಾನು ಇಂಗ್ಲೆಂಡಿನಲ್ಲಿ ಹುಟ್ಟಿ ಬೆಳೆದೆ. ನನ್ನ

ಮಿಶ್ರಜಾತಿ ಮತ್ತು ಕಂದು ಬಣ್ಣಗಳು ಕೆಲವೊಂದು ಸಮಸ್ಯೆಗಳನ್ನು ಹುಟ್ಟಿಸಿದವು. ಕಿಪ್ಲಿಂಗನ ಪುಸ್ತಕಗಳನ್ನು ಓದಿದಾಗ ನನಗೆ ಜಗತ್ತಿನಲ್ಲಿಯೆ ಅತ್ಯುತ್ತಮ ಕುಲವೆನಿಸಿದ ಇಂಗ್ಲೀಷರ ಮತ್ತು ಹಾಗೆಯೆ ಅತ್ಯುತ್ತಮ ಕುಲದವರಾದ ಆದರೆ ವಿಶ್ವಾಸಾರ್ಹರಲ್ಲದ ಭಾರತೀಯರನ್ನು ಳಿದು ಯುರೇಶಿಯನ್ ಎಂಬ ದ್ರೋಹಿ ಮತ್ತು ಅಪನಂಬಿಗೆಯ ಮನುಷ್ಯ ಜಾತಿಯೊಂದಿದೆ ಎಂದು ತಿಳಿಯಿತು.

"ಯುರೇಶಿಯನ್" ಎಂದರೇನು ಎಂದು ನನ್ನ ಒಬ್ಬ ಶಿಕ್ಷಕಳಿಗೆ ಕೇಳಿದೆ. ಅವಳೋ ಸಂಕೋಚದಿಂದ ಮುಖ ಕೆಂಪಗೆ ಮಾಡಿಕೊಂಡು ನನ್ನನ್ನು ಹೆಡ್ಮಾಸ್ತರರ ಬಳಿಗೆ ಕಳಿಸಿದಳು. ಹೆಡ್ಮಾಸ್ತರರು "ಅದು ನೀನು ದೊಡ್ಡವನಾದ ಮೇಲೆ ತಿಳಿದೀತು. ಆದರೆ ಯೇಸು ನಿನ್ನನ್ನು ಸದಾ ಪ್ರೀತಿಸುತ್ತಾನೆಂದು ಜ್ಞಾಪಕದಲ್ಲಿಟ್ಟುಕೊ" ಎಂದರು. ಆದರೆ ಇಂಗ್ಲೆಂಡಿನಲ್ಲಿ ಹುಟ್ಟಿದ ಭಾಗ್ಯಬಲದಿಂದ ನಾನು ಒಬ್ಬ ಇಂಗ್ಲೀಷ್ ಮನುಷ್ಯನೆಂದು ನನಗೆ ಆಶ್ವಾಸನ ಸಿಕ್ಕಿತು. ಜೀವನದಲ್ಲಿ ಇದಕ್ಕೂ ಉಪಯುಕ್ತವಾದ ಆರಂಭ ಬೇರೆನಿದ್ದೀತು?

ನನಗೆ ಹನ್ನೆರಡು ವರ್ಷಗಳಾದಾಗ ನನ್ನಜ್ಜಿ ನನ್ನನ್ನು ಕರೆತಂದು ತನಗೆ ತೋರಿಸಬೇಕೆಂದು ಆಜ್ಞೆ ಮಾಡಿದಳು. ಆದ್ದರಿಂದ ನಾನು ನನ್ನ ತಾಯಿಯೊಂದಿಗೆ ದಕ್ಷಿಣ ಭಾರತದ ಉಷ್ಣ ಕಟಿಬಂಧ ಪ್ರದೇಶದಲ್ಲಿರುವ ಮಲಬಾರಿಗೆ ಹೊರಟೆ.

ನಮ್ಮ ಪ್ರವಾಸದ ಕೊನೆಯ ಘಟ್ಟ ದೋಣಿಯಲ್ಲಿ ಸಾಗಿತು. ಪೊನ್ನಾನಿ ನದಿಯಲ್ಲಿ ಈ ದೋಣಿಯನ್ನು ಗಳಗಳ ಸಹಾಯದಿಂದ ಮುಂದೆ ನೂಕುತ್ತಿದ್ದರು. ನದಿಯ ಇಕ್ಕೆಲಗಳಲ್ಲಿ ತೆಂಗಿನ ಮರಗಳಿದ್ದವು. ನದಿಯಲ್ಲಿದ್ದ ಮೊಸಳೆಗಳನ್ನು ದೂರವಿಡಲೆಂದು ನಾನು ಶಾಲೆಯಲ್ಲಿ ಕಲಿತಿದ್ದ ದೇಶಭಕ್ತಿಪೂರ್ಣವಾದ ಗೀತೆಯೊಂದನ್ನು ಹಾಡಿದೆ. ನನ್ನ ಬಾಲ ಹೃದಯ (ವಿಶೇಷತಃ ಈ ವಿದೇಶದಲ್ಲಿ) ಬ್ರಿಟಿಶ್ ಮನೋಭಾವನೆಯಿಂದ ಉದ್ದೀಪ್ತವಾಗಿದ್ದುದರಿಂದ ನಾನು ಹೃತ್ಪೂರ್ವಕವಾಗಿ ಹಾಡುತ್ತಿದ್ದೆ. ಮುಂದೆ ತುಸು ಹೊತ್ತಿನಲ್ಲಿ ನನ್ನ ಅಜ್ಜಿಯ ಭೆಟ್ಟಿಯಾಯಿತು. ಆ ಮೇಲೆ ನಾನೆಂದೂ ಇಂಗ್ಲೀಷರು ಪರಿಪೂರ್ಣರು ಎಂದು ಅನ್ನಲಿಲ್ಲ.

ಕುಟುಂಬದ ಜಮೀನಿನ ಆ ತುದಿಗೆ ನಮಗಾಗಿ ಒಂದು ಪ್ರತ್ಯೇಕ ಬಿಡಾರವನ್ನು ಅಜ್ಜಿ ಏರ್ಪಡಿಸಿದ್ದಳು. ನನ್ನ ತಾಯಿ ಮೈಲಿಗೆಯವಳಾಗಿದ್ದರಿಂದ ಅವಳು ಅಜ್ಜಿಯ ಮನೆಯಲ್ಲಿ ಕಾಲಿಟ್ಟಾಗಲೆಲ್ಲ ಆ ಮನೆ ಅಪವಿತ್ರವಾಗುತ್ತಿತ್ತು. ಆಗ ಇಡೀ ಮನೆಯನ್ನೂ ಮನೆಯಲ್ಲಿದ್ದ ಪ್ರತಿಯೊಬ್ಬ ಸವರ್ಣೀಯ ಹಿಂದುವನ್ನೂ ಪ್ರಾಯಶ್ಚಿತ್ತಪೂರ್ವಕ ಶುದ್ಧಿಗೊಳಿಸಬೇಕಾಗುತ್ತಿತ್ತು. ಈ ಶುದ್ಧಿ ಸಮಾರಂಭ ವಾದ್ಯಮೇಳಗಳ ಗದ್ದಲದೊಂದಿಗೆ ಆಡಂಬರದಿಂದನಡೆಯುವ ಸಮಾರಂಭವಾಗಿರುತ್ತಿತ್ತು. ಅಂತೇ ನಮಗಾಗಿ ಪ್ರತ್ಯೇಕ ಬಿಡಾರದ ವ್ಯವಸ್ಥೆ ಮಾಡಲಾಗಿತ್ತು. ನನ್ನ ತಾಯಿಯನ್ನು ಪ್ರತ್ಯೇಕವಾದ ಮನೆಯಲ್ಲಿಡುವುದರಿಂದ ಈ ಮೈಲಿಗೆ, ಪ್ರಾಯಶ್ಚಿತ್ತಗಳ ಗೊಂದಲದಿಂದ ತಪ್ಪಿಸಿಕೊಳ್ಳಬಹುದಾಗಿತ್ತು.

ನನ್ನ ಅಜ್ಜಿ ನನ್ನ ತಾಯಿಯನ್ನು ಎಂದೂ ಅವಳ ಹೆಸರಿನಿಂದ ಕರೆಯಲಿಲ್ಲ. ಯಾವಾಗಲೂ "ಆ ಇಂಗ್ಲಿಷ್ ಹೆಂಗಸು" ಎಂದೇ ಅನ್ನುತ್ತಿದ್ದಳು. ಇದರಿಂದ ಮತ್ತು ಪ್ರತ್ಯೇಕವಾಗಿಟ್ಟರಲ್ಲ ಎಂಬ ಕಾರಣದಿಂದ ನನ್ನ ತಾಯಿಯ ಪಿತ್ಥ ಕೆರಳಿತು. ಕಲ್ಲಿಕೋಟೆಯಿಂದ ಒಂದಿಷ್ಟು ಔಷಧಿಗಳನ್ನು ತರಿಸಿಕೊಂಡು ಅವಳು ಮನೆಯ ಜಗುಲಿಯಲ್ಲಿ ಒಂದು ದವಾಖಾನೆಯನ್ನು ತೆರೆದಳು. ಹಳ್ಳಿಗರು ದವಾಖಾನೆಗೆ ಮುಕುರತೊಡಗಿದರು. ಇದು ನಮ್ಮಜ್ಜಿಗೆ ನಮ್ಮ ತಾಯಿ ಕೊಟ್ಟ ದಿವ್ಯ ಉತ್ತರವಾಗಿತ್ತು. ತಾನು ಕೊಡುವ ಪ್ರತಿ ಒಂದು ಆಯೋಡಿನ್ ಹನಿ ರೋಗಿಯಮಾತ್ರವಲ್ಲ, ನನ್ನ ಅಜ್ಜಿಯ ವಿವೇಕವನ್ನೂ ಚುಚ್ಚುತ್ತಿತ್ತು ಎಂಬುದನ್ನು ನನ್ನ ತಾಯಿ ಬಲ್ಲವಳಾಗಿದ್ದಳು.

ಅಜ್ಜ ಕೆಲ ಸಮಯ ವಿಚಾರ ಮಾಡಿ ನನ್ನ ತಾಯಿಗೆ ಬಂಗಾರದ ಮೊಹರುಗಳ ಒಂದು ಚೀಲವನ್ನು ಕಳಿಸಿದಳು. ಇದು ಲಂಚವಿರಬೇಕು ಇಲ್ಲವೆ ದೇಣಿಗೆಯಿರಬೇಕು ಎಂದುಕೊಂಡು ನನ್ನ ತಾಯಿ ಅದನ್ನು ತಿರುಗಿ ಕಳಿಸಿದಳು. ಆದರೆ ನಿಜ ಹಾಗಿರಲಿಲ್ಲ. ಈ ಚೀಲ ಸಂಧಾನದ ಕೊಡುಗೆಯಾಗಿತ್ತು. ಮರುದಿನ ಚೀಲ ಒಬ್ಬ ಅಕ್ಕಸಾಲಿಗನ ಜೊತೆಯಲ್ಲಿ ತಿರುಗಿ ಬಂತು. ಆ ಅಕ್ಕಸಾಲಿಗ ಒಂದು ವಾರದ ವರೆಗೂ ನಮ್ಮ ಜಗುಲಿಯಲ್ಲಿ ಉಣ್ಣುತ್ತ ಮಲಗುತ್ತ ಆ ಮೊಹರುಗಳನ್ನು ಕರಗಿಸಿ ಮಲಬಾರಿ ವಧುವು ಹಾಕಿಕೊಳ್ಳುವಂಥ ಚಿನ್ನದ ಕೊರಳ ಪಟ್ಟಿಯನ್ನು ತಯಾರಿಸಿದ. ನನ್ನ ತಾಯಿ ಈಗಲೂ ಅದನ್ನು ಆಗಾಗ ಧರಿಸುತ್ತಾಳೆ.

ಜಗತ್ತಿನಲ್ಲಿಯೆ ಹಿಂದುಗಳು ಅತಿ ನಾಗರಿಕ ಜನಾಂಗವೆಂದು ನನ್ನ ಅಜ್ಜಗೆ ಗೊತ್ತಿತ್ತು. ಇಂಗ್ಲೀಷರಿಗಿಂತಲೂ ಒಂದು ಸಾವಿರ ವರ್ಷಗಳ ಹಿಂದೆಯೆ ಅವರು ಸುಧಾರಿಸಿದ್ದರು. ಅವಳೆಂದೂ ಇಂಗ್ಲೀಷರನ್ನು ಭೆಟ್ಟಿಯಾಗಿದ್ದಿಲ್ಲವಾದರೂ ಅವಳಿಗೆ ಅವರ ವಿಷಯವೆಲ್ಲ ಗೊತ್ತಿತ್ತು. ಇಂಗ್ಲೀಷರು ಎತ್ತರದ, ಗೌರಕಾಯದ ಜನರು. ಮದ್ಯಪಾನ ಮಾಡುವವರು. ಅವರು ಒಳ್ಳೆಯ ಸೈನಿಕರು. ತನ್ನ ದೇಶವನ್ನು ಗೆದ್ದುಕೊಂಡಿದ್ದಾರೆ ಎಂದು ಅವಳು ಬಲ್ಲಳು. ಇಂಗ್ಲೀಷರು ವೈಯಕ್ತಿಕ ವಿಚಾರದಲ್ಲಿ ಬಲು ಹೊಲಸು ಜನ ಎಂದೂ ಅವಳಿಗೆ ಗೊತ್ತಿತ್ತು. ಅವಳು ಇಂಗ್ಲೀಷರನ್ನು ಗೌರವಿಸುತ್ತಿದ್ದಳಾದರೂ ಅವರು ದೂರವಿರಬೇಕೆಂದು ಬಯಸುತ್ತಿದ್ದಳು.

ನನ್ನ ದೊಡ್ಡಪ್ಪ ಇಂಗ್ಲೀಷರ ಪರವಾಗಿ ಮಾತಾಡುತ್ತಿದ್ದ. ಆದರೆ ಸಭ್ಯ, ಶುಚಿರ್ಭೂತ ಗೃಹಸ್ಥರಂತೆ ಇಂಗ್ಲೀಷರು ದಿನಕ್ಕೆ ಕನಿಷ್ಠ ಎರಡು ಸ್ನಾನವನ್ನಾದರೂ ಮಾಡುತ್ತಾರೆಯೆ ಎಂದು ಅಜ್ಜ ಕೇಳಿದರೆ ಅವನು 'ಇಲ್ಲ' ಎಂದೇ ಹೇಳಬೇಕಾಗುತ್ತಿತ್ತು. ಆದರೆ ಕೆಲ ಇಂಗ್ಲೀಷರು ದಿನಕ್ಕೊಮ್ಮೆ ಸ್ನಾನ ಮಾಡುತ್ತಿದ್ದಾರೆಂದೂ ಈ ಪದ್ಧತಿ ಹಬ್ಬತೊಡಗಿದೆಯೆಂದೂ ಇಂಗ್ಲೀಷರ ದೇಶ ಬಲು ಥಂಡಿಯುಳ್ಳ ದೇಶ ಎಂಬುದನ್ನು ಗಮನಿಸಬೇಕು ಎಂದೂ ದೊಡ್ಡಪ್ಪ ಅಜ್ಜಗೆ ಹೇಳುತ್ತಿದ್ದನು. ಅಜ್ಜ ಈ ಮಾತನ್ನು ಒಪ್ಪಿದಳು. ನನ್ನೊಡನೆ ಈ ವಿಚಾರ ಮಾತಾಡುವಾಗ, ಎಸ್ಕಿಮೊ ಜನರು ಪ್ರಾಣಿಗಳ ಕೊಬ್ಬನ್ನು ಉಪಯೋಗಿಸುವ ಅಸಹ್ಯ ರೀತಿಯನ್ನು ಚರ್ಚಿಸುವಾಗ ಜನ ಮಾಡುವಂತೆ ಅದನ್ನು ಗೌಣವಾಗಿ ಕಂಡಂತೆ ಮಾತಾಡುತ್ತಿದ್ದಳು.

ಆಹಾರದ ಸಂಬಂಧದಲ್ಲಿ ನಾನೆಣಿಸಿದಂತೆ ಅವಳಲ್ಲೇನೂ ದೂಷಿತ ಭಾವನೆ ಕಾಣಲಿಲ್ಲ. ಇಂಗ್ಲೀಷರು ಹಂದಿ ಮತ್ತು ಗೋಮಾಂಸವನ್ನು ತಿನ್ನುವುದು ಅವಳಿಗೇನೂ ಆಶ್ಚರ್ಯವೆನಿಸಲಿಲ್ಲ. ಪಾಯಖಾನೆಗಳನ್ನು ಬಳಿಯುವ, ಹುಲ್ಲಿನ ಚಾಪೆಯನ್ನು ಹೆಣೆಯುವ ಅಸ್ಪೃಶ್ಯರಾದ ಗುಡ್ಡಗಾಡು ಜನರು ಕೈಗೆ ಸಿಕ್ಕಿದ್ದನ್ನು ತಿನ್ನುತ್ತಿರಲಿಲ್ಲವೇ ? ಇಂಗ್ಲೀಷರ ಧರ್ಮದ ವಿಷಯದಲ್ಲಿಯೂ ಅವಳು ತಲೆ ಕೆಡಿಸಿಕೊಳ್ಳಲಿಲ್ಲ. ಏಕೆಂದರೆ ನನ್ನ ದೊಡ್ಡಪ್ಪ ಇಂಗ್ಲೀಷರಿಗೆ ಹೇಳಿಕೊಳ್ಳುವಂಥ ಧರ್ಮವೇ ಇಲ್ಲ ಎಂದು ಅವಳಿಗೆ ನಂಬಿಕೆ ಕೊಟ್ಟಿದ್ದ. ಆದರೆ ಅವರ ರೀತಿ-ನೀತಿಗಳನ್ನು, ವಿಶೇಷತಃ ಒಟ್ಟಿಗೆ ಕಲೆತು ಉಣ್ಣುವುದನ್ನು ಮಾತ್ರ ಅವಳು ಅಸಹ್ಯದಿಂದ ಕಾಣುತ್ತಿದ್ದಳು. ಅಜ್ಜಯ ಮನೆಯಲ್ಲಿ ಪ್ರತಿಯೊಬ್ಬನೂ ಪ್ರತ್ಯೇಕವಾಗಿ ಭೋಜನ ಮಾಡುತ್ತಿದ್ದನು. ಒಂದೇ ಟೇಬಲ್ಲಿನ ಮಗ್ಗಲಿಗೆ ಕುಳಿತು ಒಬ್ಬರೊಬ್ಬರು ಬಾಯಲ್ಲಿ ತುತ್ತು ತುರುಕಿ ಜಗಿದು ನುಂಗುವುದನ್ನು ಇಂಗ್ಲೀಷರು ಸಹಿಸಿಕೊಳ್ಳುವರು ಎಂಬ ವಿಚಾರ ಕೇಳಿ ಮನುಷ್ಯ ಮಾಡಲಾರದಂಥದ್ದಾದರೂ ಏನಿದೆ ಎಂಬ ಯೋಚನೆ ನಮ್ಮಜ್ಜಯಲ್ಲಿ ಉಂಟಾಯಿತು.

ಈ ಹಿನ್ನೆಲೆಯಲ್ಲಿ ನನ್ನ ಅಜ್ಜ ಕಳುಹಿದ ಸಂಧಾನ ಕಾಣಿಕೆ ನನ್ನ ತಾಯಿ ಗಳಿಸಿದ ಮಹಾ

ವಿಜಯವೇ ಎನ್ನಬೇಕು. ನಾನಿನ್ನು ಹೋಗಿ ಅಜ್ಜಿಯನ್ನು ಕಾಣಲು ದಾರಿ ತೆರೆದಂತಾಯಿತು. ಇದಕ್ಕಾಗಿ ನಾನು ಸುಮಾರು ಮೂರು ವಾರಗಳ ಕಾಲ ಕಾಯ್ದಿದ್ದೆ.

ನಮ್ಮ ಮತ್ತು ಅಜ್ಜಿಯ ಮನೆಗಳು ಬಲು ದೂರದಲ್ಲಿದ್ದವು. ಮಲಬಾರಿನ ಬಿಸಿಲಿನ ಬೇಗೆಯಲ್ಲಿ ಅಷ್ಟು ದೂರ ನಡೆದುಕೊಂಡು ಹೋಗುವುದು ಸಾಧ್ಯವಿರಲಿಲ್ಲ. ಆದ್ದರಿಂದ ನಾನು ಮೇಣೆಯಲ್ಲಿ ಕುಳಿತು ಹೋದೆ. ನಾಲ್ಕು ಜನ ಹೆಚ್ಚು-ಕಡಿಮೆ ನಗ್ನರೇ ಆಗಿದ್ದ ಜನ ಇದನ್ನು ಹೊತ್ತು ಓಡುತ್ತ ನಡೆದಿದ್ದರು. ಕೆಂಪು-ಬಂಗಾರ ಬಣ್ಣದ ಮೇಣೆ, ಅದನ್ನು ಹೊತ್ತು ಬೆವರಿಳಿಸುತ್ತ ಓಡುತ್ತಿದ್ದ ಜನ, ಇಂಗ್ಲೀಷ್ ಬ್ರೇಝರನ್ನು ತೊಟ್ಟು ನಿರ್ವಿಕಾರನಾಗಿ ಕುಳಿತ ಒಬ್ಬ ಹುಡುಗ—ಈ ದೃಶ್ಯ ತುಂಬ ಪ್ರೇಕ್ಷಣೀಯವಾಗಿದ್ದಿರಬೇಕು.

ನಮ್ಮ ಅಜ್ಜಿಯ ಮನೆ ವಿಶಾಲವೂ ತಂಪಾ-ದದ್ದೂ ಆಗಿತ್ತು. ಸುಂದರವಾದ ಹಿತ್ತಾಳಿ ಪಟ್ಟಿಯುಳ್ಳ ಪೆಟ್ಟಿಗೆಗಳು, ಸಮೆಗಳು ಮತ್ತು ಮಂಚಗಳು ಇಷ್ಟೇ ಅಲ್ಲಿದ್ದ ಸಾಮಾನುಗಳು. ಕೂಡ್ರಲು ನೆಲವಲ್ಲದೆ ಇನ್ನೇನೂ ಇರಲಿಲ್ಲ. ಖುರ್ಚಿಗಳು ಅಸಭ್ಯ, ಅನಾಗರಿಕ ಎಂದು ಅಜ್ಜಿಯ ಭಾವನೆ. ಮೇಜುಗಳಿರಲೇ ಇಲ್ಲ. ಅಜ್ಜಿಯ ಮನೆಯಲ್ಲಿ ಯಾರಾದರೂ ಹೊಸ ಬಾಳೆ ಎಲೆಯಲ್ಲಿ ಅಲ್ಲದೆ ಬೇರೆ ರೀತಿಯಲ್ಲಿ ಊಟ ಮಾಡುವ ಧೈರ್ಯ ಮಾಡಿದರೆ ಅವನಿಗೆ ಮತ್ತೊಂದು ಸಲ ಊಟವನ್ನು ಅಡಿಗೆಮನೆಯಲ್ಲಿಯೇ ಬಡಿಸಲಾಗುತ್ತಿತ್ತು. ಅಡಿಗೆ ಮನೆಯಲ್ಲಿ ಯಾವ ವಿಧಿ-ನಿಷೇಧಗಳಿಲ್ಲದೆ ಆಳುಗಳು ಊಟ ಮಾಡುತ್ತಿದ್ದರು.

ತನ್ನ ಏಕಾಂತ ಗೃಹದಲ್ಲಿ ತನ್ನ ಪೆಟ್ಟಿಗೆಗೆ ತಾಗಿ ಕುಳಿತೇ ಹೆಚ್ಚಾಗಿ ನನ್ನ ಅಜ್ಜ ನನ್ನನ್ನು ಬರಮಾಡಿಕೊಳ್ಳುತ್ತಿದ್ದಳು. ಆ ದೃಶ್ಯ ಚಿರ ಸ್ಮರಣೀಯವಾಗಿರುತ್ತಿತ್ತು. ಕಪ್ಪಾದ ವಿಶಾ-ಲವಾದ ಕಣ್ಣುಗಳು, ನರೆತು ಬೆಳ್ಳಗಾದ ಕೂದಲು, ಹದಿನೆಂಟರ ತರುಣಿಯಂತೆ ಕೆಂಪಾದ ತುಟಿಗಳು. ತನ್ನ ಸಾಮಾಜಿಕ ಅಂತಸ್ತಿನವರಲ್ಲ-ದವರೊಡನೆ ಅವಳು ಮಾತಾಡುವುದು ತೀರ ಕಡಿಮೆಯಾಗಿತ್ತು. ಅಂಥವರನ್ನು ಅವಳು ಔಪ-ಚಾರಿಕ ರೀತಿಯಲ್ಲಿ ಅಂದರೆ ತನ್ನ ಎದೆಯನ್ನು ಏನೇನೂ ಮುಚ್ಚಿಕೊಳ್ಳದೆ ಭೆಟ್ಟಿಯಾಗುತ್ತಿದ್ದಳು. ಅಜ್ಜಿಯ ಕಾಲದಲ್ಲೇ ಹೆಂಗಸರು ಈ ಪದ್ಧತಿಯಲ್ಲಿ ಅನಾದರ ತೋರಲಾರಂಭಿಸಿದ್ದಳು. ನನ್ನ ಅಜ್ಜಿಯ ದೃಷ್ಟಿಯಲ್ಲಿ ಕುಪ್ಪಸ ಮತ್ತು ಸುಂದರ ಸೀರೆಗಳನ್ನು ಧರಿಸುವ ವಿವಾಹಿತ ಸ್ತ್ರೀಯರು ವಿಲಾಸಿನಿಯರೇ ಆಗಿದ್ದರು. ಟೊಂಕದ ಮೇಲೆ ಬಟ್ಟೆ ಧರಿಸುವ ವಿವಾಹಿತ ಸ್ತ್ರೀಯ ಗುರಿ ವ್ಯಭಿ-ಚಾರವಲ್ಲದೆ ಮತ್ತೇನಿರಬಹುದು ?

ಆದರೆ ನನ್ನಜ್ಜ ಇಂಗ್ಲೀಷರನ್ನು ಎಷ್ಟೇ ಹೀನಾಯುವಾಗಿ ಕಂಡರೂ ಅವರಿಗೂ ಅವಳಿಗೂ ತುಂಬ ಸಾಮ್ಯವಿತ್ತು. ಇಂಗ್ಲೀಷರಂತೆ ಅವಳ ಕಲಾಭಿಮಾನವೂ ಅವಳ ಜೀವನದ ಮಹತ್ತರವಾದ ಭಲವಾಗಿತ್ತು. ಭಾರತದ ಇತಿಹಾಸದಷ್ಟೇ ಪ್ರಾಚೀನವಾದ ನಾಯರರ ಕುಲ ನಮ್ಮದು. ಮಲಬಾರಿನಲ್ಲಿ ಅರಸನ ಆಳಿಕೆಯಿದ್ದಾಗ ನನ್ನ ಪೂರ್ವಜರು ಆಗಾಗ ಅವನನ್ನು ಖಡ್ಗದಿಂದ ಸಂಹರಿಸಿ ಹೊಸ ರಾಜನನ್ನು ಆರಿಸುತ್ತಿದ್ದರು. ಅವರಲ್ಲಿ ಪ್ರಜಾಪ್ರಭುತ್ವದ ಬೇರಾವ ಅಂಶವೂ ಇರಲಿಲ್ಲ. ಇಂದಿಗೂ ನಾಯರರಿಗೆ ತಮ್ಮ ಕುಲದ ಹಿರಿಮೆಯ ಪ್ರಜ್ಞೆ ಅಭಿಮಾನಗಳಿವೆ.

ಉಚ್ಚಕುಲದಲ್ಲಿ ಜನ್ಮಿಸಿದವರಲ್ಲಿರಬೇಕಾದ ಲಕ್ಷಣಗಳೆಲ್ಲ ನನ್ನ ಅಜ್ಜಿಯಲ್ಲಿದ್ದವು. ತನ್ನದನ್ನು ಬಿಟ್ಟು ಉಳಿದೆಲ್ಲ ರಾಷ್ಟ್ರಗಳು ಹೀನವೆಂಬ ಭಾವನೆ ಅವಳಲ್ಲಿತ್ತು. ಅವಳು ಯಾವಾಗಲೂ ನನ್ನ ಹತ್ತಿರ "ಯಾವಾಗಲೂ ಹರಿಯುವ ನೀರಿನ-ಲ್ಲಿಯೇ ಸ್ನಾನಮಾಡು. ನೀರು ನಿಲ್ಲುವಂಥ ಸ್ನಾನದ ತೊಟ್ಟಿಯಲ್ಲಿ ಹೊಲಸು ನೀರಲ್ಲಿ ಹೊರಳುವ ಎಮ್ಮೆಯಂತೆ ಸ್ನಾನ ಮಾಡಬೇಡ. ನಿಜವಾದ ನಾಗರಿಕ ಮನುಷ್ಯನು ಎಂದೆಂದಿಗೂ ತಾನು ಸ್ನಾನ ಮಾಡಿಧ ನೀರನ್ನು ನೋಡುವು

ಅಜ್ಜ ಕೆಲ ಸಮಯ ವಿಚಾರ ಮಾಡಿ ನನ್ನ ತಾಯಿಗೆ ಬಂಗಾರದ ಮೊಹರುಗಳ ಒಂದು ಚೀಲವನ್ನು ಕಳಿಸಿದಳು. ಇದು ಲಂಚವಿರಬೇಕು ಇಲ್ಲವೆ ದೇಣಿಗೆಯಿರಬೇಕು ಎಂದುಕೊಂಡು ನನ್ನ ತಾಯಿ ಅದನ್ನು ತಿರುಗಿ ಕಳಿಸಿದಳು. ಆದರೆ ನಿಜ ಹಾಗಿರಲಿಲ್ಲ. ಈ ಚೀಲ ಸಂಧಾನದ ಕೊಡುಗೆಯಾಗಿತ್ತು. ಮರುದಿನ ಚೀಲ ಒಬ್ಬ ಅಕ್ಕಸಾಲಿಗನ ಜೊತೆಯಲ್ಲಿ ತಿರುಗಿ ಬಂತು. ಆ ಅಕ್ಕಸಾಲಿಗ ಒಂದು ವಾರದ ವರೆಗೂ ನಮ್ಮ ಜಗುಲಿಯಲ್ಲಿ ಉಣ್ಣುತ್ತ ಮಲಗುತ್ತ ಆ ಮೊಹರುಗಳನ್ನು ಕರಗಿಸಿ ಮಲಬಾರಿ ವಧುವು ಹಾಕಿಕೊಳ್ಳುವಂಥ ಚಿನ್ನದ ಕೊರಳ ಪಟ್ಟಿಯನ್ನು ತಯಾರಿಸಿದ. ನನ್ನ ತಾಯಿ ಈಗಲೂ ಅದನ್ನು ಆಗಾಗ ಧರಿಸುತ್ತಾಳೆ.

ಜಗತ್ತಿನಲ್ಲಿಯೆ ಹಿಂದುಗಳು ಅತಿ ನಾಗರಿಕ ಜನಾಂಗವೆಂದು ನನ್ನ ಅಜ್ಜಗೆ ಗೊತ್ತಿತ್ತು. ಇಂಗ್ಲೀಷರಿಗಿಂತಲೂ ಒಂದು ಸಾವಿರ ವರ್ಷಗಳ ಹಿಂದೆಯೆ ಅವರು ಸುಧಾರಿಸಿದ್ದರು. ಅವಳೆಂದೂ ಇಂಗ್ಲೀಷರನ್ನು ಭೆಟ್ಟಿಯಾಗಿದ್ದಿಲ್ಲವಾದರೂ ಅವಳಿಗೆ ಅವರ ವಿಷಯವೆಲ್ಲ ಗೊತ್ತಿತ್ತು. ಇಂಗ್ಲೀಷರು ಎತ್ತರದ, ಗೌರಕಾಯದ ಜನರು. ಮದ್ಯಪಾನ ಮಾಡುವವರು. ಅವರು ಒಳ್ಳೆಯ ಸೈನಿಕರು. ತನ್ನ ದೇಶವನ್ನು ಗೆದ್ದುಕೊಂಡಿದ್ದಾರೆ ಎಂದು ಅವಳು ಬಲ್ಲಳು. ಇಂಗ್ಲೀಷರು ವೈಯಕ್ತಿಕ ವಿಚಾರದಲ್ಲಿ ಬಲು ಹೊಲಸು ಜನ ಎಂದೂ ಅವಳಿಗೆ ಗೊತ್ತಿತ್ತು. ಅವಳು ಇಂಗ್ಲೀಷರನ್ನು ಗೌರವಿಸುತ್ತಿದ್ದಳಾದರೂ ಅವರು ದೂರವಿರಬೇಕೆಂದು ಬಯಸುತ್ತಿದ್ದಳು.

ನನ್ನ ದೊಡ್ಡಪ್ಪ ಇಂಗ್ಲೀಷರ ಪರವಾಗಿ ಮಾತಾಡುತ್ತಿದ್ದ. ಆದರೆ ಸಭ್ಯ, ಶುಚಿರ್ಭೂತ ಗೃಹಸ್ಥರಂತೆ ಇಂಗ್ಲೀಷರು ದಿನಕ್ಕೆ ಕನಿಷ್ಠ ಎರಡು ಸ್ನಾನವನ್ನಾದರೂ ಮಾಡುತ್ತಾರೆಯೆ ಎಂದು ಅಜ್ಜ ಕೇಳಿದರೆ ಅವನು 'ಇಲ್ಲ' ಎಂದೇ ಹೇಳಬೇಕಾಗುತ್ತಿತ್ತು. ಆದರೆ ಕೆಲ ಇಂಗ್ಲೀಷರು ದಿನಕ್ಕೊಮ್ಮೆ ಸ್ನಾನ ಮಾಡುತ್ತಿದ್ದಾರೆಂದೂ ಈ ಪದ್ಧತಿ ಹಬ್ಬತೊಡಗಿದೆಯೆಂದೂ ಇಂಗ್ಲೀಷರ ದೇಶ ಬಲು ಥಂಡಿಯುಳ್ಳ ದೇಶ ಎಂಬುದನ್ನು ಗಮನಿಸಬೇಕು ಎಂದೂ ದೊಡ್ಡಪ್ಪ ಅಜ್ಜಗೆ ಹೇಳುತ್ತಿದ್ದನು. ಅಜ್ಜ ಈ ಮಾತನ್ನು ಒಪ್ಪಿದಳು. ನನ್ನೊಡನೆ ಈ ವಿಚಾರ ಮಾತಾಡುವಾಗ, ಎಸ್ಕಿಮೊ ಜನರು ಪ್ರಾಣಿಗಳ ಕೊಬ್ಬನ್ನು ಉಪಯೋಗಿಸುವ ಅಸಹ್ಯ ರೀತಿಯನ್ನು ಚರ್ಚಿಸುವಾಗ ಜನ ಮಾಡುವಂತೆ ಅದನ್ನು ಗೌಣವಾಗಿ ಕಂಡಂತೆ ಮಾತಾಡುತ್ತಿದ್ದಳು.

ಆಹಾರದ ಸಂಬಂಧದಲ್ಲಿ ನಾನೆಣಿಸಿದಂತೆ ಅವಳಲ್ಲೇನೂ ದೂಷಿತ ಭಾವನೆ ಕಾಣಲಿಲ್ಲ. ಇಂಗ್ಲೀಷರು ಹಂದಿ ಮತ್ತು ಗೋಮಾಂಸವನ್ನು ತಿನ್ನುವುದು ಅವಳಿಗೇನೂ ಆಶ್ಚರ್ಯವೆನಿಸಲಿಲ್ಲ. ಪಾಯಖಾನೆಗಳನ್ನು ಬಳಿಯುವ, ಹುಲ್ಲಿನ ಚಾಪೆಯನ್ನು ಹೆಣೆಯುವ ಅಸ್ಪೃಶ್ಯರಾದ ಗುಡ್ಡಗಾಡು ಜನರು ಕೈಗೆ ಸಿಕ್ಕಿದ್ದನ್ನು ತಿನ್ನುತ್ತಿರಲಿಲ್ಲವೇ? ಇಂಗ್ಲೀಷರ ಧರ್ಮದ ವಿಷಯದಲ್ಲಿಯೂ ಅವಳು ತಲೆ ಕೆಡಿಸಿಕೊಳ್ಳಲಿಲ್ಲ. ಏಕೆಂದರೆ ನನ್ನ ದೊಡ್ಡಪ್ಪ ಇಂಗ್ಲೀಷರಿಗೆ ಹೇಳಿಕೊಳ್ಳುವಂಥ ಧರ್ಮವೇ ಇಲ್ಲ ಎಂದು ಅವಳಿಗೆ ನಂಬಿಕೆ ಕೊಟ್ಟಿದ್ದ. ಆದರೆ ಅವರ ರೀತಿ-ನೀತಿಗಳನ್ನು, ವಿಶೇಷತಃ ಒಟ್ಟಿಗೆ ಕಲೆತು ಉಣ್ಣುವುದನ್ನು ಮಾತ್ರ ಅವಳು ಅಸಹ್ಯದಿಂದ ಕಾಣುತ್ತಿದ್ದಳು. ಅಜ್ಜಯ ಮನೆಯಲ್ಲಿ ಪ್ರತಿಯೊಬ್ಬನೂ ಪ್ರತ್ಯೇಕವಾಗಿ ಭೋಜನ ಮಾಡುತ್ತಿದ್ದನು. ಒಂದೇ ಟೇಬಲ್ಲಿನ ಮಗ್ಗಲಿಗೆ ಕುಳಿತು ಒಬ್ಬರೊಬ್ಬರು ಬಾಯಲ್ಲಿ ತುತ್ತು ತುರುಕಿ ಜಗಿದು ನುಂಗುವುದನ್ನು ಇಂಗ್ಲೀಷರು ಸಹಿಸಿಕೊಳ್ಳುವರು ಎಂಬ ವಿಚಾರ ಕೇಳಿ ಮನುಷ್ಯ ಮಾಡಲಾರದಂಥದ್ದಾದರೂ ಏನಿದೆ ಎಂಬ ಯೋಚನೆ ನಮ್ಮಜ್ಜಯಲ್ಲಿ ಉಂಟಾಯಿತು.

ಈ ಹಿನ್ನೆಲೆಯಲ್ಲಿ ನನ್ನ ಅಜ್ಜ ಕಳುಹಿದ ಸಂಧಾನ ಕಾಣಿಕೆ ನನ್ನ ತಾಯಿ ಗಳಿಸಿದ ಮಹಾ

ವಿಜಯವೇ ಎನ್ನಬೇಕು. ನಾನಿನ್ನು ಹೋಗಿ ಅಜ್ಜಿಯನ್ನು ಕಾಣಲು ದಾರಿ ತೆರೆದಂತಾಯಿತು. ಇದಕ್ಕಾಗಿ ನಾನು ಸುಮಾರು ಮೂರು ವಾರಗಳ ಕಾಲ ಕಾಯ್ದಿದ್ದೆ.

ನಮ್ಮ ಮತ್ತು ಅಜ್ಜಿಯ ಮನೆಗಳು ಬಲು ದೂರದಲ್ಲಿದ್ದವು. ಮಲಬಾರಿನ ಬಿಸಿಲಿನ ಬೇಗೆಯಲ್ಲಿ ಅಷ್ಟು ದೂರ ನಡೆದುಕೊಂಡು ಹೋಗುವುದು ಸಾಧ್ಯವಿರಲಿಲ್ಲ. ಆದ್ದರಿಂದ ನಾನು ಮೇಣೆಯಲ್ಲಿ ಕುಳಿತು ಹೋದೆ. ನಾಲ್ಕು ಜನ ಹೆಚ್ಚು-ಕಡಿಮೆ ನಗ್ನರೇ ಆಗಿದ್ದ ಜನ ಇದನ್ನು ಹೊತ್ತು ಓಡುತ್ತ ನಡೆದಿದ್ದರು. ಕೆಂಪು-ಬಂಗಾರ ಬಣ್ಣದ ಮೇಣೆ, ಅದನ್ನು ಹೊತ್ತು ಬೆವರಿಳಿಸುತ್ತ ಓಡುತ್ತಿದ್ದ ಜನ, ಇಂಗ್ಲೀಷ್ ಬ್ರೇಝರನ್ನು ತೊಟ್ಟು ನಿರ್ವಿಕಾರನಾಗಿ ಕುಳಿತ ಒಬ್ಬ ಹುಡುಗ—ಈ ದೃಶ್ಯ ತುಂಬ ಪ್ರೇಕ್ಷಣೀಯವಾಗಿದ್ದಿರಬೇಕು.

ನಮ್ಮ ಅಜ್ಜಿಯ ಮನೆ ವಿಶಾಲವೂ ತಂಪಾದದ್ದೂ ಆಗಿತ್ತು. ಸುಂದರವಾದ ಹಿತ್ತಾಳಿ ಪಟ್ಟಿಯುಳ್ಳ ಪೆಟ್ಟಿಗೆಗಳು, ಸಮೆಗಳು ಮತ್ತು ಮಂಚಗಳು ಇಷ್ಟೇ ಅಲ್ಲಿದ್ದ ಸಾಮಾನುಗಳು. ಕೂಡ್ರಲು ನೆಲವಲ್ಲದೆ ಇನ್ನೇನೂ ಇರಲಿಲ್ಲ. ಖುರ್ಚಿಗಳು ಅಸಭ್ಯ, ಅನಾಗರಿಕ ಎಂದು ಅಜ್ಜಿಯ ಭಾವನೆ. ಮೇಜುಗಳಿರಲೇ ಇಲ್ಲ. ಅಜ್ಜಿಯ ಮನೆಯಲ್ಲಿ ಯಾರಾದರೂ ಹೊಸ ಬಾಳೆ ಎಲೆಯಲ್ಲಿ ಅಲ್ಲದೆ ಬೇರೆ ರೀತಿಯಲ್ಲಿ ಊಟ ಮಾಡುವ ಧೈರ್ಯ ಮಾಡಿದರೆ ಅವನಿಗೆ ಮತ್ತೊಂದು ಸಲ ಊಟವನ್ನು ಅಡಿಗೆಮನೆಯಲ್ಲಿಯೇ ಬಡಿಸಲಾಗುತ್ತಿತ್ತು. ಅಡಿಗೆ ಮನೆಯಲ್ಲಿ ಯಾವ ವಿಧಿ-ನಿಷೇಧಗಳಿಲ್ಲದೆ ಆಳುಗಳು ಊಟ ಮಾಡುತ್ತಿದ್ದರು.

ತನ್ನ ಏಕಾಂತ ಗೃಹದಲ್ಲಿ ತನ್ನ ಪೆಟ್ಟಿಗೆಗೆ ತಾಗಿ ಕುಳಿತೇ ಹೆಚ್ಚಾಗಿ ನನ್ನ ಅಜ್ಜ ನನ್ನನ್ನು ಬರಮಾಡಿಕೊಳ್ಳುತ್ತಿದ್ದಳು. ಆ ದೃಶ್ಯ ಚಿರ ಸ್ಮರಣೀಯವಾಗಿರುತ್ತಿತ್ತು. ಕಪ್ಪಾದ ವಿಶಾಲವಾದ ಕಣ್ಣುಗಳು, ನರೆತು ಬೆಳ್ಳಗಾದ ಕೂದಲು, ಹದಿನೆಂಟರ ತರುಣಿಯಂತೆ ಕೆಂಪಾದ ತುಟಿಗಳು. ತನ್ನ ಸಾಮಾಜಿಕ ಅಂತಸ್ತಿನವರಲ್ಲ-ದವರೊಡನೆ ಅವಳು ಮಾತಾಡುವುದು ತೀರ ಕಡಿಮೆಯಾಗಿತ್ತು. ಅಂಥವರನ್ನು ಅವಳು ಔಪಚಾರಿಕ ರೀತಿಯಲ್ಲಿ ಅಂದರೆ ತನ್ನ ಎದೆಯನ್ನು ಏನೇನೂ ಮುಚ್ಚಿಕೊಳ್ಳದೆ ಭೆಟ್ಟಿಯಾಗುತ್ತಿದ್ದಳು. ಅಜ್ಜಿಯ ಕಾಲದಲ್ಲೇ ಹೆಂಗಸರು ಈ ಪದ್ಧತಿಯಲ್ಲಿ ಅನಾದರ ತೋರಲಾರಂಭಿಸಿದ್ದಳು. ನನ್ನ ಅಜ್ಜಿಯ ದೃಷ್ಟಿಯಲ್ಲಿ ಕುಪ್ಪಸ ಮತ್ತು ಸುಂದರ ಸೀರೆಗಳನ್ನು ಧರಿಸುವ ವಿವಾಹಿತ ಸ್ತ್ರೀಯರು ವಿಲಾಸಿನಿಯರೇ ಆಗಿದ್ದರು. ಟೊಂಕದ ಮೇಲೆ ಬಟ್ಟೆ ಧರಿಸುವ ವಿವಾಹಿತ ಸ್ತ್ರೀಯ ಗುರಿ ವ್ಯಭಿಚಾರವಲ್ಲದೆ ಮತ್ತೇನಿರಬಹುದು ?

ಆದರೆ ನನ್ನಜ್ಜ ಇಂಗ್ಲೀಷರನ್ನು ಎಷ್ಟೇ ಹೀನಾಯವಾಗಿ ಕಂಡರೂ ಅವರಿಗೂ ಅವಳಿಗೂ ತುಂಬ ಸಾಮ್ಯವಿತ್ತು. ಇಂಗ್ಲೀಷರಂತೆ ಅವಳ ಕಲಾಭಿಮಾನವೂ ಅವಳ ಜೀವನದ ಮಹತ್ತರವಾದ ಛಲವಾಗಿತ್ತು. ಭಾರತದ ಇತಿಹಾಸದಷ್ಟೇ ಪ್ರಾಚೀನವಾದ ನಾಯರರ ಕುಲ ನಮ್ಮದು. ಮಲಬಾರಿನಲ್ಲಿ ಅರಸನ ಆಳಿಕೆಯಿದ್ದಾಗ ನನ್ನ ಪೂರ್ವಜರು ಆಗಾಗ ಅವನನ್ನು ಖಡ್ಗದಿಂದ ಸಂಹರಿಸಿ ಹೊಸ ರಾಜನನ್ನು ಆರಿಸುತ್ತಿದ್ದರು. ಅವರಲ್ಲಿ ಪ್ರಜಾಪ್ರಭುತ್ವದ ಬೇರಾವ ಅಂಶವೂ ಇರಲಿಲ್ಲ. ಇಂದಿಗೂ ನಾಯರರಿಗೆ ತಮ್ಮ ಕುಲದ ಹಿರಿಮೆಯ ಪ್ರಜ್ಞೆ ಅಭಿಮಾನಗಳಿವೆ.

ಉಚ್ಚಕುಲದಲ್ಲಿ ಜನ್ಮಿಸಿದವರಲ್ಲಿರಬೇಕಾದ ಲಕ್ಷಣಗಳೆಲ್ಲ ನನ್ನ ಅಜ್ಜಿಯಲ್ಲಿದ್ದವು. ತನ್ನದನ್ನು ಬಿಟ್ಟು ಉಳಿದೆಲ್ಲ ರಾಷ್ಟ್ರಗಳು ಹೀನವೆಂಬ ಭಾವನೆ ಅವಳಲ್ಲಿತ್ತು. ಅವಳು ಯಾವಾಗಲೂ ನನ್ನ ಹತ್ತಿರ "ಯಾವಾಗಲೂ ಹರಿಯುವ ನೀರಿನಲ್ಲಿಯೇ ಸ್ನಾನಮಾಡು. ನೀರು ನಿಲ್ಲುವಂಥ ಸ್ನಾನದ ತೊಟ್ಟಿಯಲ್ಲಿ ಹೊಲಸು ನೀರಲ್ಲಿ ಹೊರಳುವ ಎಮ್ಮೆಯಂತೆ ಸ್ನಾನ ಮಾಡಬೇಡ. ನಿಜವಾದ ನಾಗರಿಕ ಮನುಷ್ಯನು ಎಂದೆಂದಿಗೂ ತಾನು ಸ್ನಾನ ಮಾಡಿದ ನೀರನ್ನು ನೋಡುವು

ದಿಲ್ಲ. ಅವರಲ್ಲಿ ಕುಳಿತುಕೊಳ್ಳುವ ಮಾತಂತೂ ದೂರ ಉಳಿಯಿತು" ಎಂದು ಹೇಳುತ್ತಿದ್ದಳು.

ನಾನು ಬೇಗನೆ ನನ್ನ ವಿದ್ಯಾಭ್ಯಾಸಕ್ಕಾಗಿ ಕಾಡು ಜನರ ದೇಶಕ್ಕೆ ಮರಳಿ ಹೋಗಲಿದ್ದುದರಿಂದ ಅವಳು ನನ್ನ ಕೈಗೊಂದು ಸಣ್ಣ ಪುಸ್ತಕವನ್ನು ಕೊಟ್ಟಳು. ಅದರಲ್ಲಿ ನನ್ನ ಕುಲದ ಕರ್ತವ್ಯ ಮತ್ತು ಅಧಿಕಾರಗಳೆಲ್ಲ ಬರೆಯಲ್ಪಟ್ಟಿದ್ದವು. ತಾಳೆಗರಿಗಳ ಆ ಪುಸ್ತಕ ಎರಡು ಹಲಗೆಗಳ ನಡುವೆ ಪೋಣಿಸಲ್ಪಟ್ಟಿತ್ತು. ನಮ್ಮನ್ನು ಇತರ ಮನುಷ್ಯರಿಗಿಂತ ಶ್ರೇಷ್ಠವಾದ ಕುಲದಲ್ಲಿ ಹುಟ್ಟಿಸಿದ್ದಕ್ಕಾಗಿ ದೇವರನ್ನು ಕೊಂಡಾಡುವ ಪ್ರಾರ್ಥನೆಯೊಂದಿಗೆ ಆ ಪುಸ್ತಕ ಆರಂಭವಾಗಿತ್ತು.

ಇಂಗ್ಲೀಷರಲ್ಲಿ ಓಡಾಡುವಾಗ ನಾನು ಯಾರು, ಯಾವ ಕುಲದವ ಎಂದು ಸದಾ ನೆನಪಿಡುವಂತೆ ಅಜ್ಜ ನನಗೆ ವಿನಂತಿ ಮಾಡಿಕೊಂಡಳು. "ನಾಯರನಾದ ನೀನು ತಮಗೆ ಮಾರ್ಗದರ್ಶಕನಾಗಬೇಕು ಎಂದು ಅವರು (ಇಂಗ್ಲೀಷರು) ಬಯಸುತ್ತಾರೆ. ತಮಗಿಂತಲೂ ೨೦೦೦ ವರ್ಷಗಳ ಪೂರ್ವದ ನಾಗರಿಕತೆಯ ಜ್ಞಾನದ ಬಲ ನಿನಗಿದೆಯೆಂದು ಗೊತ್ತಿರುವ ಅವರು ನಿನ್ನಿಂದ ಕಲಿಯಲು ಸಿದ್ಧರಾಗುವರು. ಅವರಿಗೆ ಈ ಪುಸ್ತಕವನ್ನು ತೋರಿಸು. ಅವರಿನ್ನೂ ಬತ್ತಲೆಯಾಗಿ ಅಡ್ಡಾಡುತ್ತಿದ್ದಾಗ ಈ ಪುಸ್ತಕ ಬರೆಯಲ್ಪಟ್ಟಿತ್ತು. ಆದರೆ ಎಲ್ಲಕ್ಕಿಂತಲೂ ನಿನ್ನ ವೈಯಕ್ತಿಕ ನಡತೆಯೆ ಹೆಚ್ಚು ಪ್ರಭಾವ ಬೀರುವುದು ಎಂಬುದನ್ನು ಮರೆಯಬೇಡ" ಎಂದು ಅವಳು ಹೇಳುತ್ತಿದ್ದಳು.

ಲಂಡನ್ ಬಿಡುವಾಗ ನನ್ನ ಹೆಡ್ಮಾಸ್ತರರಿತ್ತ ಉಪದೇಶ ಕೇಳಿ ಪ್ರಭಾವಿತನಾದಂತೆ ಅಜ್ಜಿಯ ಈ ಉಪದೇಶದಿಂದಲೂ ತುಂಬ ಪ್ರಭಾವಿತನಾದೆ. "ನೀನು ಇಂಗ್ಲೀಷ್ ಶಾಲೆಯಲ್ಲಿ ತರಬೇತಿ ಹೊಂದಿದವನು ಎಂಬುದು ಅವರಿಗೆ ಗೊತ್ತಾಗಲಿ. ನೀನು ಎಲ್ಲಿ ಹೋದರೂ ಮಾದರಿಯಾಗಿರಬೇಕು" ಎಂದು ನನ್ನ ಹೆಡ್ಮಾಸ್ತರರು ಹೇಳಿದ್ದರು.

ಮಲಬಾರನ್ನು ಒಂದಿಷ್ಟು ಗೊಂದಲದ ಮನಃಸ್ಥಿತಿಯಲ್ಲೆ ಬಿಟ್ಟೆ. ನಾನು ಇಂಗ್ಲೀಷ್ ತರುಣನೋ ಅಥವಾ ಭಾರತದ ನಾಯರ ತರುಣನೊ ಎಂಬುದೇ ನನಗೆ ತಿಳಿಯದಂತಾಗಿತ್ತು. ಇವೆರಡರಲ್ಲಿ ಪ್ರತಿಯೊಂದೂ ತಾನೇ ಶ್ರೇಷ್ಠ, ಇನ್ನೊಂದು ಅನಾಗರಿಕ, ಹೊಲಸು ಎಂದು ಸಾಧಿಸುತ್ತಿತ್ತು.

ಕೊನೆಗೆ ನಾನು ಇವೆರಡರಿಂದಲೂ ಸ್ವತಂತ್ರನಾಗಿರುವೆ, ನಾನು ನಾನೇ ಆಗಿರುವೆ ಎಂದು ನಿರ್ಧರಿಸಿದೆ. ಇದೇ ಜಾಣತನದ ಹೆಜ್ಜೆಯಾಗಿತ್ತೆನ್ನಬಹುದು. *



ರಾತ್ರಿ ಮೂರು ಗಂಟೆಯಾಗಿತ್ತು. ಟೆಲಿಫೋನ್ ಗಂಟೆ ಬಾರಿಸಲು ಆತ ಹಾಸಿಗೆಯಿಂದೆದ್ದು ನಿದ್ದೆಗಣ್ಣಿನಲ್ಲಿಯೆ ಫೋನ್ ಎತ್ತಿಕೊಂಡು "ಹಲೊ" ಎಂದ.

"ಗಡಿಯಾರದ ಅಂಗಡಿ ಮಾಲಿಕರು ತಾನೇ?"

"ಹೌದು."

"ನೀವು ನನಗೆ ಮಾರಿದ ಗಡಿಯಾರ ತುಂಬ ಚೆನ್ನಾಗಿದೆ ಸ್ವಾಮಿ. ಆದರೆ ಒಂದು ಮಾತು.."

"ಇದಕ್ಕಾಗಿ ಈ ಅಪರಾತ್ರಿಯಲ್ಲಿ ನನ್ನನ್ನು ಎಬ್ಬಿಸಿದಿರಾ?"

"ಇನ್ನೇನು ಮಾಡಲಿ? ಬೆಳಿಗ್ಗೆ ೬ಕ್ಕೆಂದು ಅಲಾರಂ ಇಟ್ಟರೆ ಈಗೈದು ನಿಮಿಷಗಳ ಹಿಂದೆ ಅಲಾರಂ ಆಯಿತು."

ಬಂಗಾಲದ ಹುಲಿ ಆಫ್ರಿಕದ ಸಿಂಹ—
ಅಡವಿಯ ನಿಜವಾದ ರಾಜ ಯಾರು ?

# ಅರಣ್ಯದಲ್ಲಿ ಸಂಗ್ರಾಮ

ಜೋರಾವರ ಸಿಂಹ

೨೦-೨೨ ವರ್ಷಗಳ ಹಿಂದಿನ ಮಾತು. ಆಫ್ರಿಕದ ಕೆಲ ಸಿಂಹಗಳನ್ನು ತಂದು ಮೈಸೂರು ರಾಜ್ಯದ ಅಡವಿಗಳಲ್ಲಿ ಬಿಟ್ಟಿದ್ದರು. ಮೈಸೂರು ರಾಜ್ಯದಲ್ಲಿ ದಟ್ಟಡವಿಗಳಿರುವಂತೆ ಆಫ್ರಿಕದ ಸಿಂಹಗಳ ವಾಸಕ್ಕೆ ಯೋಗ್ಯವಾದಂಥ ವಿರಳ ಗಿಡಗಂಟಿಗಳಿರುವ ಅಡವಿಗಳೂ ಇವೆ. ಆಫ್ರಿಕದ ಸಿಂಹಗಳಿಗೆ ಬಯಲು ಹವೆ ಪ್ರಿಯವಾದದ್ದು.

ಒಂದು ಕಾಲದಲ್ಲಿ ಭಾರತದಲ್ಲಿ ಸಿಂಹಗಳ ಸಂಖ್ಯೆ ವಿಪುಲವಾಗಿತ್ತು ಎನ್ನುತ್ತಾರೆ. ಕಥೆ ಆಖ್ಯಾಯಿಕೆಗಳಲ್ಲಿ ಕೂಡ ಸಿಂಹಗಳ ಉಲ್ಲೇಖ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ಸಿಂಹಗಳ ಬೇಟೆಯ ಶೌರ್ಯಪೂರ್ಣ ವಿವರಗಳೂ ಇವೆ. ಆದರೆ ಕೆಲ ವರ್ಷಗಳಿಂದ ಭಾರತದಲ್ಲಿ ಸಿಂಹಗಳು ಕೇವಲ ಗೀರ್ ಅರಣ್ಯದಲ್ಲಿ ಮಾತ್ರ ವಾಸಿಸುತ್ತಿದ್ದು ಅಲ್ಲಿ ಕೂಡ ಸರಕಾರ ಅವುಗಳ ಸಂರಕ್ಷಣೆಯ ಏರ್ಪಾಡು ಮಾಡಿರದಿದ್ದರೆ, ಅವು ನಾಮಶೇಷವಾಗಿಬಿಡುತ್ತಿದ್ದವು.

ಈ ಸುಂದರ ಪ್ರಾಣಿಯ ವಸತಿಯ ವ್ಯವಸ್ಥೆಯನ್ನು ಮೈಸೂರು ಸರಕಾರ ಮಾಡಿದಾಗ ನಮಗೆಲ್ಲ ಆ ಪ್ರಯೋಗ ಸಂತೋಷವನ್ನುಂಟು ಮಾಡಿತು. ಏಕೆಂದರೆ ಸಿಂಹ ಮತ್ತು ಭಾರತೀಯ ಹುಲಿಗಳ ಸಂಬಂಧದಲ್ಲಿ ಕೆಲವೊಂದು ಕುತೂಹಲಕಾರಕ ಪ್ರಯೋಗಗಳು ಇದರಿಂದ ಕಾಣಸಿಗಬಹುದಾಗಿತ್ತು. ಈ ವಿಷಯದಲ್ಲಿ ಎಷ್ಟೋ ಸಂದೇಹಗಳು, ಎಷ್ಟೋ ಕಲ್ಪನೆಗಳು ನಮ್ಮನ್ನೆಲ್ಲ ಅನಿಶ್ಚಿತತೆಯಲ್ಲಿಟ್ಟಿದ್ದವು.

ಆಫ್ರಿಕದಿಂದ ತಂದ ಸಿಂಹಗಳಲ್ಲಿ ಕೆಲವು ಗಂಡು, ಕೆಲವು ಹೆಣ್ಣು ಮತ್ತು ಕೆಲವು ಮರಿಗಳಿದ್ದವು. ಗೀರ್‌ನಿಂದಲೂ ಸಿಂಹಗಳನ್ನು ತಂದಿದ್ದರು. ಇವೆಲ್ಲವುಗಳಿಗಾಗಿ ಅಡವಿಯ ಒಂದು ಭಾಗವನ್ನೆ ಪ್ರತ್ಯೇಕವಾಗಿ ಮೀಸಲಾಗಿಟ್ಟಿದ್ದರು. ಆಫ್ರಿಕ ಮತ್ತು ಗೀರ್ ಸಿಂಹಗಳಲ್ಲಿ ಕೆಲ ವ್ಯತ್ಯಾಸಗಳಿರುವುದು ಸ್ಪಷ್ಟವಿತ್ತು. ಗೀರ್ ಸಿಂಹಗಳು ಆಫ್ರಿಕದ ಸಿಂಹದ ಜಾತಿಯವೇ ಆಗಿದ್ದರೂ ಹವಾಮಾನದ ಫಲವಾಗಿಯೊ ಸಂಸರ್ಗದೋಷದಿಂದಲೊ ಆಲಸಿ ಮತ್ತು ಹೊಟ್ಟೆಬಾಕ ಪ್ರಾಣಿಗಳಾಗಿ ಬಿಟ್ಟಿದ್ದವು. ಆಫ್ರಿಕದ ಸಿಂಹಗಳು ಹೆಚ್ಚು ಚಟುವಟಿಕೆಯುಳ್ಳವೂ ಸಹನಶೀಲವೂ ಆಗಿದ್ದವು. ರಾಯಲ್ ಬಂಗಾಲ ಹುಲಿ ಮತ್ತು ಆಫ್ರಿಕದ ಸಿಂಹಗಳಲ್ಲಿರುವ ಬೇಟೆಯ ಚಾತುರ್ಯವನ್ನು ಗೀರ್ ಸಿಂಹಗಳಲ್ಲಿ ನಾನೆಂದೂ ಕಂಡಿಲ್ಲ.

ಈ ಪ್ರಯೋಗದಿಂದ ಭಾರತದಲ್ಲಿ ಮಾತ್ರವಲ್ಲ, ಇಡೀ ಏಶಿಯದಲ್ಲಿ ಸಿಂಹಗಳ ಕುಲ ಮಾಯವಾಗಿ ಆಫ್ರಿಕದಲ್ಲಿ ಹೇಗೆ ಕಾಣಿಸಿಕೊಂಡಿತು ಎಂಬ ಶೋಧವೂ ಆಗುವಂತಿತ್ತು. ಮೈಸೂರಿನಂತೆ ಕೆನ್ಯಾದಲ್ಲಿ ಕೂಡ ಗವರ್ನರ್

“ ಸಾರಿಕಾ ” ದಿಂದ

ಸರ್ ರಾಲ್ಫ್ ವಾಟ್ಸನ್ನರು ಮಾಡಿದ್ದರು. ಅವರು ಕಾಡುಪ್ರಾಣಿಗಳ ಮನೋವಿಜ್ಞಾನದ ತಜ್ಞರೆಂಬು ಖ್ಯಾತಿವೆತ್ತವರು. ಅವರು ಕೆನ್ಯಾದ ಅಡವಿಗಳಲ್ಲಿ ಸಿಂಹಗಳ ನಡುವೆ ಭಾರತದ ಹುಲಿಗಳನ್ನಿಟ್ಟು ಅವೆರಡರ ಮನೋವಿಜ್ಞಾನ ಮತ್ತು ಕುಲವಿಶೇಷತೆಯ ತುಲನಾತ್ಮಕ ಅಭ್ಯಾಸವನ್ನು ಮಾಡಿದ್ದರು. ಅದರ ಪರಿಣಾಮ ನನಗೆ ಗೊತ್ತಿತ್ತು. ಭಾರತದ ಹುಲಿಗೆ ಅಲ್ಲಿರಲಾಗಲಿಲ್ಲ. ಸಿಂಹಗಳು ಅದನ್ನು ಹೊಡೆದೋಡಿಸಿದವು ಎಂದಿಷ್ಟೇ ಹೇಳಲಾಗಿತ್ತು. ಆದರೆ ಸರ್ ವಾಟ್ಸನ್ನರು ಈ ಕಾರಣವನ್ನೊಪ್ಪಲು ಸಿದ್ಧರಿರಲಿಲ್ಲ. ಈ ತರ್ಕವನ್ನು ವಿರೋಧಿಸುತ್ತ ಅವರು ಹೇಳಿದ ಮಾತು ಇದಕ್ಕೆ ವಿರುದ್ಧವಾಗಿದೆ. "ರಾಯಲ್ ಬಂಗಾಲ ಹುಲಿಯನ್ನು ಸಿಂಹ ಎಂದೂ ಗೆಲ್ಲಲಿಲ್ಲ. ಅದರ ಎದುರು ಸಿಂಹ ಯಾವಾಗಲೂ ಪಲಾಯನವನ್ನೇ ಹೇಳಿತು. ಆದರೆ ಭಾರತೀಯ ಹುಲಿಗೆ ವಿರಳ ಅಡವಿ ಹಿಡಿಸುವುದಿಲ್ಲ. ಮತ್ತು ಅದು ಜನವಸತಿಗೆ ಸಮೀಪವಾಗಿರುವ ರೂಢಿ ಮಾಡಿಕೊಂಡಿದೆ. ಜನವಸತಿಯಿಂದ ದೂರವಿರಲು ಅದು ಬಯಸುವುದಿಲ್ಲ" ಎಂದು ಅವರು ಹೇಳಿದರು.

ನನ್ನ ಅಭಿಪ್ರಾಯವೂ ಹಾಗೆಯೆ ಇದೆ. ಆಫ್ರಿಕದ ಹುಲಿಗೆ ಭಾರತೀಯ ಹುಲಿ ಎಂದೂ ಸೋಲಲಿಕ್ಕಿಲ್ಲ. ಎರಡನ್ನೂ ನಾನು ಎಷ್ಟೋ ಸಲ ಅತಿ ಸಮೀಪದಿಂದ ನೋಡಿದ್ದೇನೆ. ಆದರೆ ಆಫ್ರಿಕದ ಹುಲಿ ಈರ್ಷೆಯಿಂದ ಕಾದುತ್ತದೆ. ಬಂಗಾಲ ಹುಲಿಗೇನೂ ಅದು ಹೆದರುವುದಿಲ್ಲ. ಆದರೆ ಅದಕ್ಕೆ ಬಹಳ ಹೊತ್ತಿನ ವರೆಗೆ ಕಾದುವ ಸ್ಥೈರ್ಯವಿಲ್ಲ. ಜೊತೆಗೆ ಅದು ಬಲು ದಡ್ಡ ಪ್ರಾಣಿಯೂ ಹೌದು. ಶತ್ರುವಿನ ತಂತ್ರಗಳನ್ನೆಲ್ಲ ಕ್ಷಣಾರ್ಧದಲ್ಲಿ ಮರೆತುಬಿಡುತ್ತದೆ.

ಮೈಸೂರಿನಲ್ಲಿ ಪ್ರಯೋಗ ಆರಂಭವಾದ ಕೆಲ ತಿಂಗಳ ನಂತರ ನನ್ನನ್ನು ಅಲ್ಲಿಗೆ ಕರೆಸಿದರು. ಬೇಟೆಗೆಂದು ಈ ಮೊದಲು ಕೂಡ ನಾನು ಹಲವಾರು ಸಲ ಮೈಸೂರಿಗೆ ಹೋಗಿದ್ದೆ. ಅಲ್ಲಿಯ ಅಡವಿಗಳಲ್ಲಿ ಒಂದು ವೈಶಿಷ್ಟ್ಯವಿದೆ. ಅಲ್ಲಿ ಬೇಟೆ ಎಬ್ಬಿಸುವ ಜನ ಸಿಗುವುದಿಲ್ಲ ಮತ್ತು ರಸ್ತೆಗಳು ತುಂಬ ಭ್ರಮೆಯನ್ನುಂಟುಮಾಡುತ್ತವೆ ಎಂಬ ಮಾತನ್ನು ಬಿಟ್ಟರೆ ನನಗ ಅಲ್ಲಿಯ ಅಡವಿಯಲ್ಲಿ ಒಂದು ಹೆಚ್ಚಿನ ಆಕರ್ಷಣೆಯಿದೆ.



ಮೈಸೂರಿನ ಅಡವಿಯಲ್ಲಿ ಅಫ್ರಿಕದ ಮತ್ತು ಗೀರ್ ಸಿಂಹಗಳನ್ನು ತಂದು ಬಿಟ್ಟಾಗ ಅಲ್ಲಿ ಹುಲಿಗಳೂ ಇದ್ದವು. ಅವೇ ಅಡವಿಯ ಚಕ್ರವರ್ತಿಗಳಾಗಿದ್ದವು. ಹೊಸತಾಗಿ ಬಂದ ಪ್ರಾಣಿಗಳಿಗೆ ಆತಂಕವಾಗಬಾರದೆಂದು ಬೇಟೆಗಾರರು ಅವನ್ನು ಹೆಚ್ಚು ದಟ್ಟವಾದ ಅಡವಿಗಳಿಗೆ ಓಡಿಸಿದರು.

ಒಂದೆರಡು ವಾರಗಳ ವರೆಗೆ ಈ ಹೊಸ ಅತಿಥಿಗಳ ಜೀವನ ನಿರಾತಂಕವಾಗಿ, ಸುಖವಾಗಿ ಸಾಗಿತು. ಆ ಮೇಲೆ ಅಲ್ಲಿ ಘರ್ಷಣೆಗಾರಂಭವಾಯಿತು. ಸಿಂಹಗಳಿಗೆ ಮೊದಲು ಚಿರ್ಚುಗಳ ಉಪದ್ರವವಾಯಿತು. ಸಿಂಹದ ಎದುರು ಚಿರ್ಚು ಸಣ್ಣ ಪ್ರಾಣಿ. ಆದರೆ ಅದರ ತಂತ್ರ ಬಹು ಕುಶಲವಾದದ್ದು. ಅದನ್ನು ಬೆನ್ನಟ್ಟಿಕೊಂಡು ಹೋಗಲು ಸಿಂಹ ತುಂಬ ಶ್ರಮಪಡಬೇಕಾಗುತ್ತಿತ್ತು.

ಆದರೆ ಚಿರ್ಚುಗಳ ಉಪದ್ರವ ಪೀಠಿಕೆಯಂತಿತ್ತು, ಅಷ್ಟೆ. ಹುಲಿಗಳಿಂದಲೇ ಮುಖ್ಯ ತೊಂದರೆ ಬಂತು. ಒಂದು ವಿಶೇಷವೆಂದರೆ, ಆನೆಗಳು ಈ ಘರ್ಷಣೆಯಿಂದ ಅಲಿಪ್ತವಾಗಿದ್ದು ತಾವೇ ಸ್ವತಃ ದೂರದ ಸ್ಥಳಕ್ಕೆ ಹೋಗಿಬಿಟ್ಟವು.

ಒಮ್ಮೆ ಒಂದು ಎಮ್ಮೆಯ ಮೇಲೆ ಏಕಕಾಲಕ್ಕೆ ಸಿಂಹ ಮತ್ತು ಹುಲಿ ಎರಡೂ ಜಿಗಿದಾಗ ಸಿಂಹಗಳ ಆಗಮನ ಹುಲಿಗಳಿಗೆ ತುಂಬ ಉಪದ್ರವಕಾರಿಯೆನಿಸಿತು. ತನ್ನ ರಾಜ್ಯದಲ್ಲಿ ಇನ್ನೊಂದು ಪ್ರಾಣಿ ಬೇಟೆಯಾಡುವುದು ಹುಲಿಗೆ ಸಹನವಾಗಲಿಲ್ಲ. ಅದು ಸಿಂಹಕ್ಕಿಂತ ಮೊದಲು ನೆಗೆದು ಎಮ್ಮೆಯ ಕುತ್ತಿಗೆ ಹಿಡಿಯಿತು. ಅದೇ ಸಮಯದಲ್ಲಿ ಸಿಂಹ ಹಾರಿ ಎಮ್ಮೆಯ ತಲೆ ಕಚ್ಚಿತು. ನಿಮಿಷಾರ್ಧದಲ್ಲಿ ವಾತಾವರಣ ಬದಲಾಗಿ ಹೋಯಿತು. ಎಮ್ಮೆ ಕೆಳಗೆ ಬಿದ್ದಿತ್ತು. ಸಿಂಹ ಮತ್ತು ಹುಲಿ ಎದುರುಬದುರಾಗಿ ಪರಸ್ಪರರನ್ನು ನೆಟ್ಟದೃಷ್ಟಿಯಿಂದ ನೋಡುತ್ತ ನಿಂತವು.

ಸಿಂಹಕ್ಕೆ ಈ ಆಗಂತುಕನ ಕಲ್ಪನೆಯೂ ಇರಲಿಲ್ಲ. ಇಂಥ ಧಾರ್ಷ್ಟ್ಯವನ್ನು ಅದು ಈ ಮೊದಲೆಂದೂ ಕ್ಷಮಿಸಿರಲಿಲ್ಲ. ಈಗದು ಕೆಂಡ ಕೆಂಡವಾಗಿ ಭೀಕರ ಗರ್ಜನೆಯೊಂದಿಗೆ ಹುಲಿಯ ಮೇಲೆ ಜಗಿಯಿತು. ಆದರೆ ಹುಲಿಗೂ ಇಂಥ ಉದ್ದಾಮತನವನ್ನು ಕಂಡು ಗೊತ್ತಿರಲಿಲ್ಲ. ಅದೂ ರೋಷದಿಂದ ಹಿಂಗಾಲ ಮೇಲೆ ಎದ್ದು ನಿಂತು ಕಣ್ಣುಗಳಿಂದ ಕಿಡಿಗಳನ್ನುದುರಿಸುತ್ತ ಸಿಂಹವನ್ನು ಸುಟ್ಟು ಬೂದಿ ಮಾಡುವಂತೆ ನೋಡತೊಡಗಿತು.

ಸಿಂಹ ತನ್ನ ಮೇಲೆ ಹಾರಿದ್ದನ್ನು ಕಂಡು ಹುಲಿ ತನ್ನ ಅಂಥ ಕ್ರೋಧದಿಂದ ಎಚ್ಚತ್ತು ತುಸು ಹಿಂದೆ ಸರಿದು ಸಿಂಹದ ಆಕ್ರಮಣವನ್ನು ತಪ್ಪಿಸಿಕೊಂಡಿತು. ಕೆಳಗೆ ಬಿದ್ದ ಸಿಂಹ ತನ್ನ ಅಪಯಶಸ್ಸಿನಿಂದ ಇನ್ನಿಷ್ಟು ಕೆರಳಿ ಮತ್ತಿಷ್ಟು ಜೋರಿನಿಂದ ಹಾರಿತು. ಈ ಸಲವೂ ಕೈಕ್ಕೆ ಕೊಡಿಸುವ ಅಗತ್ಯವಿಲ್ಲೆಂದು ತಿಳಿದ ಹುಲಿ ಈ ಆಕ್ರಮಣವನ್ನೂ ತಪ್ಪಿಸಿಕೊಂಡು ಗುರುಗುಡುತ್ತ ನಿಂತಿತು. ಎದುರಾಳಿಯ ಮೇಲೆ ಹೀಗೆ ಜಗಿದು ಪ್ರಯೋಜನವಿಲ್ಲ, ನೆಲದ ಮೇಲೆ ನಿಂತೇ ಕಾದಬೇಕು ಎಂದು ನಿರ್ಧರಿಸಿದ ಸಿಂಹ ಮತೆ ಜಗಿಯುವ ಗೋಜಿಗೆ ಹೋಗದೆ ಮುಂದೋಡಿ ಮುಂಗಾಲಿನಿಂದ ಹುಲಿಗೆ ನಾಲ್ಕಾರು ಬಲವಾದ ಏಟುಗಳನ್ನು ಹಾಕಿತು. ಹುಲಿಗೆ ಈ ಬಗೆಯ ಆಕ್ರಮಣದ ಕಲ್ಪನೆಯೂ ಇರಲಿಲ್ಲ. ತನ್ನ ಹೆಡ್ಡತನದಿಂದಾಗಿ ಅದು ಸಿಂಹದ ಏಟುಗಳನ್ನು ತೆಪ್ಪಗೆ ತಿನ್ನಬೇಕಾಯಿತು. ತನ್ನ ಯುಕ್ತಿ ಫಲಿಸಿದ್ದರಿಂದ ಸಂತೋಷಗೊಂಡ ಸಿಂಹ ಮುಂದಿನ ಹೆಜ್ಜೆ ಇಟ್ಟಿತು. ಮುಂಗಾಲಿನ ಏಟು ಕೊಡುತ್ತಿದ್ದಾಗಲೇ ಅದು ತುಸು ಹಿಂದೆ ಸರಿದು ಹಾರಿ ಹುಲಿಗೆ ತೆಕ್ಕೆಬಿದ್ದು ಇಡೀ ಅಡವಿಯೇ ನಡುಗುವಂತೆ ಗರ್ಜನೆಯನ್ನು ಮಾಡಿತು. ಹುಲಿಯ ಎಡ ಮುಂಗಾಲನ್ನು ಹಿಡಿದು ಸವತೆಕಾಯಿಯಂತೆ ಜಗಿಯತೊಡಗಿತು. ಹುಲಿ ಸುಮ್ಮನೆ ನಿಂತು ಚತುರ ಸೇನಾಪತಿಯೊಬ್ಬ ರಣಾಂಗಣದಲ್ಲಿ ಶತ್ರುವಿನ ಚಲನವಲನವನ್ನು ನೋಡುತ್ತಿ-

ರುವಂತೆ ಸಿಂಹದ ಯುಕ್ತಿಯನ್ನು ನೋಡುತ್ತಿತ್ತು.

ಆದರೆ ಈ ಅಧ್ಯಯನಕ್ಕೆ ತಾಸುಗಳು ಬೇಕಾಗುವುದಿಲ್ಲ. ಮಿನಿಟುಗಳೂ ಬೇಡ. ಕೆಲವೇ ಸೆಕೆಂದುಗಳು ಸಾಕು. ಹುಲಿ ಭಯಂಕರವಾಗಿ ಗರ್ಜಿಸಿ ಎಷ್ಟು ಜೋರಾಗಿ ದುಂಡುಸುತ್ತಿತೆಂದರೆ ಸಿಂಹದ ಬಾಯಿಂದ ಅದರ ಮುಂಗಾಲು ತಪ್ಪಿತು ಮಾತ್ರವಲ್ಲ, ಆ ರಭಸಕ್ಕೆ ಸಿಂಹ ಪುಟಿದು ಬದಿಗೆ ಬಿತ್ತು. ಆ ಮೇಲೆ ಹುಲಿ ಮೇಲೊಮ್ಮೆ ಜಿಗಿದು ಒಮ್ಮೆಗೆ ಸಹಸ್ರ ಚೇಳುಗಳು ಕಡಿದವರಂತೆ ಕುಣಿಯತೊಡಗಿತು. ಶತ್ರುವಿನ ಈ ಹುಚ್ಚು ಆವೇಶವನ್ನು ಕಂಡು ಸಿಂಹ ಪುನಃ ಗರ್ಜಿಸಿ ಅದರ ಮೇಲೆ ಜಿಗಿಯಿತು. ಈ ಸಲ ಹುಲಿ ಬದಿಗೆ ಸರಿಯದೆ ಮೈಮೇಲೆ ಬಂದ ಸಿಂಹಕ್ಕೆ ತೆಕ್ಕೆಬಿದ್ದು ಅದನ್ನು ಕೆಳಗೆ ಕೆಡವಿತು. ಸಿಂಹಕ್ಕೆ ಹೀಗಾದೀತೆಂದು ಕನಸು ಮನಸಿನಲ್ಲಿಯೂ ಕಲ್ಪನೆ ಇರಲಿಲ್ಲ. ಇಂಥ ಬಲಿಷ್ಠ ಪ್ರಾಣಿಯನ್ನು ಅದು ಕಂಡಿರಲಿಲ್ಲ. ಆದರೆ ಶತ್ರುವಿನ ಪ್ರಶಂಸೆ ಮಾಡುವ ಅಥವಾ ಅದರ ಪ್ರತಾಪಕ್ಕೆ ಅಂಜಿ ಓಡುವ ಸನ್ನಿವೇಶ ಅದಾಗಿರಲಿಲ್ಲ. ಜೀವನ ಮರಣದ ಪ್ರಶ್ನೆ ಅದಾಗಿತ್ತು. ಅಡವಿಯ ಕಾಯದೆಯಲ್ಲಿ ಕ್ಷಮೆ ಅಥವಾ ಒಪ್ಪಂದ ಎಂಬ ಶಬ್ದಗಳೇ ಇಲ್ಲ.

ಸಿಂಹ ವೇಗದಿಂದ ಮೈ ಹೊರಳಿಸಿ ಬಹು ಚಾತುರ್ಯದಿಂದ ಬಲಕ್ಕೆ ತಿರುಗಿ ಕ್ಷಣಾರ್ಧದಲ್ಲಿ ಹುಲಿಯ ಬೆನ್ನೇರಿ ಕುಳಿತಿತು. ಹುಲಿ ಏಳುವಷ್ಟರಲ್ಲಿ ಸಿಂಹ ಹಲ್ಲು ಮತ್ತು ನಖಗಳಿಂದ ಅದರ ಬೆನ್ನನ್ನು ಘಾಸಿಗೊಳಿಸಿತು. ವೇದನೆಯನ್ನು ತಾಳಲಾರದೆ ಹುಲಿ ಚೀತ್ಕಾರ ಮಾಡಿತು. ಜೊತೆಗೆ ಮಿಂಚಿನ ವೇಗದಿಂದ ಮೇಲೆ ಜಿಗಿದು ಎಡಕ್ಕೆ ತಿರುಗಿ ಸಿಂಹಕ್ಕೆದುರಾಗಿ ಮುಂಗಾಲಿನಿಂದ ಪಟಪಟನೆ ಸಿಂಹದ ಮುಖಕ್ಕೆ ಏಟು ಹಾಕಿತು. ಸಿಂಹ ಬೆಪ್ಪಾಗಿ ನಿಂತಿತು. ಏಟುಗಳನ್ನು ನಿಲ್ಲಿಸಿದ ಹುಲಿ ತನ್ನೆಲ್ಲ ಬಲದಿಂದ ಸಿಂಹಕ್ಕೆ ತೆಕ್ಕೆ ಬೀಳಲು ಸಿಂಹ ಮೂಢನಂತಾಗಿ ಆ ಹಿಡಿತದಿಂದ ತಪ್ಪಿಸಿಕೊಂಡು ಗುಡ್ಡದತ್ತ ಓಡಿತು. ಹುಲಿ ಗರ್ಜಿಸಿ ಅತ್ತ ಓಡಬೇಕೆಂದಾಗ ಅಲ್ಲೇ ಬಲ ಬದಿಗೆ ಕುಳಿತಿದ್ದ ಹೆಣ್ಣು ಸಿಂಹವನ್ನು ಕಂಡು ನಿಂತುಬಿಟ್ಟಿತು ಆ ಹೆಣ್ಣು ಸಿಂಹ ನಿಶ್ಚಲವಾಗಿ ಮೌನವಾಗಿ ಅಲ್ಲಿ ಕುಳಿತಿತ್ತು.

ಹೊಸ ಶತ್ರುವನ್ನು ಕಂಡು ಹುಲಿಯ ಸಿಟ್ಟು ಹೆಚ್ಚಿತು. ಅದು ಗುರುಗುಡುತ್ತ ಅತ್ತ ಸರಿಯತೊಡಗಿತು. ಹೆಣ್ಣು ಸಿಂಹ ಕುಳಿತಲ್ಲಿಂದ ಕದಲಲಿಲ್ಲ. ಹುಲಿಯ ಚಲನವಲನವನ್ನು ನೋಡುತ್ತ ಮೌನವಾಗಿ ಕುಳಿತಿತ್ತು. ಹುಲಿ ಆವೇಶದಿಂದ ಹುಚ್ಚನಂತಾಗಿ ಅದರ ತೀರ ಸಮೀಪಕ್ಕೆ ಹೋಯಿತು ಆದರೆ ಆಕ್ರಮಣಕ್ಕಾಗಿ ಅದರ ಮುಂಗಾಲು ಏಳಲಿಲ್ಲ. ಅದು ಅನಿಮಿಷನೇತ್ರದಿಂದ ಹೆಣ್ಣು ಸಿಂಹವನ್ನು ನೋಡತೊಡಗಿತು. ಹೆಣ್ಣು ಸಿಂಹ ಆಗ ಎದ್ದು ಮಂದಗಾಮಿನಿ ಅಪ್ಸರೆಯಂತೆ ಹುಲಿಯನ್ನು ಸಮೀಪಿಸಿತು. ಹುಲಿ ಕಾಮುಕ ದೃಷ್ಟಿಯಿಂದ ತನ್ನನ್ನು ನೋಡತೊಡಗಲು ಹೆಣ್ಣು ಸಿಂಹ ತುಸು ಸಂಶಯದಿಂದ ನಿಂತಿತಾದರೂ ಹುಲಿಯ ಶೌರ್ಯದಿಂದ ಪ್ರಭಾವಿತವಾದ ಅದು ಹುಲಿಯ ಗಾಯಗಳನ್ನು ನೆಕ್ಕತೊಡಗಿತು. ಮಂತ್ರಮುಗ್ಧನಂತೆ ಹುಲಿ ಕುಳಿತಿತು.

ಇನ್ನು ಮುಂದಿನ ಕಥೆ ಕವಿಕಥೆಯಾಗಿತ್ತು. ಹುಲಿ ಮತ್ತು ಸಿಂಹದ ಪ್ರಣಯಲೀಲೆಯ ಕಥೆ ಸುತ್ತಲಿನ ಪ್ರದೇಶದಲ್ಲಿ ಹಬ್ಬಿತು. ಕಾಲ ಬದಲಾಯಿತು, ಪಶುಜಗತ್ತಿನಲ್ಲಿಯೂ ಕಲ್ಪನಾತೀತ ಘಟನೆಗಳು ಜರುಗತೊಡಗಿದವು ಎಂಬ ಮಾತುಗಳು ಪ್ರತಿಯೊಬ್ಬನ ಬಾಯಿಂದಲೂ ಹೊರಡತೊಡಗಿದವು. ಹಳ್ಳಿಗಳಲ್ಲಿ ಅಂಧ ವಿಶ್ವಾಸದ ಪ್ರಾಬಲ್ಯವಿದೆ. ಹುಲಿ ಸಿಂಹಗಳ ಪ್ರಣಯವು ಮನುಷ್ಯನ ಅಂಧಕಾರಗ್ರಸ್ತ ಭವಿಷ್ಯದ ಸೂಚನೆಯೆಂದು ವೃದ್ಧರು ಹೇಳತೊಡಗಿದರು.

ನಾವು ಈ ಕಥೆ ಕೇಳಿದೆವು. ಆಶ್ಚರ್ಯದ ಮಾತೇನೋ ನಿಜ. ಆದರೆ ಈ ಮೊದಲೂ ಇಂಥ ಘಟನೆಗಳು ಜರುಗಿದ್ದವು. ಹುಲಿಗೂ ಚಿರ್ಚಿಗೂ

ಈ ಬಗೆಯ ಕಾಮಸಂಬಂಧವಾದ ಘಟನೆಗಳೂ ಇವೆ. ನಾವೆಲ್ಲ ಕುತೂಹಲದಿಂದ ಈ ಪ್ರಣಯದ ಪರಿಣಾಮವನ್ನು ಕಾಯುತ್ತಲಿದೆವು. ನಾವು ನಿತ್ಯವೂ ಅಡವಿಗೆ ಹೋಗಿ ಈ ಲೀಲೆಯನ್ನು ಕಾಣಲು ಪ್ರಯತ್ನಿಸಿದೆವು. ಆದರೆ ಆರು ದಿನ ಸಂತತ ಪ್ರಯತ್ನಿಸಿದರೂ ನಮಗೆ ಆ ಹುಲಿ ಸಿಂಹಗಳ ಕೂದಲು ಕೂಡ ಕಾಣಲಿಲ್ಲ. ನನ್ನ ಡ್ರೈವರ್ ಪಂಜೂ ಮಾತ್ರ ಈ ಜೋಡಿಯನ್ನು ಹಲವಾರು ಸಲ ಕಂಡಿದ್ದ.

ಏಳನೆಯ ದಿನ ನಮ್ಮ ಅದೃಷ್ಟ ತೆರೆಯಿತು. ಸಂಜೆಯ ನಾಲ್ಕು ಗಂಟೆಯಾಗಿರಬಹುದು. ನಾವು ಹಳ್ಳವೊಂದರ ದಂಡೆಯಲ್ಲಿ ಮೌನವಾಗಿ ಕುಳಿತು ಸಿಗರೇಟು ಸೇದುತ್ತ ದಣಿವಾರಿಸಿಕೊಳ್ಳುತ್ತಿದ್ದೆವು. ನಾನು, ಪಂಜು ಮತ್ತು ನನ್ನ ಹಳೆಯ ಮಿತ್ರ ರಾಮಸ್ವಾಮಿ. ದಿನವಿಡೀ ಅಡವಿಯಲ್ಲಿ ಅಲೆದು ಹುಲಿ ಮತ್ತು ಸಿಂಹಗಳನ್ನು ಕಾಣದೆ ನಿರಾಶರಾಗಿದ್ದೆವು. ಅಷ್ಟರಲ್ಲಿ ಸಿಂಹವೊಂದು ಒಂದು ಗಿಡದ ಹಿಂದೆ ಕುಳಿತು ದಿಟ್ಟಿಸಿ ನೋಡುತ್ತಿರುವುದನ್ನು ಕಂಡೆವು. ಪಂಜುವಿನ ಸಂಕೇತದಂತೆ ನಾವೂ ಆ ಸಿಂಹ ನೋಡುತ್ತಿದ್ದ ಕಡೆ ನೋಡಿದೆವು. ಅದ್ಭುತ ದೃಶ್ಯವನ್ನು ಅಲ್ಲಿ ಕಂಡೆವು. ಹುಲಿ ಮತ್ತು ಆ ಹೆಣ್ಣು ಸಿಂಹ ಮಲಗಿಕೊಂಡು ಆ ಇಳಿಬಿಸಿಲಿನಲ್ಲಿ ಸಾಮೀಪ್ಯ ಸುಖವನ್ನು ಅನುಭವಿಸುತ್ತಿದ್ದವು.

ನಮ್ಮನ್ನು ಅವು ಕಂಡಿದ್ದವೋ ಕಂಡೂ ಅಲಕ್ಷಿಸುತ್ತಿದ್ದವೊ ನಮಗೆ ತಿಳಿಯಲಿಲ್ಲ. ಯಮನೋಪಾದಿಯಲ್ಲಿ ಮೂರು ಹಿಂಸ್ರ ಪ್ರಾಣಿಗಳು ನಮಗೆ ತೀರ ಸಮೀಪದಲ್ಲಿದ್ದವು. ನಮ್ಮ ಗಂಡಾಂತರದ ಕಲ್ಪನೆ ನಮಗಿತ್ತು. ರಾಮಸ್ವಾಮಿಯ ಸಂಕೇತದಂತೆ ನಾವು ಬಂದೂಕಿನ ಕಿವಿಯ ಮೇಲೆ ಕೈಯಿಟ್ಟುಕೊಂಡೇ ಒಂದು ಗಿಡವನ್ನೇರಿದೆವು. ಈ ಅಡವಿಯ ರಾಜರ ಕಿವಿ ಬಲು ಚುರುಕು. ಮೂರೂ ನಮ್ಮನ್ನು ಕಂಡವು. ಗಡಿಬಿಡಿಗೊಂಡು ಅತ್ತಿತ್ತ ನೋಡತೊಡಗಿದವು. ನಮ್ಮನ್ನು ಕಂಡ ಹುಲಿ ನೆಗೆಯುತ್ತ ನಮ್ಮ ಗಿಡದ ಸಮೀಪಕ್ಕೆ ಬಂದಿತು. ನಮ್ಮನ್ನು ನೋಡಲೆಂದು ಅದು ಕತ್ತೆತ್ತುವಷ್ಟರಲ್ಲಿ ಆ ಗಂಡು ಸಿಂಹ ಅದರ ಬೆನ್ನ ಮೇಲೆ ಜಗಿಯಿತು—ಒಂದು ಎಮ್ಮೆಯ ಮೇಲೆ ಜಗಿಯುವ ರೀತಿಯಲ್ಲಿ. ಹುಲಿ ಕೂಡ ಇದೇ ಬಗೆಯಲ್ಲಿ ಬೇಟೆಯಾಡುವುದಾದ್ದರಿಂದ ಸಿಂಹಕ್ಕೆ ಅದರ ಕುತ್ತಿಗೆ ಕಡಿಯುವುದಾಗಲಿಲ್ಲ. ಹುಲಿ ಸಿಂಹದ ಆಕ್ರಮಣ ಭಾರದಿಂದ ಕುಸಿದಂತಾಗಿ ಪ್ರದಕ್ಷಿಣೆ ಹಾಕಿತು. ಸಿಂಹ ಮತ್ತೊಮ್ಮೆ ಜಗಿಯಿತು. ಆದರೆ ಈಗ ಸಾವಧವಾದ ಹುಲಿ ಗರ್ಜಿಸಿ ಸಿಂಹವನ್ನು ಗೊಂಬೆಯನ್ನೆತಿ ಎಸೆಯುವಂತೆ ತೂರಿತು.

ಆ ರಾಕ್ಷಸೀ ಶಕ್ತಿಯ ತೂರುವಿಕೆಯಿಂದ ಸಿಂಹ ಒಂದು ಪೊದೆಯಲ್ಲಿ ಹೋಗಿ ಬಿತ್ತು. ಹುಲಿ ಈಗ ನಮ್ಮನ್ನು ನೋಡಿ ಎರಡು ಸಲ ಮೇಲೆ ಜಗಿಯಿತು. ಇನ್ನೊಂದಿಷ್ಟು ಮೇಲೆ ಜಗಿದಿದ್ದರೆ ಪಂಜು ಅದರ ಕೈಗೆ ಸಿಗುತ್ತಿದ್ದ. ನಮ್ಮನ್ನು ಹಿಡಿಯುವುದು ಸಾಧ್ಯವಿಲ್ಲವೆಂದು ತಿಳಿದಾಗ ಅದು ಗಿಡಕ್ಕೆ ಪ್ರದಕ್ಷಿಣೆ ಹಾಕತೊಡಗಿತು.

ಕ್ರುದ್ಧ ಹುಲಿಯ ಈ ಚಲನವಲನವನ್ನು ನೋಡುತ್ತ ಅದರ ಮುಂದಿನ ಹೆಜ್ಜೆ ಏನಿರಬಹುದು ಎಂದು ನಾವು ತರ್ಕಿಸುತ್ತಿದ್ದಾಗಲೇ ಭೀಕರ ಗರ್ಜನೆಯೊಂದಿಗೆ ಸಿಂಹ ಹುಲಿಯ ಮೇಲೆರಗಿತು. ಎರಡರಲ್ಲಿಯೂ ಮಲ್ಲಯುದ್ಧ ಆರಂಭವಾಯಿತು. ಒಂದೈದು ಮಿನಿಟು ಯುದ್ಧ ನಡೆಯಿತು. ಎರಡೂ ಸಮಬಲವಿದ್ದವು. ನಾರಿಯ ಸಮ್ಮುಖದಲ್ಲಿ ಪೌರುಷಪ್ರದರ್ಶನ ಮಾಡುವ ಛಲ ಎರಡರಲ್ಲಿಯೂ ಇತ್ತು. ಐದಾರು ಮಿನಿಟುಗಳಾಗುವಷ್ಟರಲ್ಲಿ ಹೆಣ್ಣು ಸಿಂಹ ಮಿಂಚಿನಂತೆ ರಣರಂಗಕ್ಕೆ ಬಂದು ಹುಲಿ ತನ್ನ ಆಜನ್ಮಶತ್ರುವೇನೊ ಎಂಬಂತೆ ಅದರ ಮೇಲೆರಗಿತು.

ಹುಲಿಯ ಎದುರು ಈಗ ಇಬ್ಬರು ಶತ್ರುಗಳಿದ್ದರು. ಅದರ ಮೇಲೆ ಎರಡು ಕಡೆಗಳಿಂದ ಪ್ರಹಾರವಾಗುತ್ತಲಿತ್ತು. ಹೆಣ್ಣು ಸಿಂಹ ಈ ರೀತಿ

ವಿಶ್ವಾಸಘಾತ ಮಾಡೀತೆಂಬ ಕಲ್ಪನೆಯೂ ಅದ-ಕ್ಕಿರಲಿಲ್ಲ. ಆದರೂ ಅದು ಧೈರ್ಯಗೆಡದೆ ದುಂಡು ಸುತ್ತಿ ಸಿಂಹವನ್ನು ಹಿಂದಕ್ಕೆ ಸರಿಸಿ ತಿರುಗಿ ಮುಂದೆ ಸರಿದು ಹೆಣ್ಣು ಸಿಂಹಕ್ಕೆ ಎರಡೇಟು ಬಾರಿಸಲು ಅದು ಕೆಳಗುರುಳಿತು. ಅದೇ ಆವೇಶ ದಲ್ಲಿ ಅದು ಗಂಡು ಸಿಂಹಕ್ಕೆ ತೆಕ್ಕೆಬಿದ್ದು ಕೆಳ ಗುರುಳಿಸಿ ಅದನ್ನು ನೆಲಕ್ಕೆ ತಿಕ್ಕಿತು. ಸಿಂಹ ನೋವಿನಿಂದ ಕೂಗಿ ಓಡಿತು. ಹುಲಿ ಬೆನ್ನಟ್ಟಿ ಒಂದು ಪೊದೆಯಲ್ಲಿ ಅದನ್ನು ಹಿಡಿಯಿತು. ಮತ್ತೆ ಅವೆರಡರಲ್ಲಿ ಘನಘೋರ ಕದನಕ್ಕಾ ರಂಭವಾಯಿತು. ಸಿಂಹ ಜಿಗಿದು ಹುಲಿಯ ಕುತ್ತಿ ಗೆಯ ಮೇಲೆ ಹಾರಿತು. ಹುಲಿ ಕುತ್ತಿಗೆ ಅಲ್ಲಾ ಡಿಸಿ ಹಮಾಲ ಬೆನ್ನಿನ ಮೇಲಿನ ಧಾನ್ಯದ ಚೀಲ ವನ್ನೆತ್ತಿ ಚೆಲ್ಲುವಂತೆ ಬದಿಗೆ ಚೆಲ್ಲಿತು. ಬಿದ್ದ ಸಿಂಹ ಎದ್ದು ಓಡಿತು. ಆದರೆ ಅದಕ್ಕೆ ಓಡುವ ಶಕ್ತಿಯೂ ಇದ್ದಂತಿರಲಿಲ್ಲ. ಒಂದಿಪ್ಪತ್ತು ಮಾರು ದೂರ ಹೋಗಿ ಅದು ಬಿದ್ದುಕೊಂಡು ಗಟ್ಟಿಯಾಗಿ ಶ್ವಾಸೋಚ್ಛ್ವಾಸ ಮಾಡತೊಡಗಿತು.

ಇತ್ತ ಕ್ರೋಧೋನ್ಮತ್ತವಾದ ಹುಲಿ ಮತ್ತೊಮ್ಮೆ ಮುಂಗಾಲಿನಿಂದ ಹೆಣ್ಣು ಸಿಂಹಕ್ಕೆ ಏಟುಗಳನ್ನು ಹಾಕಿತು. ಮತ್ತು ಕಾದಿ ದಣಿದ ನಾಯಿಯಂತೆ ನೆಲದ ಮೇಲೆ ಕುಳಿತು ಶ್ವಾಸ ವೆಳೆಯತೊಡಗಿತು. ಆದರೆ ಅದರ ಕೆಂಗಣ್ಣು ಗಳು ದೂರ ಕುಳಿತ ಸಿಂಹದ ಮೇಲೆ ನೆಟ್ಟಿದ್ದವು. ಹೆಣ್ಣು ಸಿಂಹ ಅದರ ಬಳಿ ಬಂದಿತು. ಆದರೆ ಉಗ್ರವಾಗಿದ್ದ ಹುಲಿಯ ಗುರುಗುಡುವಿಕೆಯಿಂದ ಅದಕ್ಕೆ ಅದರ ಶರೀರವನ್ನು ಸ್ಪರ್ಶಿಸುವ ಸಾಹಸ ವಾಗಲಿಲ್ಲ. ಅದು ಕೂಡ ಭಗ್ನಮನೋರಥ ವಾಗಿ ಒಂದು ಗಿಡದ ಬೊಡ್ಡೆಗೆ ಆತು ಬಿದ್ದು ಕೊಂಡು ಗಟ್ಟಿಯಾಗಿ ಶ್ವಾಸವೆಳೆಯುತ್ತ, ಹುಲಿ ಯನ್ನು ದಿಟ್ಟಿಸಿ ನೋಡತೊಡಗಿತು. *

ಉತ್ತರ ಪ್ರದೇಶದ ಒಂದು ವಿಖ್ಯಾತ ನಗರದಲ್ಲಿ ನಡೆದ ಘಟನೆಯಿದು. ಒಬ್ಬ ಗೃಹಸ್ಥನಿಗೆ ಹೊಟ್ಟೆ-ಬೇನೆಯಾಗಿತ್ತು. ಆಢ್ಯಜನ ಅವರು. ಆಸ್ಪತ್ರೆಗೆ ಕಳಿಸುವು ದರ ಬದಲು ಡಾಕ್ಟರನನ್ನೇ ಮನೆಗೆ ಕರೆಸಿದರು. ಡಾಕ್ಟರ್ ಬಂದು ಕೋಣೆಯಲ್ಲಿದ್ದ ರೋಗಿಯನ್ನು ನೋಡಿ ಐವತ್ತು ನಿಮಿಷ ಬಿಟ್ಟು ಬಂದು, ‘ಒಂದು ಉಳಿ ಇದೆಯೆ?’ ಎಂದರು. ರೋಗಿ ಗೃಹಸ್ಥರ ಮಗ ಡಾಕ್ಟರರ ಮುಖವನ್ನು ಒಂದು ನಿಮಿಷ ಮಿಕ ಮಿಕ ನೋಡಿ ಉಳಿ ತಂದುಕೊಟ್ಟ. ಮತ್ತೆ ಐದು ಮಿನಿಟಾದ ಮೇಲೆ ಡಾಕ್ಟರರು ಪುನಃ ಬಂದು “ಒಂದು ಸುತ್ತಿಗೆ ಬೇಕು” ಎಂದರು. ಸುತ್ತಿಗೆ, ಉಳಿ ಇವನ್ನೆಲ್ಲ ತೆಗೆದು ಕೊಂಡು ಡಾಕ್ಟರರು ಏನು ಮಾಡಲಿದ್ದಾರೆಂದು ಅಲ್ಲಿದ್ದವರು ಯೋಚನೆಗೊಳಗಾ-ದರು. ಆದರೂ ತಮಗೆ ತಿಳಿಯದ ವಿಷಯ ಏನೊ ಇರಬೇಕು ಎಂದು ಸುತ್ತಿಗೆ ತಂದುಕೊಟ್ಟರು. ಮತ್ತೆ ಐದು ಮಿನಿಟು ಬಿಟ್ಟು ಪುನಃ ಡಾಕ್ಟರರು ಬಂದರು. “ಒಂದು ಕರಗಸ ಕೊಡಿ” ಎಂದರು. ಈ ಸಲ ರೋಗಿ ಗೃಹಸ್ಥರ ಮಗನಿಗೆ ತಡೆಯು ಲಾಗಲಿಲ್ಲ. ಕೇಳಿಯೇಬಿಟ್ಟರು: ‘‘ಸ್ವಾಮೀ, ಡಾಕ್ಟರರೆ, ಉಳಿ ಕೇಳಿದಿರಿ, ಸುತ್ತಿಗೆ ಕೇಳಿದಿರಿ. ಈಗ ಕರಗಸ ಕೇಳುತ್ತಿರುವಿರಿ. ಆಪರೇಷನ್ನಿಗೆ ಈ ಆಯುಧಗಳನ್ನು ಉಪಯೋಗಿಸಲಿದ್ದೀರಾ?” ಡಾಕ್ಟರರು ಗಂಭೀರರಾಗಿ ಉತ್ತರಿಸಿದರು: “ಅಲ್ಲಯ್ಯ, ಆಪರೇಷನ್ ತಲೆ ಬೋಳಿಸ್ತು. ನನ್ನ ಆಯುಧಗಳ ಪೆಟ್ಟಿಗೇನೇ ತೆರೆಯಲಿಕ್ಕೆ ಬರ ಲೊಲ್ಲದಾಗಿದೆ. ಈಗ ಕೊರೆದೇ ತೆಗೆಯಬೇಕು!’’ —ಬೇಢಬ ಬನಾರಸಿ

# ಇದುವೆ ಜೀವ, ಇದು ಜೀವನ

ನನ್ನ ಉತ್ತರ ಹಿಂದುಸ್ಥಾನದ ಮಿತ್ರರೊಬ್ಬರು ಹೇಳಿದ ಸತ್ಯ ಪ್ರಸಂಗವಿದು :

ಒಂದು ಸರಕಾರಿ ಕಚೇರಿಯಲ್ಲಿ ಜೀವಮಾನವೆಲ್ಲ ಪ್ರಾಮಾಣಿಕತೆಯಿಂದ ದುಡಿದ ಕಾರಕೂನರೊಬ್ಬರಿದ್ದರು. ಅವರು ಅಲ್ಲಿಯೆ ಏರುತ್ತ ಹೆಡ್‌ಕ್ಲಾರ್ಕ್ ಸ್ಥಾನವನ್ನು ಮುಟ್ಟಿದ್ದರು. ನಿವೃತ್ತರಾಗಲು ಇನ್ನು ಎರಡೇ ವರ್ಷಗಳಿದ್ದವು. ಅವರ ಕೆಲಸವನ್ನು ಕುರಿತು ಮೇಲಿನ ಅಧಿಕಾರಿಗಳಿಗೆ ಒಳ್ಳೆಯದಲ್ಲದ ಒಂದೇ ಒಂದು ವರದಿಯೂ ಹೋಗಿರಲಿಲ್ಲವಾಗಿ ನಿವೃತ್ತಿ ಸಮೀಪಿಸುತ್ತಿರುವಾಗಾದರೂ ಅವರ ಸೇವೆಗೆ ಪುರಸ್ಕಾರವೀಯುವ ಉದ್ದೇಶದಿಂದ ಅವರನ್ನು ಮೇಲಿನ ಯಾವುದೋ ಹುದ್ದೆಗೆ ಬಡತಿ ಮಾಡುವ ಆಜ್ಞೆಯನ್ನು ಅಧಿಕಾರಿಗಳು ಕಳಿಸಿದರು.

ಪರಿಣಾಮ ನೋಡಿ ಅಧಿಕಾರಿಗಳಿಗೆ ಆಶ್ಚರ್ಯವಾಯಿತು. ಅವರ ಕೆಲಸದ ಮೇಲೆ ಒಳ್ಳೇ ವರದಿಗಳನ್ನು ಕಳಿಸಿದ ಆ ಕಚೇರಿಯೆ ಅವರ ಬಡತಿಯನ್ನು ಬಲವಾಗಿ ವಿರೋಧಿಸಿತು. ಅವರ ಬಡತಿಯನ್ನು ವಿರೋಧಿಸುವುದರಲ್ಲಿ ಕಚೇರಿಯ ಮುಖ್ಯಾಧಿಕಾರಿಯನ್ನೊಳಗೊಂಡು ಇಡಿ ಕಚೇರಿಯೆ ಒಗ್ಗಟ್ಟಾಗಿದ್ದಂತೆ ತೋರಿತು. ಒಂದೆರಡು ಬಾರಿ ಪ್ರಯತ್ನಿಸಿ ಪ್ರಬಲ ವಿರೋಧವನ್ನು ಕಡೆಗಣಿಸಲಾರದೆ ಮೇಲಧಿಕಾರಿಗಳು ಹೆಡ್‌ಕ್ಲಾರ್ಕರ ಬಡತಿ ಪ್ರಶ್ನೆಯನ್ನು ಕೈಬಿಟ್ಟರು.

ಒಳ್ಳೇ ಕೆಲಸಗಾರನಿಗೆ ಸರಕಾರದಲ್ಲಿ ಬಡತಿ ಸಿಗುವುದಿಲ್ಲ. ಏಕೆಂದರೆ ಅವನಿಗೆ ಬಡತಿಯಾದರೆ ಕಚೇರಿಯ ಕೆಲಸ ಸಾಗುವುದೇ ಕಷ್ಟವಾಗುತ್ತದೆ ಎಂದು ಅಧಿಕಾರಿಗಳು ಹೆದರುತ್ತಾರೆ ಎಂಬ ಪ್ರತೀತಿ ಇದೆ. ಇದೂ ಅದಕ್ಕೊಂದು ಉದಾಹರಣೆಯೆಂದು ಜನ ಆಡಿಕೊಂಡರು. ಆದರೆ ಆ ಹೆಡ್‌ಕ್ಲಾರ್ಕ್ ನಿವೃತ್ತಿ ಹೊಂದಿದ ನಂತರವೇ ಗುಪ್ತವಾಗಿರಿಸಲ್ಪಟ್ಟ ಅದರ ನಿಜಾಂಶ ಹೊರಬಂದದ್ದು. ನಿವೃತ್ತಿಗೆ ಮೂರು ವರ್ಷ ಮುಂಚೆ ಆ ಹೆಡ್‌ಕ್ಲಾರ್ಕರಿಗೆ ಕಣ್ಣು ಹೋಗಿಬಿಟ್ಟಿತ್ತು. ಪಾಪ, ಬಲು ದೊಡ್ಡ ಸಂಸಾರ. ಹಿರಿಯ ಮಗ ಮೆಟ್ರಿಕ್ ಆಗಲು ಇನ್ನೂ ಎರಡು ವರ್ಷವಿತ್ತು. ಕಚೇರಿಯಲ್ಲಿ ಎಲ್ಲರಿಗೂ ಪ್ರೀತಿ ಪಾತ್ರರಾಗಿದ್ದ ಅವರ ಮನೆತನಕ್ಕೆ ಬಂದ ಈ ಅವಘಡ ನೋಡಿ ಕಚೇರಿಯಲ್ಲಿ ಗುಪ್ತಸಂಧಾನ ನಡೆದು ಅವರ ಕೈಬಿಡಬಾರದೆಂದೂ ಅವರ ಕೆಲಸವನ್ನು ಉಳಿದೆಲ್ಲರೂ ಹಂಚಿಕೊಂಡು ಮಾಡಿಕೊಟ್ಟು ಮೇಲಿನವರಿಗೆ ಸುದ್ದಿ ಹತ್ತದಂತೆ ಮಾಡಬೇಕೆಂದೂ ನಿರ್ಧಾರವಾಯಿತು. ಒಮ್ಮೆ ಅವರ ಮಗನ ಮೆಟ್ರಿಕ್ ಮುಗಿದರೆ ಇದೇ ಕಚೇರಿಯಲ್ಲಿ ಅವನನ್ನು ತೆಗೆದುಕೊಂಡು ಕೌಟುಂಬಿಕ ದುರಂತವನ್ನು ಕಡೆಹಾಯಿಸಬಹುದೆಂದು ಅವರು ವಿಚಾರಿಸಿದರು.

ಹೀಗೆ ಒಂದು ವರ್ಷ ನಡೆದಾಗ ಮೇಲಿನವರ ಬಡತಿ ಆಜ್ಞೆ ಬಂದದ್ದು. ಬಡತಿಯಾಗಿದ್ದರೆ ಹೆಡ್ ಕ್ಲಾರ್ಕರಿಗೆ ಆ ಕಚೇರಿಯಿಂದ ವರ್ಗವಾಗುತ್ತಿತ್ತು, ಗುಟ್ಟು

ರಟ್ಟಾಗಿ ಭವಿಷ್ಯ ಹಾಳಾಗಿ ಹೋಗುತ್ತಿತ್ತು. ಬಡತಿಯನ್ನು ವಿರೋಧಿಸಲು ಈ ಮಾನವ ದಯೆಯೆ ಕಾರಣವಾಗಿತ್ತು.

— ರಂಗಯ್ಯ ಶಾನುಭಾಗ

ನಾನಾಗ ಹೈಸ್ಕೂಲಲ್ಲಿ ಓದುತ್ತಿದ್ದೆ. ನಮಗೊಬ್ಬರು ಅಧ್ಯಾಪಕರಿದ್ದರು. ಅವರು ಪಾಠಮಾಡುವಾಗಲಾಗಲೀ, ಇತರ ಯಾವ ಸಂದರ್ಭದಲ್ಲೇ ಆಗಲಿ ನಕ್ಕುದನ್ನು ನಾವು ಕಂಡಿರಲಿಲ್ಲ. ಯಾವಾಗಲೂ ಬಿಗುಮುಖ ಅವರದು. ಎಷ್ಟೋ ಸಂದರ್ಭಗಳಲ್ಲಿ ಅವರನ್ನು ನಗಿಸಬೇಕು ಎಂದು ನಾವು ಮಾಡಿದ ಪ್ರಯತ್ನಗಳೆಲ್ಲ ನಿರರ್ಥಕವಾದುವು. ಎಂತಹ ಮೋಜಿನ ಪ್ರಸಂಗ ಬಂದರೂ ಅವರು ನಗುತ್ತಿರಲಿಲ್ಲ.

ಇನ್ನೊಂದು ಸಂಗತಿ ಎಂದರೆ ಅವರಿಗೆ ತರಗತಿಯ ಯಾವ ಮಕ್ಕಳ ಹೆಸರೂ ತಿಳಿದಿರಲಿಲ್ಲ. ಪ್ರಶ್ನೆಗಳನ್ನು ಕೇಳುವಾಗ, 'ಫಸ್ಟ್ ಬೆಂಚ್ ಲಾಸ್ಟ್ ಬಾಯ್', 'ಲಾಸ್ಟ್ ಬೆಂಚ್ ಫಸ್ಟ್ ಬಾಯ್'; 'ಸೆಕೆಂಡ್ ಬೆಂಚ್ ಥರ್ಡ್ ಬಾಯ್' ಎಂದು ಕೈ ತೋರಿಸಿ ಉತ್ತರ ಕೇಳುತ್ತಿದ್ದರು. ಇನ್ನು ಕೆಲವು ಬಾರಿ 'ಖದ್ದರ್ ಕ್ಯಾಪಿನ ಹುಡುಗ'; 'ನೀಲಿ ಅಂಗಿಯ ಹುಡುಗ' ಎಂದು ಗುರುತು ಹೇಳುತ್ತಿದ್ದರು.

ಒಮ್ಮೆ ನಮ್ಮ ತರಗತಿಯ ಕೊನೆಯ ಬೆಂಚಿನ ಕಡೆಯಿಂದ ಪಾಠದ ವೇಳೆ ತುಸು ಗಲಾಟೆಯಾಯಿತು. ಬೆಂಚಿನಲ್ಲಿ ಕುಳಿತ ವಿದ್ಯಾರ್ಥಿಗಳು ಪಾಠಕ್ಕೆ ಸಂಬಂಧವಿಲ್ಲದ ವಿಷಯಗಳನ್ನು ಮಾತಾಡಿ ಗುಲ್ಲು ಎಬ್ಬಿಸಿದರು. ಇದನ್ನು ಕಂಡ ನಮ್ಮ ಅಧ್ಯಾಪಕರು ಸಿಟ್ಟಿಗೆದ್ದರು. ಕೂಡಲೇ ಮೇಜನ್ನು ಡಸ್ಟರಿನಿಂದ ಬಲವಾಗಿ ಗುದ್ದಿ 'ಲಾಸ್ಟ್ ಬೆಂಚ್, ಗೆಟ್ ಔಟ್' ಎಂದರು. ಕೂಡಲೇ ಕೊನೆಯ ಬೆಂಚಿನಲ್ಲಿ ಕುಳಿತವರಿಬ್ಬರು ಏನೋ ತಮ್ಮಲ್ಲೇ ಮಾತಾಡಿಕೊಂಡರು. ಎಲ್ಲರೂ ಬೆಂಚಿನಿಂದ ಎದ್ದು ತರಗತಿಯಿಂದ ಹೊರಗೆ ಹೋಗದೆ ನಿಂತರು. ಇದರಿಂದ ನಮ್ಮ ಅಧ್ಯಾಪಕರ ಸಿಟ್ಟು ನೆತ್ತಿಗೇರಿತು. ಅವರು ಪುನಃ ಗಟ್ಟಿಯಾಗಿಯೇ ಮೇಜು ಗುದ್ದಿ, 'ಲಾಸ್ಟ್ ಬೆಂಚ್, ಗೆಟ್ ಔಟ್' ಎಂದು ಅರಚಿದರು. ಕೂಡಲೇ ಕೊನೆಯ ಬೆಂಚಿನ ಎಲ್ಲ ವಿದ್ಯಾರ್ಥಿಗಳೂ ತಮ್ಮ ಬೆಂಚನ್ನು ಎತ್ತಿ, ಹೊತ್ತು ಕ್ಲಾಸಿನ ಹೊರಗೆ ಒಯ್ಯುವುದಕ್ಕಾರಂಭಿಸಿದರು. ನಮಗೆ ತಡೆಯಲಾರದ ನಗು ಬಂತು. ನಮ್ಮ ಅಧ್ಯಾಪಕರೂ ಅದೇ ಮೊದಲನೇ ಸಲ ನಕ್ಕುಬಿಟ್ಟರು.

— ಎಸ್ ಸದಾಶಿವರಾವ್, ಉಡುಪಿ

ನನಗೆ ಚಿತ್ರ ಬರೆಯುವ ಹುಚ್ಚು. ದಿನವೂ ಮನೆಗೆಲಸವಾದ ಮೇಲೆ ಕುಂಚ ಹಿಡಿದು ಚಿತ್ರ ಸಾಧನೆ ಮಾಡುತ್ತಿರುತ್ತೇನೆ. ಆದರೆ ನಮ್ಮ ಮೂರು ವರ್ಷದ ಮಗು ಶೀನು ಬಂದು ಉಪಟಳ ಕೊಡುತ್ತಾನೆ. ಆದ್ದರಿಂದ ನಾನು ಅವನನ್ನು ಮನೆಯ ಪೋರ್ಚಿನಲ್ಲಿ ಕುಳ್ಳಿರಿಸಿ ಬೇಕಾದಷ್ಟು ಆಟದ ಸಾಮಾನುಗಳನ್ನು ಮಡಗಿ ಬಾಗಿಲು ಹಾಕಿ ಬೀಗ ಜಡಿದು ಒಳಗೆ ಹೋಗಿ ಕುಂಚ ಆಡಿಸಲು ಸುರು ಮಾಡುತ್ತಿರುತ್ತೇನೆ.

ಆದರೆ ಪ್ರತಿ ದಿನವೂ ಅವನನ್ನು ಪೋರ್ಚಿನಲ್ಲಿ ದಿಗ್ಬಂಧಿಸಿಡಬೇಕಾದರೆ ರಾಮಾಯಣವಾಗಿಬಿಡುತ್ತದೆ.

ಒಂದು ಆದಿತ್ಯವಾರ ನಾನು ಮಗುವನ್ನು "ಇವರ" ಕಡೆ ಬಿಟ್ಟು ಕಣ್ಣು ತಪ್ಪಿಸಿ ಗೆಳತಿಯ ಮನೆಗೆ ಹೋದವಳು

ಮರಳಿದಾಗ ಇವರು ತಮ್ಮ ಕೋಣೆಯಲ್ಲಿ ಏನನ್ನೊ ಬರೆಯುತ್ತ ಕುಳಿತಿದ್ದರು. ಮಗು ಪೋರ್ಚಿನಲ್ಲಿ ಸುಖವಾಗಿ ಆಡುತ್ತಿದ್ದ. ಪೋರ್ಚಿನ ಬಾಗಿಲು ಎಂದಿನಂತೆ ಭದ್ರವಾಗಿ ಮುಚ್ಚಿದ್ದರೂ ಅವನು ಯಾವ ಕೂಗಾಟವನ್ನೂ ಮಾಡುತ್ತಿರಲಿಲ್ಲ.

ಆಶ್ಚರ್ಯವಾಗಿ ನಾನು ಇವರ ಹತ್ತಿರ ಇದರ ಗುಟ್ಟೇನೆಂದು ಕೇಳಿದೆ. "ಬಹಳ ಸುಲಭ," ಎಂದರವರು. "ನೀನು ಇಲ್ಲೇ ಆಡುತ್ತಿರು. ನಿನ್ನ ಅಮ್ಮ ಬಂದು ನಿನಗೆ ತೊಂದರೆ ಕೊಡಬಹುದು. ಅವಳು ಬಾರದಂತೆ ಕೀಲಿ ಹಾಕಿಬಿಡುತ್ತೇನೆ ಎಂದು ಅವನಿಗೆ ಹೇಳಿದೆ."

—ರಮಾಬಾಯಿ

## ೫೦ ವರ್ಷಗಳು ನಿದ್ದೆ ಇಲ್ಲದೆ ಕಳೆದ ಭೂಪ!

ನಿದ್ರೆಯ ಬಗ್ಗೆ ನೀವು ಅನೇಕ ಲೇಖನಗಳನ್ನು ಓದಿರಬಹುದು. ನಾನು ಈಗ ನಿದ್ರೆ ಮಾಡುವವರ ಬಗ್ಗೆಯಾಗಲಿ ಅಥವಾ ನಿದ್ದೆಯ ಬಗ್ಗೆಯಾಗಲೀ ಹೇಳಹೊರಟಿಲ್ಲ. ನಿದ್ದೆ ಇಲ್ಲದೆ ಜೀವನ ನಡೆಸಿರುವವರ ವಿಷಯ ಹೇಳಹೊರಟಿರುವೆನು.

ಲಂಡನ್ ನಗರದ ಲಾಂಚ್‌ಬೆರಿ ಎಂಬಾತನಿಗೆ ತಾನು ಎಂದು ನಿದ್ರೆ ಮಾಡಿದ್ದೆನೆನ್ನುವುದೇ ಮರೆತುಹೋಗಿದೆಯಂತೆ! ಈತ ನಿದ್ರೆ ಮಾಡದೆ ಸುಮಾರು ೫೦ ವರ್ಷಗಳು ಕಳೆದಿವೆಯಂತೆ. ೫೦ ವರ್ಷಗಳಿಂದ ನಿದ್ರೆ ಮಾಡದಿದ್ದರೂ ಇದುವರೆಗೆ ಒಂದು ಬಾರಿಯಾದರೂ ಕಾಯಿಲೆ ಬಿದ್ದಿಲ್ಲ.

ಈಗ್ಗೆ ಕೆಲವು ವರ್ಷಗಳ ಕೆಳಗೆ ಈ ಮಹಾಶಯ ತನಗೆ ಆರು ಘಂಟೆಗಳ ಕಾಲ ಯಾರು ನಿದ್ರೆ ಬರುವಂತೆ ಮಾಡುವರೋ ಅವರಿಗೆ ೨೫೦ ಪೌಂ. ಬಹುಮಾನ ಕೊಡುವುದಾಗಿ ಸಾರಿದ. ಇದಕ್ಕುತ್ತರವಾಗಿ ಮೂರು ಸಹಸ್ರ ಮಂದಿ ನಿದ್ರೆ ಬರುವ ಸಲಹೆಗಳನ್ನು ಕಳುಹಿಸಿದರೂ ಯಾವುದೂ ಪರಿಣಾಮಕಾರಿಯಾಗಲಿಲ್ಲ!

ಈ ಪುಣ್ಯಾತ್ಮನದು ಇಷ್ಟಾದರೆ, ಇಂಗ್ಲೆಂಡ್‌ನ ಲ್ಯಾಸಿಸ್ಟಶೈರ್ ಎಂಬಲ್ಲಿ ವಾಸಿಸುವ ಇಸ್ಡರ್ ಬೆನ್ನೆಟ್ ಎಂಬಾತ ೬೫ ವರ್ಷಗಳಿಂದ ನಿದ್ರೆ ಮಾಡಿಲ್ಲ. ಈ ಅವಧಿಯಲ್ಲಿ ೨೮ ಸಹಸ್ರ ಪುಸ್ತಕ, ೫೬ ಸಹಸ್ರ ಮಾಸಪತ್ರಿಕೆಗಳನ್ನು ಓದಿದ್ದಾನಂತೆ! ಈತ ಅಂತರ್‌ರಾಷ್ಟ್ರೀಯ ನಿದ್ದೆಮಾಡದವರ ಸಂಘ ಒಂದರ ಸ್ಥಾಪನೆಯಾಗುವುದರ ಅವಶ್ಯಕತೆಯ ಬಗ್ಗೆ ಪತ್ರಿಕೆಯಲ್ಲಿ ಒಂದು ಲೇಖನ ಬರೆದಿದ್ದ. ಅದಕ್ಕೆ ಉತ್ತರವಾಗಿ ವಿಶ್ವದಾದ್ಯಂತ ವಿಚಾರಣಾ ಪತ್ರಗಳು ಬರತೊಡಗಿದವು.

೧೮೫೨ ರಲ್ಲಿ ಚಿಕಾಗೋ ಆಸ್ಪತ್ರೆಯಲ್ಲಿ ಮರಣಹೊಂದಿದ ಮೋಲಿ ಟರ್ನರ್ ಎಂಬಾಕೆ ೩೩ ವರ್ಷಗಳ ಕಾಲ ನಿದ್ರೆಯಿಲ್ಲದೆ ಜೀವಿಸಿದಳಂತೆ. ಆಕೆ ಸಾಯುವ ಮೊದಲು ಯಾವ ವೈದ್ಯರಿಗೂ ಆಕೆಗೆ ನಿದ್ರೆ ಬರುವಂತೆ ಮಾಡಲು ಸಾಧ್ಯವಾಗಲಿಲ್ಲವಂತೆ!

ಕೆಲವು ವರ್ಷಗಳ ಹಿಂದೆ ೭೪ ವರ್ಷದ ಒಬ್ಬ ವೃದ್ಧ ಲಂಡನ್ ನಗರ ವೈದ್ಯರ ಬಳಿ ಬಂದು ತಾನು ೧೯೨೧ ರಲ್ಲಿ ಭಗ್ನ ಪ್ರಣಯಿಯಾದಾಗಿನಿಂದ ಇದುವರೆಗೂ ನಿದ್ರೆ ಮಾಡಲು ಆಗುತ್ತಿಲ್ಲವೆಂದೂ ಅದಕ್ಕಾಗಿ ಚಿಕಿತ್ಸೆಮಾಡಬೇಕೆಂದೂ ಕೋರಿಕೊಂಡ ದಾಖಲೆಯಿದೆ.

— ಸಂಗ್ರಹ: ಇಂದಿರಾಪ್ರಿಯ

ರಟ್ಟಾಗಿ ಭವಿಷ್ಯ ಹಾಳಾಗಿ ಹೋಗುತ್ತಿತ್ತು. ಬಡತಿಯನ್ನು ವಿರೋಧಿಸಲು ಈ ಮಾನವ ದಯೆಯೆ ಕಾರಣವಾಗಿತ್ತು.

— ರಂಗಸ್ವಾಮಿ ಶಾನಭಾಗ

ನಾನಾಗ ಹೈಸ್ಕೂಲಲ್ಲಿ ಓದುತ್ತಿದ್ದೆ. ನಮಗೊಬ್ಬರು ಅಧ್ಯಾಪಕರಿದ್ದರು. ಅವರು ಪಾಠಮಾಡುವಾಗಲಾಗಲೀ, ಇತರ ಯಾವ ಸಂದರ್ಭದಲ್ಲೇ ಆಗಲಿ ನಕ್ಕುದನ್ನು ನಾವು ಕಂಡಿರಲಿಲ್ಲ. ಯಾವಾಗಲೂ ಬಿಗುಮುಖ ಅವರದು. ಎಷ್ಟೋ ಸಂದರ್ಭಗಳಲ್ಲಿ ಅವರನ್ನು ನಗಿಸಬೇಕು ಎಂದು ನಾವು ಮಾಡಿದ ಪ್ರಯತ್ನಗಳೆಲ್ಲ ನಿರರ್ಥಕವಾದುವು. ಎಂತಹ ಮೋಜಿನ ಪ್ರಸಂಗ ಬಂದರೂ ಅವರು ನಗುತ್ತಿರಲಿಲ್ಲ.

ಇನ್ನೊಂದು ಸಂಗತಿ ಎಂದರೆ ಅವರಿಗೆ ತರಗತಿಯ ಯಾವ ಮಕ್ಕಳ ಹೆಸರೂ ತಿಳಿದಿರಲಿಲ್ಲ. ಪ್ರಶ್ನೆಗಳನ್ನು ಕೇಳುವಾಗ, 'ಫಸ್ಟ್ ಬೆಂಚ್ ಲಾಸ್ಟ್ ಬಾಯ್', 'ಲಾಸ್ಟ್ ಬೆಂಚ್ ಫಸ್ಟ್ ಬಾಯ್'; 'ಸೆಕೆಂಡ್ ಬೆಂಚ್ ಥರ್ಡ್ ಬಾಯ್' ಎಂದು ಕೈ ತೋರಿಸಿ ಉತ್ತರ ಕೇಳುತ್ತಿದ್ದರು. ಇನ್ನು ಕೆಲವು ಬಾರಿ 'ಖದ್ದರ್ ಕ್ಯಾಪಿನ ಹುಡುಗ'; 'ನೀಲಿ ಅಂಗಿಯ ಹುಡುಗ' ಎಂದು ಗುರುತು ಹೇಳುತ್ತಿದ್ದರು.

ಒಮ್ಮೆ ನಮ್ಮ ತರಗತಿಯ ಕೊನೆಯ ಬೆಂಚಿನ ಕಡೆಯಿಂದ ಪಾಠದ ವೇಳೆ ತುಸು ಗಲಾಟೆಯಾಯಿತು. ಬೆಂಚಿನಲ್ಲಿ ಕುಳಿತ ವಿದ್ಯಾರ್ಥಿಗಳು ಪಾಠಕ್ಕೆ ಸಂಬಂಧವಿಲ್ಲದ ವಿಷಯಗಳನ್ನು ಮಾತಾಡಿ ಗುಲ್ಲು ಎಬ್ಬಿಸಿದರು. ಇದನ್ನು ಕಂಡ ನಮ್ಮ ಅಧ್ಯಾಪಕರು ಸಿಟ್ಟಿಗೆದ್ದರು. ಕೂಡಲೇ ಮೇಜನ್ನು ಡಸ್ಟರಿನಿಂದ ಬಲವಾಗಿ ಗುದ್ದಿ 'ಲಾಸ್ಟ್ ಬೆಂಚ್, ಗೆಟ್ ಔಟ್' ಎಂದರು. ಕೂಡಲೇ ಕೊನೆಯ ಬೆಂಚಿನಲ್ಲಿ ಕುಳಿತವರಿಬ್ಬರು ಏನೋ ತಮ್ಮಲ್ಲೇ ಮಾತಾಡಿಕೊಂಡರು. ಎಲ್ಲರೂ ಬೆಂಚಿನಿಂದ ಎದ್ದು ತರಗತಿಯಿಂದ ಹೊರಗೆ ಹೋಗದೆ ನಿಂತರು. ಇದರಿಂದ ನಮ್ಮ ಅಧ್ಯಾಪಕರ ಸಿಟ್ಟು ನೆತ್ತಿಗೇರಿತು. ಅವರು ಪುನಃ ಗಟ್ಟಿಯಾಗಿಯೇ ಮೇಜು ಗುದ್ದಿ, 'ಲಾಸ್ಟ್ ಬೆಂಚ್, ಗೆಟ್ ಔಟ್' ಎಂದು ಅರಚಿದರು. ಕೂಡಲೇ ಕೊನೆಯ ಬೆಂಚಿನ ಎಲ್ಲ ವಿದ್ಯಾರ್ಥಿಗಳೂ ತಮ್ಮ ಬೆಂಚನ್ನು ಎತ್ತಿ, ಹೊತ್ತು ಕ್ಲಾಸಿನ ಹೊರಗೆ ಒಯ್ಯುವುದಕ್ಕಾರಂಭಿಸಿದರು. ನಮಗೆ ತಡೆಯಲಾರದ ನಗು ಬಂತು. ನಮ್ಮ ಅಧ್ಯಾಪಕರೂ ಆದೇ ಮೊದಲನೇ ಸಲ ನಕ್ಕುಬಿಟ್ಟರು.

— ಎಸ್. ಸದಾಶಿವರಾವ್, ಉಡುಪಿ

ನನಗೆ ಚಿತ್ರ ಬರೆಯುವ ಹುಚ್ಚು. ದಿನವೂ ಮನೆಗೆಲಸವಾದ ಮೇಲೆ ಕುಂಚ ಹಿಡಿದು ಚಿತ್ರ ಸಾಧನೆ ಮಾಡುತ್ತಿರುತ್ತೇನೆ. ಆದರೆ ನಮ್ಮ ಮೂರು ವರ್ಷದ ಮಗು ಶೀನು ಬಂದು ಉಪಟಳ ಕೊಡುತ್ತಾನೆ. ಆದ್ದರಿಂದ ನಾನು ಅವನನ್ನು ಮನೆಯ ಪೋರ್ಚಿನಲ್ಲಿ ಕುಳ್ಳಿರಿಸಿ ಬೇಕಾದಷ್ಟು ಆಟದ ಸಾಮಾನುಗಳನ್ನು ಮಡಗಿ ಬಾಗಿಲು ಹಾಕಿ ಬೇಗ ಜಡಿದು ಒಳಗೆ ಹೋಗಿ ಕುಂಚ ಆಡಿಸಲು ಸುರು ಮಾಡುತ್ತಿರುತ್ತೇನೆ.

ಆದರೆ ಪ್ರತಿ ದಿನವೂ ಅವನನ್ನು ಪೋರ್ಚಿನಲ್ಲಿ ದಿಗ್ಬಂಧಿಸಿಡಬೇಕಾದರೆ ರಾಮಾಯಣವಾಗಿಬಿಡುತ್ತದೆ.

ಒಂದು ಆದಿತ್ಯವಾರ ನಾನು ಮಗುವನ್ನು "ಇವರ" ಕಡೆ ಬಿಟ್ಟು ಕಣ್ಣು ತಪ್ಪಿಸಿ ಗೆಳತಿಯ ಮನೆಗೆ ಹೋದವಳು

ಮರಳಿದಾಗ ಇವರು ತಮ್ಮ ಕೋಣೆಯಲ್ಲಿ ಏನನ್ನೊ ಬರೆಯುತ್ತ ಕುಳಿತಿದ್ದರು. ಮಗು ಪೋರ್ಚಿನಲ್ಲಿ ಸುಖವಾಗಿ ಆಡುತ್ತಿದ್ದ. ಪೋರ್ಚಿನ ಬಾಗಿಲು ಎಂದಿನಂತೆ ಭದ್ರವಾಗಿ ಮುಚ್ಚಿದ್ದರೂ ಅವನು ಯಾವ ಕೂಗಾಟವನ್ನೂ ಮಾಡುತ್ತಿರಲಿಲ್ಲ.

ಆಶ್ಚರ್ಯವಾಗಿ ನಾನು ಇವರ ಹತ್ತಿರ ಇದರ ಗುಟ್ಟೇನೆಂದು ಕೇಳಿದೆ. " ಬಹಳ ಸುಲಭ," ಎಂದರವರು. "ನೀನು ಇಲ್ಲೇ ಆಡುತ್ತಿರು. ನಿನ್ನ ಅಮ್ಮ ಬಂದು ನಿನಗೆ ತೊಂದರೆ ಕೊಡಬಹುದು. ಅವಳು ಬಾರದಂತೆ ಕೀಲಿ ಹಾಕಿಬಿಡುತ್ತೇನೆ ಎಂದು ಅವನಿಗೆ ಹೇಳಿದೆ."

—ರಮಾಬಾಯಿ

## ೫೦ ವರ್ಷಗಳು ನಿದ್ದೆ ಇಲ್ಲದೆ ಕಳೆದ ಭೂಪ!

ನಿದ್ರೆಯ ಬಗ್ಗೆ ನೀವು ಅನೇಕ ಲೇಖನಗಳನ್ನು ಓದಿರಬಹುದು. ನಾನು ಈಗ ನಿದ್ರೆ ಮಾಡುವವರ ಬಗ್ಗೆಯಾಗಲಿ ಅಥವಾ ನಿದ್ದೆಯ ಬಗ್ಗೆಯಾಗಲೀ ಹೇಳಹೊರಟಿಲ್ಲ. ನಿದ್ದೆ ಇಲ್ಲದೆ ಜೀವನ ನಡೆಸಿರುವವರ ವಿಷಯ ಹೇಳಹೊರಟಿರುವೆನು.

ಲಂಡನ್ ನಗರದ ಲಾಂಚ್‌ಬೆರಿ ಎಂಬಾತನಿಗೆ ತಾನು ಎಂದು ನಿದ್ರೆ ಮಾಡಿದ್ದೆನೆನ್ನುವುದೇ ಮರೆತುಹೋಗಿದೆಯಂತೆ! ಈತ ನಿದ್ರೆ ಮಾಡದೆ ಸುಮಾರು ೫೦ ವರ್ಷಗಳು ಕಳೆದಿವೆಯಂತೆ. ೫೦ ವರ್ಷಗಳಿಂದ ನಿದ್ರೆ ಮಾಡದಿದ್ದರೂ ಇದುವರೆಗೆ ಒಂದು ಬಾರಿಯಾದರೂ ಕಾಯಿಲೆ ಬಿದ್ದಿಲ್ಲ.

ಈಗ್ಗೆ ಕೆಲವು ವರ್ಷಗಳ ಕೆಳಗೆ ಈ ಮಹಾಶಯ ತನಗೆ ಆರು ಘಂಟೆಗಳ ಕಾಲ ಯಾರು ನಿದ್ರೆ ಬರುವಂತೆ ಮಾಡುವರೋ ಅವರಿಗೆ ೨೫೦ ಪೌಂ. ಬಹುಮಾನ ಕೊಡುವುದಾಗಿ ಸಾರಿದ. ಇದಕ್ಕುತ್ತರವಾಗಿ ಮೂರು ಸಹಸ್ರ ಮಂದಿ ನಿದ್ರೆ ಬರುವ ಸಲಹೆಗಳನ್ನು ಕಳುಹಿಸಿದರೂ ಯಾವುದೂ ಪರಿಣಾಮಕಾರಿಯಾಗಲಿಲ್ಲ!

ಈ ಪುಣ್ಯಾತ್ಮನದು ಇಷ್ಟಾದರೆ, ಇಂಗ್ಲೆಂಡ್‌ನ ಲ್ಯಾಸಿಸ್ಟ್‌ಶೈರ್ ಎಂಬಲ್ಲಿ ವಾಸಿಸುವ ಇಸ್ಟರ್ ಬೆನ್ನೆಟ್ ಎಂಬಾತ ೬೫ ವರ್ಷಗಳಿಂದ ನಿದ್ರೆ ಮಾಡಿಲ್ಲ. ಈ ಅವಧಿಯಲ್ಲಿ ೨೮ ಸಹಸ್ರ ಪುಸ್ತಕ, ೫೬ ಸಹಸ್ರ ಮಾಸಪತ್ರಿಕೆಗಳನ್ನು ಓದಿದ್ದಾನಂತೆ! ಈತ ಅಂತರ್‌ರಾಷ್ಟ್ರೀಯ ನಿದ್ದೆಮಾಡದವರ ಸಂಘ ಒಂದರ ಸ್ಥಾಪನೆಯಾಗುವುದರ ಅವಶ್ಯಕತೆಯ ಬಗ್ಗೆ ಪತ್ರಿಕೆಯಲ್ಲಿ ಒಂದು ಲೇಖನ ಬರೆದಿದ್ದ. ಅದಕ್ಕೆ ಉತ್ತರವಾಗಿ ವಿಶ್ವದಾದ್ಯಂತ ವಿಚಾರಣಾ ಪತ್ರಗಳು ಬರತೊಡಗಿದವು.

೧೮೫೨ ರಲ್ಲಿ ಚಿಕಾಗೋ ಆಸ್ಪತ್ರೆಯಲ್ಲಿ ಮರಣಹೊಂದಿದ ಮೋಲಿ ಟರ್ನರ್ ಎಂಬಾಕೆ ೩೩ ವರ್ಷಗಳ ಕಾಲ ನಿದ್ರೆಯಿಲ್ಲದೆ ಜೀವಿಸಿದಳಂತೆ. ಆಕೆ ಸಾಯುವ ಮೊದಲು ಯಾವ ವೈದ್ಯರಿಗೂ ಆಕೆಗೆ ನಿದ್ರೆ ಬರುವಂತೆ ಮಾಡಲು ಸಾಧ್ಯವಾಗಲಿಲ್ಲವಂತೆ!

ಕೆಲವು ವರ್ಷಗಳ ಹಿಂದೆ ೭೪ ವರ್ಷದ ಒಬ್ಬ ವೃದ್ಧ ಲಂಡನ್ ನಗರ ವೈದ್ಯರ ಬಳಿ ಬಂದು ತಾನು ೧೯೨೧ ರಲ್ಲಿ ಭಗ್ನ ಪ್ರಣಯಿಯಾದಾಗಿನಿಂದ ಇದುವರೆಗೂ ನಿದ್ರೆ ಮಾಡಲು ಆಗುತ್ತಿಲ್ಲವೆಂದೂ ಅದಕ್ಕಾಗಿ ಚಿಕಿತ್ಸೆಮಾಡಬೇಕೆಂದೂ ಕೋರಿಕೊಂಡ ದಾಖಲೆಯಿದೆ.

— ಸಂಗ್ರಹ: ಇಂದಿರಾಪ್ರಿಯ

ಅರಬ ರಾಷ್ಟ್ರಗಳ ಮಹಾ ಶಿಕ್ಷಣವೇತ್ತನ ಜೀವನ ಸಾಧನೆ

# ತಹಾ ಹುಸೇನ್:
# ಕಣ್ಣಿಲ್ಲದಿದ್ದರೂ ಬೆಳಕು ಕಂಡರು

ವಿದ್ಯಾಭೂಷಣ 'ಶ್ರೀ ಶಿ'

ತಮ್ಮ ಮನೆಯ ಮುಂದಿನ ಕಟ್ಟೆಯ ಮೇಲೆ ಸುಮ್ಮನೆ ಕೂತಿದ್ದ ಆ ಏಳೆಂಟು ವರ್ಷದ ಹುಡುಗ ಯೋಚನಾಮಗ್ನನಾಗಿದ್ದ. ಹಾಯ್ದು ಹೋಗುತ್ತಿದ್ದ ಇಬ್ಬರು ಸ್ತ್ರೀಯರಲ್ಲಿ ಒಬ್ಬಳ ದೃಷ್ಟಿ ಅವನತ್ತ ಹೊರಳಿತು. 'ಪಾಪ! ದೇವರು ಈತನ ಪ್ರಾಣಗಳನ್ನೇ ಒಯ್ದಿದ್ದರೆ ಒಳಿತಾಗುತ್ತಿತ್ತು. ಈಗ ಇಡೀ ಜೀವನ ದುಃಖದಲ್ಲಿರಬೇಕೀತ!' ಎಂದಳು.

ಎರಡನೆಯವಳೂ, 'ದೇವರಿಚ್ಛೆ. ಏನು ಮಾಡುವುದಿದೆ?' ಎಂದು ತನ್ನ ಮರುಕ ವ್ಯಕ್ತಪಡಿಸಿದಳು.

ಹೀಗೆಂದು ಅವರು ಮುಂದೆ ಹೋದರು. ಹುಡುಗನ ಮೇಲೆ ಈ ಮಾತು ಆಳವಾಗಿ ಪರಿಣಾಮ ಮಾಡಿತು. 'ನಾನು ಜೀವಿಸಿ ಏನು ಪ್ರಯೋಜನ?' ಎಂದುಕೊಂಡು ಆತ ಎದ್ದು ಅಂದಾಜಿನಿಂದ ಬಾವಿಯ ಕಡೆಗೆ ಹೊರಟ. ಬಾವಿಯ ಹತ್ತಿರ ಹೋಗುವಷ್ಟರಲ್ಲಿ ಮುಲ್ಲಾ ಸಾಹೇಬರು ಬಂದರು. ಅವರು ಅವನನ್ನು ಕೈ-ಹಿಡಿದು ಹಿಂದಕ್ಕೆ ಎಳೆದು 'ಎಲೊ' ಅಲ್ಲಿ ಬಾವಿ ಇದೆ. ಬಿದ್ದುಬಿಟ್ಟೀಯಾ' ಎಂದರು.

ಒಂದು ಕ್ಷಣ ನಿಂತು ಹುಡುಗ ಹೇಳಿದ: 'ಸತ್ತರೆ ಒಳಿತಲ್ಲವೆ? ಆಯುಷ್ಯವೆಲ್ಲ ಭೋಗಿಸಬೇಕಾದ ಕಷ್ಟಗಳಿಂದಾದರೂ ಬಿಡುಗಡೆಯಾದೀತು!'

ಮುಲ್ಲಾ ಸಾಹೇಬರಿಗೆ ಹುಡುಗನ ಸ್ಥಿತಿ ವಿದಿತವಾಯಿತು. ಅವರು ಅವನನ್ನು ಪ್ರೀತಿಯಿಂದ ಮರಳಿ ಅಂಗಳಕ್ಕೆ ಕರೆದುಕೊಂಡು ಬಂದು ಹೀಗೆಂದರು: 'ಮಗೂ, ಧೈರ್ಯ ಕಳೆದುಕೊಂಡೆಯಾ? ಕಣ್ಣುಗಳೇ ಇಂದ್ರಿಯಗಳಲ್ಲಿ ಮೇಲೆಂಬುದನ್ನು ಒಪ್ಪೋಣ. ಆದರೆ ಅವಿಲ್ಲದಾಗ ಜೀವನವನ್ನು ಮುನ್ನಡೆಸುವುದು ಸಾಧ್ಯವೇ ಇಲ್ಲ ಎನ್ನುವೆಯಾ? ಲೋಕದಲ್ಲಿ ಎಷ್ಟೋ ಜನರು ಕುರುಡರಿದ್ದೂ ಕಣ್ಣಿದ್ದವರಿಗಿಂತ ಹೆಚ್ಚಿನ ಕಾರ್ಯವನ್ನು ಮಾಡಿದ್ದಾರೆ. ಮನಸ್ಸು ಬಹು ಮಹತ್ವದ ವಸ್ತು. ಜೀವನನೌಕೆಯ ಚುಕ್ಕಾಣಿಯೆ ಅದು. ಇದೊಂದೇ ಕೂಡ ಜೀವನನೌಕೆಯನ್ನು ದಂಡೆಗೆ ಮುಟ್ಟಿಸಬಲ್ಲದು. ಎಂಥ ಭಯಂಕರ ಬಿರುಗಾಳಿಯನ್ನಾದರೂ ಇದು ಎದುರಿಸಿ ಗೆದಿಯಬಲ್ಲದು. ಆದ್ದರಿಂದ ಮನವೆಂಬ ಚುಕ್ಕಾಣಿಯನ್ನು ಬಿಡಬೇಡ. ಮುಂದೆ ನಡೆ. ಧೈರ್ಯ ಕೆಡಬೇಡ.'

ಮುಲ್ಲಾ ಸಾಹೇಬರ ಮಾತುಗಳಿಂದ ಪ್ರಭಾ-

"ಸಾಪ್ತಾಹಿಕ ಹಿಂದುಸ್ತಾನ"ದಿಂದ

ವಿತನಾಗಿ ಮುನ್ನಡೆದ ಅದೇ ಹುಡುಗನ ಪರಾಕ್ರಮದೆದುರು ಇಂದು ಸಮಸ್ತ ಪ್ರಪಂಚವೇ ತಲೆ ಬಾಗುತ್ತಿದೆ. ೧೯೪೭ ರಲ್ಲಿ ಫ್ರೆಂಚ್ ಕಾದಂಬರಿಕಾರ ಆಂದ್ರೆ ಜೀದರಿಗೆ ನೋಬೆಲ್ ಪುರಸ್ಕಾರ ದೊರೆತಾಗ ಅವರನ್ನು ಮುಂದಿನ ವರ್ಷದ ಪುರಸ್ಕಾರಕ್ಕೆ ಯೋಗ್ಯ ವ್ಯಕ್ತಿಗಳು ಯಾರಾರೆಂದು ನಿಮ್ಮ ಅಭಿಪ್ರಾಯ? ಎಂದು ಕೇಳಲಾಯಿತು. ಆಗ ಆಂದ್ರೆ, 'ನನಗೆ ಕಾಣುವ ಒಬ್ಬನೇ ಒಬ್ಬನೆಂದರೆ ಇಜಿಪ್ತಿನ ತಹಾ ಹುಸೇನ' ಎಂದರು.

ಇಜಿಪ್ತಿನಲ್ಲಿ ತಹಾ ಹುಸೇನರಬಗ್ಗೆ ಎಷ್ಟೊಂದು ಗೌರವವಿದೆ ಎಂಬುದು ಒಂದು ಉದಾಹರಣೆಯಿಂದ ತಿಳಿಯುವುದು. ೧೯೫೨ ರಲ್ಲಿ ಇಜಿಪ್ತಿನಲ್ಲಿ ಸೈನಿಕರ ಕ್ರಾಂತಿಯಾಯಿತು. ಅರಸು ಫಾರೂಖರು ಸಿಂಹಾಸನ ಬಿಟ್ಟು ದೇಶತ್ಯಾಗ ಮಾಡಬೇಕಾಯಿತು. ರಾಜಸತ್ತೆಯನ್ನು ಉರುಳಿಸಿದ ಜನರಲ್ ನಜೀಬ ಕೂಡ ತಮ್ಮ ಸೈನಿಕರಿಗೆ ಹಿತೋಪದೇಶವೀಯಲು ಕ್ರಾಂತಿಗೆ ಏನೂ ಸಂಬಂಧಪಡದ ತಹಾ ಹುಸೇನರನ್ನೇ ಕರೆಸಿದ. ಆಗ ಅವರು ಪ್ರಜಾಪ್ರಭುತ್ವದ ಸಂಬಂಧದಲ್ಲಿ ಹೀಗೆ ಭಾಷಣ ಮಾಡಿದರು: 'ಕೇವಲ ಆಡಳಿತದ ಸುವ್ಯವಸ್ಥೆಯಷ್ಟೇ ಸಾಲದು. ಲೋಕ-ಕಲ್ಯಾಣ ಹಾಗೂ ವ್ಯಕ್ತಿಸ್ವಾತಂತ್ರ್ಯಗಳಿಗೆ ಪುರಸ್ಕಾರವಿರುವುದೇ ನಿಜವಾದ ಪ್ರಜಾಪ್ರಭುತ್ವ. ಅಧಿಕಾರಿಗಳು ನಿಜಾರ್ಥದಿಂದ ಸೇವಕರಾಗಿ ದುಡಿದರೇನೆ ಪ್ರಜಾಪ್ರಭುತ್ವ ಯಶಸ್ವಿಯಾಗಬಲ್ಲದು.'

ಸೈನಿಕಾಧಿಕಾರಿಗಳು ಈ ಮಾತಿನಿಂದ ಚಕಿತ

ತೆಳ್ಳಗಾದರೂ ಸಶಕ್ತವಾದ ಶರೀರ, ಚೂಪಾದ ಮುಖ, ತಂತಿಯಂಥ ಕೂದಲು, ಶಾಂತಮುದ್ರೆ— ಇರುವಅಂಥ ತಹಾ ಹುಸೇನರು ಇಜಿಪ್ತಿನಲ್ಲಷ್ಟೇ ಅಲ್ಲ; ಎಲ್ಲ ಅರಬ ರಾಷ್ಟ್ರಗಳಲ್ಲೂ ಶಿಕ್ಷಣವು ಪುಕ್ಕಟೆ ಸಿಗಬೇಕೆಂದು ಘೋಷಣೆ ಮಾಡಿದವರು. ಇವರಿಂದಲೇ ಇಜಿಪ್ತಿನ ಎರಡು ವಿಶ್ವವಿದ್ಯಾಲಯಗಳು ಉತ್ಕರ್ಷ ಹೊಂದಿ ಜಗತ್ತಿನ ಉತ್ತಮ ವಿಶ್ವವಿದ್ಯಾಲಯಗಳ ಶ್ರೇಣಿಗೆ ಬಂದವು. ೧೯೨೦ ರಲ್ಲಿ ಇಜಿಪ್ತಿನಲ್ಲಿ ಮೂರು ಲಕ್ಷಕ್ಕಿಂತ ಕಡಿಮೆ ವಿದ್ಯಾರ್ಥಿಗಳು ಶಿಕ್ಷಣ ಹೊಂದುತ್ತಿದ್ದರು. ಆದರೆ ಇವರ ಯತ್ನದಿಂದ ೧೯೫೧ ರಲ್ಲಿ ೧೪ ಲಕ್ಷಕ್ಕಿಂತ ಹೆಚ್ಚು ವಿದ್ಯಾರ್ಥಿಗಳು ಕಲಿಯಲಾರಂಭಿಸಿದ್ದರು.

ಇವರು ಶಿಕ್ಷಣತಜ್ಞರಷ್ಟೇ ಅಲ್ಲ; ಉತ್ತಮ ತತ್ತ್ವಜ್ಞಾನಿಗಳೂ ಲೇಖಕರೂ ಎಂದು ಖ್ಯಾತರಾಗಿದ್ದಾರೆ. ಇವರ ಕಾದಂಬರಿ 'Earth's Damned' ಎಂಬುದು ಬಹಳ ಪ್ರಸಿದ್ಧಿ ಪಡೆದಿದೆ. ಇದು ಸಮಾಜದ ಹುಳುಕನ್ನು ಎತ್ತಿ ತೋರಿಸಿದೆ. ಅಂತೆಯೆ ಸರಕಾರದಿಂದ ತಡೆಯಲ್ಪಟ್ಟಿತ್ತು. ಇವರ ಆತ್ಮಚರಿತ್ರೆ ೧೫ ಪ್ರಮುಖ ಭಾಷೆಗಳಲ್ಲಿ ಭಾಷಾಂತರವಾಗಿದ್ದು ಉದ್ಬೋಧಕ ಗ್ರಂಥವೆಂದು ಖ್ಯಾತಿವೆತ್ತಿದೆ.

ಇಂದಿನ ಯುಗದ ಮುನ್ನಡೆಯಲ್ಲಿ ಪ್ರಮುಖ ಪಾತ್ರ ವಹಿಸಿರುವರಾದರೂ ಕುರುಡರಿಗಾಗಿ ಇರುವ ಬ್ರೇಲ್ ಲಿಪಿಯ ಶಿಕ್ಷಣವನ್ನು ಇವರು ಹೊಂದಿಲ್ಲ ಎಂಬುದು ಆಶ್ಚರ್ಯ. ತಹಾರು ಬೇರೆಯವರಿಂದ ಓದಿಸಿಕೊಳ್ಳುತ್ತಾರೆ, ಇಲ್ಲವೆ ಚರ್ಚೆ ಮಾಡುತ್ತಾರೆ. ಶೇಕ್ಸಪಿಯರ ಇವರ ನಚ್ಚಿನ ಕವಿ. ಸಂಗೀತದ ಮೇಲೆ ಅಪಾರ ಪ್ರೀತಿ. ಕಂಠಮಾಧುರ್ಯವೂ ಇವರಿಗೆ ದೇವದತ್ತವಾಗಿ ಬಂದಿದೆ.

ರಾಗಿ ಪರಸ್ಪರರ ಮುಖ ನೋಡತೊಡಗಿದರು. ಅಷ್ಟರಲ್ಲಿ ಜನರಲ್ ನಜೀಬರ ಗಂಭೀರವಾಣಿ ಕೇಳಿಸಿತು. 'ಇವರ ಒಂದೊಂದು ಶಬ್ದವನ್ನೂ ಹೃದಯದಲ್ಲಿ ಸ್ಥಾಪಿಸಿ ಅದಕ್ಕನುಸರಿಸಿ ನಮ್ಮ ನಡೆನುಡಿಗಳನ್ನಿರಿಸಿಕೊಳ್ಳಬೇಕು. ಇವರಾಡಿದ ಮಾತುಗಳು ಅಮೂಲ್ಯವಾದ ಮುತ್ತುಗಳು.'

ಇಂದಿನ ಕಾಲದ ಈ ಮಹಾ ವಿಚಾರಕರು, ಲೇಖಕರು ಮತ್ತು ಶಿಕ್ಷಣ ತಜ್ಞರು ೭೨ ವರ್ಷಗಳ ಹಿಂದೆ ಉತ್ತರ ಇಜಿಪ್ತಿನ ಒಬ್ಬ ಬಡ ರೈತನ ಮನೆಯಲ್ಲಿ ಜನ್ಮ ತಾಳಿದರು. ಬಡತನವೊಂದೇ ಸಾಲದೆ ಇಜಿಪ್ತಿನ ಸೇಕಡಾ ಐವತ್ತು ಜನರ ಕಣ್ಣುಗಳನ್ನು ಕಳೆದೊಗೆದ ಭಯಂಕರ ಕಣ್ಣುಬೇನೆಯೊಂದು ತಹಾರ ಕಣ್ಣುಗಳನ್ನು ಮೂರು ವರ್ಷದ ಬಾಲ್ಯದಲ್ಲೇ ನುಂಗಿತು. ಜೀವನವೇ ಬೇಸರವಾಯಿತು. ಮುಲ್ಲಾ ಸಾಹೇಬರು ಕಿವಿಗಳಲ್ಲಿ ಆಶೆ ಉತ್ಸಾಹಗಳ ದಿವ್ಯ ಮಂತ್ರವನ್ನು ಊದಿದ ಫಲವಾಗಿ ಅವರು ಇನ್ನೊಬ್ಬರಿಂದ ಕುರಾನ್ ಹೇಳಿಸಿಕೊಂಡು ಕಂಠಸ್ಥಗೊಳಿಸತೊಡಗಿದರು. ಇಡೀ ಕುರಾನ್ ಬಾಯಿಪಾಠವಾಯಿತು. ಈ ನಡುವೆ ಶಾಲೆಗೂ ಹೋಗುತ್ತಿದ್ದರು. (ಇವರು ನಡೆಯಲು ಅಸಮರ್ಥರಿದ್ದುದರಿಂದ ಆಗ ಇವರನ್ನು ಇವರಣ್ಣ ಹೊತ್ತುಕೊಂಡು ಶಾಲೆಗೆ ಹೋಗುತ್ತಿದ್ದನಂತೆ). ಅಲ್ಲಿಯೂ ತಮ್ಮ ಅಸಾಧಾರಣ ಪ್ರತಿಭೆಯಿಂದ ಜನರನ್ನು ಬೆರಗುಗೊಳಿಸುತ್ತಿದ್ದರು. ಕಾಹಿರಾ (ಕೈರೊ)ದ ಅಲ್-ಅಜಹದ್ ವಿಶ್ವವಿದ್ಯಾಲಯದವರು ಶಿಷ್ಯವೃತ್ತಿ ಇತ್ತರು. ಈ ವಿಶ್ವವಿದ್ಯಾಲಯದಿಂದ ಪಿಎಚ್. ಡಿ ಪದವಿ ಗಳಿಸಿದವರಲ್ಲಿ ಇವರೇ ಮೊದಲಿಗರು. ಅವರನ್ನು ಪ್ಯಾರಿಸಿಗೆ ಕಳಿಸಲಾಯಿತು. ಅಲ್ಲಿ ಮತ್ತೊಂದು ಪಿಎಚ್.ಡಿ. ದೊರೆಯಿತು. ಇದರೊಟ್ಟಿಗೆ ಅವರಿಗೆ ಪ್ಯಾರೀಸಿನಿಂದ ಇನ್ನೊಂದು ಕೊಡುಗೆ ಲಭಿಸಿತು. ಅದೆಂದರೆ ಅವರ ಜೀವನ ಸಂಗಾತಿ, ಅತ್ಯಂತ ರೂಪವತಿ ಫ್ರೆಂಚ್ ಕನ್ಯೆ ಸುಜಾನೆ ಬ್ರೆಸೊ. ಬ್ರೆಸೊಳೊಂದಿಗೆ ಇವರ ವಿವಾಹ ೧೯೧೭ ರಲ್ಲಿ ಜರುಗಿತು. (ಇವರ ಪತ್ನಿ ಇವರಿಗೆ ಓದಿ ತೋರಿಸುತ್ತಾರೆ. ಇವರು ಬರೆಯಹೇಳಿದ್ದನ್ನು ಬರೆದುಕೊಳ್ಳುತ್ತಾರೆ. ಇವರ ಬರೆದುಕೊಂಡ ವ್ಯಾಖ್ಯಾನಗಳನ್ನು ಪ್ರಸಾರ ಮಾಡುತ್ತಾರೆ. ತನ್ನ ಪತಿ ತನ್ನ ರಕ್ಷಕ ಯಕ್ಷಿಣಿಯಾಗಿದ್ದಾಳೆಂದು ಇವರು ಹೇಳುತ್ತಾರೆ).



ಪ್ಯಾರೀಸಿನಿಂದ ಮರಳಿ ಬಂದೊಡನೆಯೆ ಕಾಹಿರಾ ವಿಶ್ವವಿದ್ಯಾಲಯದಲ್ಲಿ ಅರಬೀ ಸಾಹಿತ್ಯದ ಪ್ರೊಫೆಸರರೆಂದು ಅವರು ನೇಮಕ ಹೊಂದಿದರು. ಆದರೆ ಕೆಲದಿನಗಳಲ್ಲೇ ಈ ಹೊಸ ಪ್ರೊಫೆಸರರು ವಿದ್ಯಾರ್ಥಿಗಳ ಧಾರ್ಮಿಕ ಭಾವನೆಗಳನ್ನು ಕಲಕುತ್ತಿದ್ದಾರೆಂದು ಅಪವಾದ ಹಬ್ಬಿತು. ಧಾರ್ಮಿಕ ಕತೆಗಳು ಕಪೋಲಕಲ್ಪಿತವೆಂದು ಆ ವರೆಗೂ ಇಜಿಪ್ತಿನವರಿಗೆ ಗೊತ್ತಿರಲಿಲ್ಲ. ಆದರೆ ತಹಾ ಹುಸೇನರು ಅವೆಲ್ಲ ಕಟ್ಟುಕತೆಗ-

ಳೆಂದು ಹೇಳಿದರಲ್ಲದೆ, 'ನಿಮ್ಮ ವಿವೇಕಕ್ಕೆ ಒಪ್ಪಿದರೆ ಮಾತ್ರ ಯಾವುದನ್ನೂ ನಂಬಿರಿ. ಅಂಧಾನುಕರಣೆ ಮಾಡಬೇಡಿರಿ. ಇದರಿಂದ ಧರ್ಮವು ಹ್ರಾಸವಾಗುತ್ತದೆ,' ಎಂದು ಉಪದೇಶಿಸಿದರು. ಇದೇ ವಿಷಯವನ್ನು ಕುರಿತು ಒಂದು ಗ್ರಂಥವನ್ನೂ ಬರೆದರು. ಇಂಥ ವಿಚಾರಗಳನ್ನು ಧಾರ್ಮಿಕ ನೇತಾರರು ಸಹಿಸುವುದು ಸಾಧ್ಯವಿರಲಿಲ್ಲ. ಕೊನೆಗೆ ಪುಸ್ತಕದ ಯುಕ್ತಾಯುಕ್ತತೆಯನ್ನು ನಿರ್ಣಯಿಸಲು ಒಂದು ಆಯೋಗವನ್ನು ನೇಮಿಸಲಾಯಿತು. ಇಜಿಪ್ತಿನ ಸಂಸತ್ತಿನಲ್ಲಿ ದೊಡ್ಡಗಲಭೆಯೆದ್ದಿತು. ಆಗ ತಹಾ ಹುಸೇನರ ಪರವಾಗಿದ್ದ ಮಂತ್ರಿ ಮಂಡಲ ವಿಶ್ವಾಸದ ಸೂಚನೆ ಮಂಡಿಸಿ ತನ್ನ ಅಸ್ತಿತ್ವನ್ನು ಉಳಿಸಿಕೊಳ್ಳಬೇಕಾಯಿತು.

೧೯೩೦ ರಲ್ಲಿ ತಹಾ ಹುಸೇನರನ್ನು ಕಾಹಿರಾ ವಿಶ್ವವಿದ್ಯಾಲಯದ ರೆಕ್ಟರ್‌ರೆಂದು ಆರಿಸಿದರು. ಆಗಲೇ ಅವರು ವಿಚಾರಸ್ವಾತಂತ್ರ್ಯದ ಆಂದೋಲನವನ್ನು ಹೂಡಿದ್ದು. ಸರಕಾರದೊಂದಿಗೆ ತಿಕ್ಕಾಟ ಬಂತು. ಇಜಿಪ್ತಿನ ಅಂದಿನ ಪ್ರಧಾನ ಮಂತ್ರಿ, ಇಸ್ಮಾಯಿಲ್ ಸಿದ್ದೀಕಿ ಅವರು ಸ್ಪಷ್ಟವಾಗಿ, 'ಸರಕಾರವನ್ನು ಟೀಕಿಸುವುದನ್ನಾದರೂ ಬಿಡಿರಿ, ಇಲ್ಲವೇ ಪದತ್ಯಾಗವನ್ನಾದರೂ ಮಾಡಿರಿ' ಎಂದು ಹೇಳಿದರು. ತಹಾರು ರಾಜೀನಾಮೆ ಕೊಟ್ಟರು. ಮುಂದೆಯೂ ಸರಕಾರದ ವಿರುದ್ಧ ಮಾತಾಡುವುದನ್ನೂ ಬರೆಯುವುದನ್ನೂ ಬಿಡಲಿಲ್ಲ. ಇದೇ ಹೊತ್ತಿಗೆ ಮತ್ತೊಂದು ಆಪತ್ತು ಬಂತು. ಅವರ ಮಗ ಬೇನೆಯಿಂದ ಹಾಸಿಗೆ ಹಿಡಿದ. ಕೈಯಲ್ಲಿದ್ದ ಎಲ್ಲ ಹಣ ತೀರಿತು. ಅನ್ನ-ನೀರಿಗೂ ಕೊರತೆಯಾಯಿತು. ಸಾಲಮಾಡಿ ಸಂಸಾರ ಸಾಗಿಸಬೇಕಾಯಿತು. ಅಷ್ಟರಲ್ಲಿ ಸರಕಾರವಿರೋಧಿ ಕಾರ್ಯಗಳನ್ನು ಮಾಡುವ ಆಪಾದನೆ ಹೊರಿಸಿ ತಹಾರನ್ನು ಬಂಧಿಸಿದರು. ಮೂರು ವರ್ಷ ಶಿಕ್ಷೆಯಾಯಿತು. ಸೆರೆಮನೆಯಲ್ಲಿ ಅವರು ಏಳು ಪುಸ್ತಕಗಳನ್ನು ಬರೆದರು. ಕೆಲವನ್ನು ಪ್ರಕಟಿಸಲು ಸರಕಾರ ಅಡ್ಡಿ ಮಾಡಿತು. ಆದರೆ ಆಗಲೇ ಮಧ್ಯಪೂರ್ವದಲ್ಲಿ ತಹಾರ ಕೀರ್ತಿ ಹಬ್ಬಿತ್ತು. ೧೯೩೩ರಲ್ಲಿ ಸಿದ್ದೀಕಿ ಸರಕಾರ ಉರುಳಿದ ಮೇಲೆ ತಹಾ ಹುಸೇನರು ಬಿಡುಗಡೆಯಾಗಿ ಮತೆ ಮೊದಲಿನ ಸ್ಥಾನಕ್ಕೆ ನೇಮಕಗೊಂಡರು. ಅದೇ ಕಾಲಕ್ಕೆ ಇಜಿಪ್ತಿನ ಕಾಲೇಜುಗಳಿಗೆ ವಿಚಾರಸ್ವಾತಂತ್ರ್ಯವೂ ಲಭಿಸಿತು.

ಅಂದಿನ ಇಜಿಪ್ತಿನಲ್ಲಿ ಸಾಮಾನ್ಯರು ಮಕ್ಕಳಿಗೆ ಶಿಕ್ಷಣ ಕೊಡುವ ವಿಚಾರ ಮಾಡುವುದೇ ಸಾಧ್ಯವಿಲ್ಲದಷ್ಟು ಶಿಕ್ಷಣ ತುಟ್ಟಿಯಾಗಿತ್ತು. ಪ್ರಾಥಮಿಕ ಶಿಕ್ಷಣಕ್ಕೇ ವರ್ಷಕ್ಕೆ ಸುಮಾರು ರೂ. ೩೦೦ ಫೀ ತುಂಬಬೇಕಾಗುತ್ತಿತ್ತು. ವರ್ಷಕ್ಕೆ ಅಷ್ಟು ಆದಾಯವೇ ಇಲ್ಲದ ಸಾಮಾನ್ಯ ರೈತರು ಇಷ್ಟು ಹಣ ತೆತ್ತು ಮಕ್ಕಳಿಗೆ ಶಿಕ್ಷಣ ಕೊಡಿಸುವುದು ಸಾಧ್ಯವಿರಲಿಲ್ಲ. ಆದ್ದರಿಂದ ತಹಾರು, 'ಶಿಕ್ಷಣವು ಮಾರಾಟದ ವಸ್ತುವಲ್ಲ, ಗಾಳಿ ಬೆಳಕುಗಳಂತೆ ಅದು ಎಲ್ಲರಿಗೆ ಪುಕ್ಕಟೆ ಸಿಗಲೇಬೇಕು' ಎಂದು ಘೋಷಿಸಿದರು.

ಅದಕ್ಕೆ ಸರಕಾರ, 'ಇಷ್ಟು ಹಣವನ್ನು ಸರಕಾರವೇ ವೆಚ್ಚಮಾಡಲು ಸಾಧ್ಯವಿಲ್ಲ. ಮೇಲಾಗಿ ಬಡವರಿಗೆ ಶಿಕ್ಷಣದಿಂದ ಆಗಬೇಕಾದ ಪ್ರಯೋಜನವಾದರೂ ಏನು?' ಎಂದಿತು. ಪತ್ರಿಕೆಗಳೂ 'ತಹಾ ಹಗಲುಗನಸು ಕಾಣುತ್ತಿದ್ದಾರೆ' ಎಂದವು.

ಆದರೆ ಜನಮತ ಯಾರೊಂದಿಗೆ ಇರುವುದೊ ಅವರನ್ನು ಅವರ ಗುರಿಯಿಂದ ಎಷ್ಟು ದಿನ ದೂರವಿಡಲು ಸಾಧ್ಯ? ಜನತೆಯ ಒತ್ತಾಯ ಬಂದ ಮೇಲೆ ಸರಕಾರ ಒಪ್ಪಲೇಬೇಕಾಯಿತು. ೧೯೪೩ ರಲ್ಲಿ ಪ್ರಾಥಮಿಕ ಶಿಕ್ಷಣವನ್ನು ದೇಶದಾದ್ಯಂತ ನಿಃಶುಲ್ಕ ಕೊಡಲಾಗುವುದೆಂದು ಸರಕಾರ ಪ್ರಕಟಣೆ ಹೊರಡಿಸಿತು.

ಆದರೆ ತಹಾ ಹುಸೇನರು ಇಷ್ಟಕ್ಕೆ ತೃಪ್ತರಾಗಲಿಲ್ಲ. ಮಾಧ್ಯಮಿಕ ಶಿಕ್ಷಣವೂ ಪುಕ್ಕಟೆಯಾಗಬೇಕೆಂದು ಅವರು ಬಯಸಿದರು. ಇದು ತಮ್ಮ ಗುರಿಯ ದಿಕ್ಕಿನಲ್ಲಿ ಒಂದು ಮೆಟ್ಟಲು ಎಂದು ಅವರು ಇಜಿಪ್ತಿನ ಶಿಕ್ಷಣಮಂತ್ರಿಗಳ ಸಲಹೆ

ಗಾರರಾಗಿ ಕೆಲಸ ಮಾಡಲು ಒಪ್ಪಿಕೊಂಡರು.

ಈ ಕೆಲಸದಲ್ಲಿ ಇದ್ದಾಗಲೇ ತಹಾ ಹುಸೇನರು ಶಾಲಾ ವಿದ್ಯಾರ್ಥಿಗಳಿಗೆ ಮಧ್ಯಾಹ್ನದ ಊಟ ಮತ್ತು ಚಿಕಿತ್ಸೆ ಪುಕ್ಕಟೆ ದೊರೆಯುವಂತೆ ಮಾಡಿದರು. ಅಲ್ಲದೆ ಅಲೆಗ್ಝಾಂಡ್ರಿಯಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದರು. ಇಲ್ಲಿ ಈಗ ಹತ್ತು ಸಾವಿರಕ್ಕೂ ಮಿಕ್ಕಿ ವಿದ್ಯಾರ್ಥಿಗಳು ಶಿಕ್ಷಣ ಹೊಂದುತ್ತಿದ್ದಾರೆ.

೧೯೫೦ ರಲ್ಲಿ ತಹಾ ಹುಸೇನ್ ಶಿಕ್ಷಣಮಂತ್ರಿಗಳಾದರು. ಈ ಪದಕ್ಕೆ ಬಂದೊಡನೆಯೆ ಅವರು ಮಾಧ್ಯಮಿಕ ಶಿಕ್ಷಣವನ್ನೂ ಧರ್ಮಾರ್ಥವಾಗಿ ಮಾಡಿದರು. ಇಷ್ಟೇ ಅಲ್ಲ; ೧೭ ವರ್ಷಗಳ ವರೆಗೆ ಬಾಲಕರಿಗೆ ಶಿಕ್ಷಣವನ್ನು ಕಡ್ಡಾಯವಾಗಿ ಮಾಡಿದರು. ಕಾನೂನೇನೊ ಆಯಿತು. ಆದರೆ ಅದರ ಕಾರ್ಯಾಚರಣೆಗೆ ಬೇಕಾಗುವಷ್ಟು ಶಾಲೆ-ಶಿಕ್ಷಕರು ಎಲ್ಲಿ? ತಹಾರು ಎದೆಗುಂದದೆ ಹೊಸ ಶಾಲೆಗಳನ್ನು ಪ್ರಾರಂಭಿಸಿದರು. ಹಲವು ಶಾಲೆಗಳನ್ನು ಜನರ ಮನೆಗಳಲ್ಲೇ ಪ್ರಾರಂಭಿಸಲಾಯಿತು. ಒಂದೂವರೆ ವರ್ಷದೊಳಗಾಗಿಯೆ ೧೨ ಸಾವಿರ ಹೊಸ ಶಿಕ್ಷಕರನ್ನು ನಿರ್ಮಿಸಿದರು. ಸಮಸ್ಯೆ ಹಿಡಿತಕ್ಕೆ ಬಂತು. ಆದರೂ ಅವರು ಸದಾಕಾಲ ಜೇಬಿನಲ್ಲಿ ರಾಜೀನಾಮೆಯನ್ನು ಇಟ್ಟುಕೊಂಡೇ ಇರುತ್ತಿದ್ದರು. ಶಿಕ್ಷಕರ ಸಂಬಳಕ್ಕಾಗಿ ನಾಲ್ಕು ಕೋಟಿ ರೂಪಾಯಿಗಳನ್ನು ಕೊಡಲು ಸರಕಾರ ಒಪ್ಪದಾದಾಗ ಅದನ್ನು ಹೊರತೆಗೆದರು. ಕೂಡಲೇ ಅವರ ಸೂಚನೆಗೆ ಮನ್ನಣೆ ದೊರೆಯಿತು. ಈ ನಡುವಿನ ಕಾಲದಲ್ಲಿ ಇವರು ಅನೇಕ ಇಂಗ್ಲಿಷ್ ಮತ್ತು ಫ್ರೆಂಚ್ ಪುಸ್ತಕಗಳನ್ನು ಅರಬ್ಬಿ ಭಾಷೆಯಲ್ಲಿ ಅನುವಾದಿಸಿದರು. ಮತ್ತು ಎಷ್ಟೋ ವಿದ್ಯಾರ್ಥಿಗಳನ್ನು ಉಚ್ಚ ಶಿಕ್ಷಣಕ್ಕಾಗಿ ಯುರೋಪ್ ಅಮೇರಿಕೆಗಳಿಗೆ ಕಳಿಸಿದರು.

ತಹಾ ಇಂಥ ಶ್ರೇಷ್ಠ ಸಮಾಜ ಹಿತೈಷಿಗಳಾದರೂ ಹಿಂದಿನ ಅರಸ ಫಾರೂಖರಿಗೂ ಅವರಿಗೂ ಎಂದೂ ಹೊಂದಿಕೆಯಾಗಲಿಲ್ಲ. ಇವರ ಪ್ರತಿಯೊಂದು ಕಾರ್ಯಕ್ಕೂ ಅರಸರ ಅಡ್ಡಗಾಲು ಇದ್ದೇ ಇತ್ತು. ಇವರ 'ಇಜಿಪ್ಶಿಯನ್ ಸ್ಕ್ರೈಬ್' ಎಂಬ ಪತ್ರಿಕೆಯನ್ನು ನಿಲ್ಲಿಸಿದರು. ಅರಸರಿಂದಲೆ ನಿಯುಕ್ತವಾದ ಆಯೋಗವೊಂದು ಇಜಿಪ್ತಿನ ಶ್ರೇಷ್ಠ ಲೇಖಕನಿಗೆ ಮೀಸಲಿದ್ದ ೧೫,೦೦೦ ರೂಪಾಯಿಯ ಬಹುಮಾನವನ್ನು ತಹಾರಿಗೆ ಕೊಡಲು ಸೂಚಿಸಿದಾಗ ಅದನ್ನು ರದ್ದು ಮಾಡಿದರು. ಹೀಗಾಗಿ ೧೯೫೨ ರಲ್ಲಿ ಇಜಿಪ್ತಿನಲ್ಲಾದ ಸೈನಿಕ ಕ್ರಾಂತಿಯಲ್ಲಿ ತಹಾರ ಕೈ ಇದೆ ಎಂದು ಜನರು ಆಡಿಕೊಂಡರು. ಆದರೆ ನಿಜವಾಗಿಯೂ ಹಾಗೆ ಇರಲಿಲ್ಲ. ಕ್ರಾಂತಿ ನಡೆದಾಗ ಇವರು ಇಟಲಿಯಲ್ಲಿ ಇದ್ದರು. ಜನರಲ್ ನಜೀಬರು ತಹಾರನ್ನು ಭಕ್ತಿಭಾವದಿಂದ ಕಾಣುತ್ತಿದ್ದರೆಂಬುದು ನಿಜ. ಆ ಭಕ್ತಿಭಾವ ಸಮಸ್ತ ಇಜಿಪ್ತಿನವರಲ್ಲೇ ಇತ್ತು. ಇಂದಿಗೂ ಇದೆ. ೧೯೫೩ ರಲ್ಲಿ 'ಯುನೆಸ್ಕೊ'ದ ಡೈರೆಕ್ಟರ್ ಜನ-ರಲ್‌ರಾಗಲು ತಹಾರನ್ನು ಕರೆದಾಗ ಇಜಿಪ್ತು ಸರಕಾರ 'ನಮ್ಮ ತಹಾರನ್ನು ನಾವು ನಮ್ಮಿಂದ ದೂರ ಹೋಗಗೊಡೆವು. ಇಜಿಪ್ತಿನ ತಹಾರು ಇಜಿಪ್ತನ್ನು ಬಿಡಲಾರರು' ಎಂದಿತು.

ಪ್ರಪಂಚದ ಎಲ್ಲ ದೇಶಗಳೂ ತಹಾರನ್ನು ಗೌರವಾದರಗಳಿಂದ ಕಂಡಿವೆ. ವಿದೇಶೀಯ ವಿಶ್ವವಿದ್ಯಾಲಯಗಳಿಂದ ಅವರಿಗೆ ದೊರೆತ 'ಡಾಕ್ಟರೇಟ್' ಪದವಿಗಳ ಸಂಖ್ಯೆ ಒಂದೂವರೆ ಡಜನ್ನಿನಷ್ಟಿದೆ. ಶಿಕ್ಷಣ ಸಂಬಂಧದಲ್ಲಿ ಪ್ರತಿಯೊಂದು ದೇಶವು ಅವರ ಸಲಹೆಯನ್ನು ಕೇಳುತ್ತದೆ.

ತಹಾ ಹುಸೇನರ ಬಗ್ಗೆ ಶಾಂತಿಗಾಗಿ ನೋಬೆಲ್ ಪುರಸ್ಕಾರ ದೊರಕಿಸಿದ ರಾಲ್ಫ್ ಬುಂಚರು ಹೇಳಿರುವ ಮಾತು ಅಕ್ಷರಶಃ ಸತ್ಯವಾಗಿದೆ—

"ಅಂತಶ್ಚಕ್ಷುವಿನ ಈ ಪ್ರಕಾಶಪುತ್ರನನ್ನು ಪಡೆದು ಪುರುಷಾರ್ಥ ಅಲಂಕೃತವಾಗಿದೆ. ಮಾನವತೆ ಧನ್ಯವಾಗಿದೆ." *

# ಕಥಾ ಕಾಲಕ್ಷೇಪ

## ವಿಚಿತ್ರ ವಸ್ತು

ಒಮ್ಮೆ ಒಬ್ಬ ರಾಜನಿಗೆ ಅತ್ಯಂತ ವಿಚಿತ್ರ ವಸ್ತುವೊಂದು ಸಿಕ್ಕಿತು. ಗೋಲಿಯ ಆಕಾರದ ಒಂದು ಹೊಳೆಯುವ ದುಂಡನ್ನ ವಸ್ತುವಾಗಿತ್ತದು.

ತನಗೆ ಸಿಕ್ಕ ಈ ವಸ್ತು ಯಾವುದು ಎಂದು ತಿಳಿದುಕೊಳ್ಳಲು ಆ ರಾಜ ತುಂಬ ಯತ್ನಿಸಿದ. ಆಸ್ಥಾನದ ವಿದ್ವಾಂಸರನ್ನು ಕೇಳಿದ. ದೇಶ-ವಿದೇಶಗಳ ಪಂಡಿತರ ಸಲಹೆಯನ್ನು ತೆಗೆದುಕೊಂಡ. ಜಗತ್ತಿನ ಮೂಲೆಮೂಲೆಯ ಜ್ಞಾನಿಗಳು, ತತ್ತ್ವಜ್ಞಾನಿಗಳನ್ನು ವಿಚಾರಿಸಿದ. ಆದರೆ ಆ ವಿಚಿತ್ರ ವಸ್ತು ಏನಿರಬಹುದು ಎಂಬ ಬಗ್ಗೆ ಸಮಾಧಾನಕಾರಕ ಉತ್ತರ ದೊರೆಯಲಿಲ್ಲ.

ಮತ್ತು ಆ ವಿಚಿತ್ರ ವಸ್ತುವಿನ ತೂಕವೆಷ್ಟಿತ್ತೆಂದಿರಿ?

ತಕ್ಕಡಿಯ ಒಂದು ಪರಡಿಯಲ್ಲಿ ಆ ವಿಚಿತ್ರ ವಸ್ತುವನ್ನೂ ಇನ್ನೊಂದರಲ್ಲಿ ತನ್ನ ಬೊಕ್ಕಸದಲ್ಲಿಯ ಎಲ್ಲ ಮುತ್ತು-ರತ್ನ-ಆಭರಣಾದಿಗಳನ್ನೂ ರಾಜನು ಇಟ್ಟನು. ಆದರೆ ಆ ವಸ್ತುವನ್ನಿಟ್ಟ ಪರಡಿ ಕೆಳಗಿದ್ದದ್ದು ಮೇಲಕ್ಕೇರಲೇ ಇಲ್ಲ.

ತನ್ನ ರಾಜ್ಯದಲ್ಲಿಯ ಮುತ್ತು ರತ್ನಗಳನ್ನೆಲ್ಲ ಸಂಗ್ರಹಿಸಿ ರಾಜ ತಕ್ಕಡಿಯಲ್ಲಿಟ್ಟರೂ ಪ್ರಯೋಜನವಾಗಲಿಲ್ಲ. ಆ ವಸ್ತುವಿನ ತೂಕವೇ ಹೆಚ್ಚಾಯಿತು.

ಕೊನೆಗೆ ಆ ವಿಚಿತ್ರ ವಸ್ತುವಿನ ರಹಸ್ಯವನ್ನು ಬಹಿರಂಗಪಡಿಸಿದವರಿಗೆ ಭಾರೀ ಇನಾಮು ಕೊಡುವುದಾಗಿ ರಾಜ ಸಾರಿದ. ಆದರೆ ಇನಾಮನ್ನು ಕೇಳಲು ಯಾರೂ ಮುಂದೆ ಬರಲಿಲ್ಲ.

ಕಟ್ಟಕಡೆಗೆ ಒಬ್ಬ ಸಾಧು ಬಂದು ಆ ವಿಚಿತ್ರ ವಸ್ತುವಿನ ಮೇಲೆ ಒಂದು ಚಿಮಟಿಗೆಯಷ್ಟು ಮಣ್ಣು ಹಾಕಿದ.

ಏನಾಶ್ಚರ್ಯ! ಆ ಜಡ ಪರಡಿಯು ಹೂವಿನಂತೆ ಹಗುರಾಗಿ ಮೇಲಕ್ಕೇರಿತು.

ರಾಜ ಆಶ್ಚರ್ಯದಿಂದ: "ಮಹಾರಾಜ, ಈ ವಿಚಿತ್ರ ವಸ್ತು ಯಾವುದು?" ಎಂದು ಕೇಳಿದ.

"ಮಾನವೀ ಚರ್ಮಚಕ್ಷು" ಎಂದುತ್ತರವಿತ್ತ ಸಾಧು.

—ಜೋಸೆಫ್ ಎಲಿಜಾರ ಹಿಬ್ರೂ ನೀತಿಕತೆ

## ಸವಿಜೇನು

ಮನುಷ್ಯನೊಬ್ಬನು ಕಾಡಿನಲ್ಲಿ ಸಂಚರಿಸುತ್ತಿದ್ದನು. ಥಕ್ಕನೆ ಸಿಂಹವೊಂದು ಹಿಂದಿನಿಂದ ಓಡಿ ಬರುತ್ತಿರುವುದು ಅವನಿಗೆ ಕಾಣಿಸಿತು. ಅದರ ಆಕೃತಿಯಿಂದಲೇ ಭೀತನಾದ ಮನುಷ್ಯನು ಆದಷ್ಟು ವೇಗದಿಂದ ಓಡತೊಡಗಿದನು. ಸಿಂಹ ಹತ್ತಿರ ಹತ್ತಿರ ಬರುತ್ತಿತ್ತು. ದಿಕ್ಕೆಟ್ಟು ಓಡುತ್ತಿದ್ದ ಅವನು ಒಂದು ಹಾಳು ಬಾವಿಯೊಳಕ್ಕೆ ಬಿದ್ದುಬಿಟ್ಟನು. ಬಾವಿಯ ಸುತ್ತಲೂ ಮರದ ಬೀಳಲುಗಳು, ಪೊದೆಗಳು ತುಂಬಿದ್ದವು. ಬೀಳುತ್ತಾ ಮೃತ್ಯುಭಯದಿಂದ ಅವನು ಕೈಗೆ ಸಿಕ್ಕಿದ ಬೀಳ

ಲೊಂದನ್ನು ಗಟ್ಟಿಯಾಗಿ ಹಿಡಿದುಕೊಂಡನು. ಹಾಗೊಂದು ಕ್ಷಣಿಕ ಆಶ್ರಯ ದೊರೆಯಲು ಅವನು ಕೆಳಗೆ ನೋಡಿದನು. ಅಲ್ಲೊಂದು ಭಯಂಕರವಾದ ಸರ್ಪವು ಹೆಡೆಯೆತ್ತಿ ನಿಂತಿತ್ತು. ಅಂತೂ ಮೇಲೆ ಹೋಗುವುದೇ ದಾರಿಯೆಂದು ಮೇಲೆ ನೋಡಿದಾಗ, ಅವನನ್ನಟ್ಟಿಕೊಂಡು ಬಂದ ಸಿಂಹವು ಅವನನ್ನೇ ನೋಡುತ್ತ ನಿಂತಿತ್ತು. ಇಷ್ಟೇ ಅಲ್ಲ; ಸಣ್ಣ ಇಲಿಯೊಂದು, ಅವನು ಹಿಡಿದು ನೇತಾಡುತ್ತಿದ್ದ ಮರದ ಬೀಳಲನ್ನು ಕಡಿಯತೊಡಗಿತ್ತು. ಅರೆಕ್ಷಣದಲ್ಲಿ ಅದು ತುಂಡಾಗದಿರದು; ಆಗ ಅವನ ಗತಿ? ಅವನು ಮೇಲಿಂದ ಕೆಳಬೀಳುವ ರಭಸಕ್ಕೆ ಜೇನು ಗೂಡೊಂದು ಹರಿದಿತ್ತು. ಕೋಪಗೊಂಡ ಜೇನು ನೊಣಗಳು ಅವನನ್ನಾವರಿಸಿ ಹಿಂಸಿಸತೊಡಗಿದವು. ಹರಿದ ಗೂಡಿನಿಂದ ಜೇನು ತೊಟ್ಟಿಕ್ಕುತ್ತಿತ್ತು. ಆ ಮನುಷ್ಯನು ಇವೆಲ್ಲ ದುಃಖ ಭಯಗಳ ನಡುವೆ ನಾಲಗೆಯನ್ನು ಹೊರಚಾಚಿ ತೊಟ್ಟಿಕ್ಕುವ ಜೇನನ್ನು ನೆಕ್ಕಲು ಪ್ರಯತ್ನಿಸುತ್ತಿದ್ದನು; ಮುಖದ ಮೇಲೆ ಬಿದ್ದುದನ್ನು ಕಷ್ಟದಿಂದ ನೆಕ್ಕುತ್ತಿದ್ದನು.

ಸಂಸಾರದ ಸುಖ ಹೀಗೆಯೆ.

—ಪುರಾತನ ಸಂಸ್ಕೃತ ಕಥೆ. ಸಂಗ್ರಹ: **ಪುಟ್ಟಣ್ಣ**

## ರಾಜಾಯುಷ್ಯ

ಚೀನದ ಅರಸರು ಬಹು ದೀರ್ಘಾಯುಗಳಾಗಿರುವರು ಎಂದು ಕೇಳಿದ ಓರ್ವ ಭಾರತೀಯ ರಾಜನು ಚೀನದೇಶದ ರಾಜನೊಬ್ಬನಿಗೆ ಈ ರೀತಿ ಪತ್ರ ಬರೆದನು— "ನಮಗಿಂತ ನೀವು ದೀರ್ಘಾಯುಗಳಾಗಿರುವಿರಿ. ದಯವಿಟ್ಟು ಇದರ ಕಾರಣ ತಿಳಿಸುವ ಕೃಪೆ ಮಾಡಬೇಕು."

ರಾಜ ಈ ಪತ್ರವನ್ನು ಒಬ್ಬ ಮಂತ್ರಿಯೊಡನೆ ಕಳಿಸಿಕೊಟ್ಟು, ಈ ಪತ್ರಕ್ಕೆ ಮಾರುತ್ತರ ತಾರದೆ ಹೋದರೆ ಆತನಿಗೆ ಫಾಶಿ ಶಿಕ್ಷೆ ವಿಧಿಸಲಾಗುವುದೆಂದು ಹೇಳಿದನು.

ಚೀನದಲ್ಲಿ ಈ ಮಂತ್ರಿಗೆ ವಿಜೃಂಭಣೆಯ ಸ್ವಾಗತ ದೊರೆಯಿತು. ಆದರೆ ರಾಜ ಉತ್ತರ ಕೊಡುವುದನ್ನು ಮುಂದಕ್ಕೆ ತಳ್ಳುತ್ತಿದ್ದ. ಕೊನೆಗೆ ಬಾರಿ-ಬಾರಿಗೂ ನೆನಪಿಸಲು ತೊಡಗಿದಾಗ ಆ ರಾಜ, "ಇಲ್ಲಿ ನಿಂತಿರುವ ವಟವೃಕ್ಷವು ಸುಟ್ಟು ಹೋದಾಗ ನಿನ್ನ ಪ್ರಶ್ನೆಗೆ ಉತ್ತರ ದೊರಕುವುದು" ಎಂದ. ಇದನ್ನು ಕೇಳಿ ಮಂತ್ರಿ ಹತಾಶನಾದ.

ಐದು ನೂರು ವರ್ಷ ಪ್ರಾಯದ ಆ ವೃಕ್ಷ ಯಾವಾಗ ಉರಿದು ಹೋಗುವುದೆಂದು ಯಾರಿಗೆ ಗೊತ್ತು? ಆ ಮಂತ್ರಿ ದಿನಾಲೂ ಆ ಮರ ಸುಟ್ಟು ಹೋಗಲಿ ಎಂದು ಪ್ರಾರ್ಥಿಸತೊಡಗಿದ.

ಎರಡು ತಿಂಗಳುಗಳ ಬಳಿಕ ಆ ಮರ ಸುಟ್ಟು ಹೋಯಿತು. ಕೂಡಲೇ ಮಂತ್ರಿ ಓಡುತ್ತಾ ರಾಜನ ಬಳಿಗೆ ಬಂದು, "ಈಗ ನನ್ನ ಪ್ರಶ್ನೆಗೆ ಉತ್ತರವನ್ನು ಹೇಳಿ" ಎಂದು ಕೇಳಿಕೊಂಡ.

ಚಕಿತನಾದ ರಾಜ ಹೀಗುತ್ತರಿಸಿದ: "ಈಗಲೂ ಕೂಡಾ ಉತ್ತರ ಹೇಳುವುದು ಬಾಕಿ ಉಳಿದಿದೆಯೇ? ಯಾವ ರೀತಿ ನಿನ್ನ ನಿಃಶ್ವಾಸದಿಂದ ಐದು ನೂರು ವರ್ಷದ ಹಳೆ ವೃಕ್ಷ ಭಸ್ಮವಾಯಿತೋ, ಅದೇ ರೀತಿ ನಿಮ್ಮ ಪ್ರಜೆಗಳ ಅಸಂತೋಷ ಮತ್ತು ದುಃಖಮಿಶ್ರಿತ ನಿಃಶ್ವಾಸದ ಕಾರಣದಿಂದ ನಿನ್ನ ರಾಜನ ಆಯುಷ್ಯ ಕಡಿಮೆಯಾಗುತ್ತದೆ."

—ಎನ್. ನಾರಾಯಣ ಬಲ್ಲಾಳ



# ನಗೆಮಲ್ಲಿಗೆ



ಕವಿಗಳೊಬ್ಬರು ತಮ್ಮ ಮುನಿದ ಮಡದಿಯನ್ನು ಸಂತೈಸಲೆಂದು ಹೇಳಿದರು: "ವ್ಹಾ! ನೀನಿಂದು ಬಹಳ ರುಚಿಕರವಾದ ಚಹಾ ಮಾಡಿರುವಿ!"

ಹೆಂಡತಿ ಒಡನೆ ಉತ್ತರಿಸಿದಳು: "ನಿಮ್ಮ ಕವಿತೆಯ ಪ್ರತಿಯನ್ನು ಒಲೆಗೆ ಹಾಕಿ ಬೆಂಕಿ ಹೊತ್ತಿಸಿ ಈ ಚಹಾ ತಯಾರು ಮಾಡಿರುವೆ. ಹಾಗಿರುವಾಗ ರುಚಿಕರವಾಗದೇ ಇದ್ದೀತೇ?"

*

ಸಂಪೂರ್ಣ ದೇಹದ ಪರೀಕ್ಷೆಯಾದ ಮೇಲೆ ವೈದ್ಯರು ರೋಗಿಗೆ ಕೇಳಿದರು: "ನಿಮ್ಮ ನಾಡಿಯು ಒಂದೇ ಸವನೆ ಚಲಿಸುತ್ತಿದೆ, ನಾಲಿಗೆಯ ಬಣ್ಣ ಕೊಂಚ ಬದಲಾಗಿದೆ. ಆದರೆ ಹಸಿವೆ ಹೇಗಿದೆ? ಸರಿಯಾಗಿ ಹಸಿವೆಯಾಗುತ್ತಿದೆ ತಾನೇ?"

"ಕೆಲವೊಮ್ಮೆ ಆಗುತ್ತದೆ, ಇನ್ನು ಕೆಲವೊಮ್ಮೆ ಆಗುವುದಿಲ್ಲ" ರೋಗಿ ಹೇಳಿದನು.

"ನಿಮಗೆ ಯಾವಾಗ ಹಸಿವಾಗುವುದಿಲ್ಲ?"

"ಹೊಟ್ಟೆ ತುಂಬಾ ಊಟ ಮಾಡಿದ ಮೇಲೆ!" — ಪಾ. ಚಂ. ಚಡಗ

*

ಒಬ್ಬ ತರುಣ ಉತ್ಸಾಹಿ ಶಿಕ್ಷಕರು ಒಂದು ಶಾಲೆಯಲ್ಲಿ ಇತಿಹಾಸದ ವರ್ಗವನ್ನು ತೆಗೆದುಕೊಳ್ಳುತ್ತಿದ್ದರು. ಆಗ "ಜನಕನ ಧನುಷ್ಯವನ್ನು ಯಾರು ಮುರಿದರು?" ಎಂದು ಒಬ್ಬ ಹುಡುಗನಿಗೆ ಪ್ರಶ್ನೆ ಮಾಡಿದರು. ಅದಕ್ಕೆ ಅವನು "ನಾನು ಮುರಿದಿಲ್ಲ ಸರ್" ಎಂದು ಉತ್ತರ ಕೊಟ್ಟ. ಅದನ್ನು ಕೇಳಿ ಇಂದಿನ ಬಾಲಕರ ಬುದ್ಧಿಮತ್ತೆಯ ಬಗ್ಗೆ ಆ ಉತ್ಸಾಹೀ ಶಿಕ್ಷಕರಿಗೆ ಬಹಳ ಖೇದವಾಯಿತು.

ಖೇದಗೊಂಡ ಅವರು ಈ ವಿಷಯವನ್ನು ಆ ಹುಡುಗನ ಕ್ಲಾಸ್ ಮಾಸ್ತರರಿಗೆ ಹೇಳಿದರು. ಆಗ್ಗೆ ಕ್ಲಾಸ್ ಮಾಸ್ತರರು, "ಯಾರು? ಆ ಹುಡುಗನೇ? ಛೆ! ಅವನು ಬಹಳ ಸಭ್ಯ ಹುಡುಗ. ಅವನು ಮುರಿದಿರಬಹುದೆಂದು ನನಗಂತೂ ಅನಿಸುವುದಿಲ್ಲ" ಎಂದರು.

ಅಸಮಾಧಾನಗೊಂಡ ಆ ಶಿಕ್ಷಕರು ಮುಖ್ಯಾಧ್ಯಾಪಕರಿಗೆ ಈ ವಿಷಯ ಹೇಳಿದಾಗ ಅವರು, "ಆ ಹುಡುಗನ ಮಂಗತನಕ್ಕೆ ನಾನಂತೂ ಬೇಸತ್ತಿದ್ದೇನೆ. ಅವನು ತಪ್ಪು ಮಾಡುವನಲ್ಲದೇ ಮಾಡಿದ ತಪ್ಪನ್ನು ಒಪ್ಪಿಕೊಳ್ಳುವುದಿಲ್ಲ. ನನ್ನ ಕಡೆಗೆ ಕಳಿಸಿ ಕೊಡಿರಿ, ಅವನಿಗೆ ಚೆನ್ನಾಗಿ ಬುದ್ಧಿ ಕಲಿಸುತ್ತೇನೆ" ಎಂದು ಆವೇಶದಿಂದ ನುಡಿದರು.

ಇವೆಲ್ಲವನ್ನು ಕೇಳಿ ತೀರ ಹತಾಶರಾದ ಆ ಇತಿಹಾಸದ ಶಿಕ್ಷಕರು ಕೊನೆಗೆ ಶಿಕ್ಷಣಾಧಿಕಾರಿಗಳ ಕಡೆಗೆ ಹೋಗಿ, "ಜನಕನ ಧನುಷ್ಯವನ್ನು ಯಾರು ಮುರಿದರು?" ಎಂಬ ಪ್ರಶ್ನೆಗೆ ಆ ವಿದ್ಯಾರ್ಥಿ ಕೊಟ್ಟ ಉತ್ತರ ಹಾಗು ಕ್ಲಾಸ್ ಮಾಸ್ತರ್ ಮತ್ತು ಮುಖ್ಯಾಧ್ಯಾಪಕರು ಕೊಟ್ಟ ಹೇಳಿಕೆಗಳನ್ನು ಹೇಳಿದರು. ಶಾಂತಚಿತ್ತದಿಂದ ಎಲ್ಲವನ್ನು ಕೇಳಿಕೊಂಡು ಶಿಕ್ಷಣಾಧಿಕಾರಿಗಳು, "ಮುರಿದದ್ದು ಮುರಿದುಹೋಯಿತು. ನೀವೇಕೆ ವ್ಯಸನಪಡು

ವಿರಿ? ಮುಂದಿನ ವರುಷದ ಬಜೆಟನಲ್ಲಿ ಹೊಸದು ಮಾಡಿಸಿದರಾಯಿತು" ಎಂದು ನಿರ್ಣಯಕೊಟ್ಟರು.

—ಸಂಜೀವ ಲಕ್ಷ್ಮೇಶ್ವರ

*

ಕಂಡಕ್ಟರ್ ರಾಮು ತನ್ನ ಹೆಂಡತಿಯನ್ನು ಕೂಗಿ ಕರೆದು ಹೇಳಿದ—"ಏನೇ, ನಾನೊಂದು ಪತ್ರ ಬರೆಯಬೇಕಾಗಿದೆ. ಅದಕ್ಕಾಗಿ ಸ್ವಲ್ಪ ಸಹಾಯ ಮಾಡುವಿಯಾ?"

ಹೆಂಡತಿ— "ನೀವು ಪತ್ರ ಬರೆಯೋದಾದರೆ ಅದಕ್ಕೆ ನನ್ನದೇನು ಸಹಾಯ ಬೇಕು?"

ರಾಮು— "ಮತ್ತೇನೂ ಇಲ್ಲ. ನೀನು ಸ್ವಲ್ಪ ಈ ಟೇಬಲನ್ನು ಅಲುಗಾಡಿಸುತ್ತ ನಿಂತುಕೊಂಡಿರು ಅಷ್ಟೇ!"

— ಎಚ್. ವಿ. ಡಂಬಳ

*

ಒಂದು ದಿನವೆಲ್ಲಾ ಷಾಪಿಂಗ್ ಮಾಡಿ ಬಳಲಿ ಬಂದ ಪತ್ನಿ ಪತಿಗೆ ಉತ್ಸುಕತೆಯಿಂದ ಹೇಳಿದಳು:

"ನೋಡಿ ಇಲ್ಲಿ! ನಾನು ತಂದಿರುವ ಹೊಸ ಫ್ಯಾಷನ್ನುಗಳನ್ನು. ಇದೇ ಹಿಡಿಯಿಲ್ಲದ ಚೀಲ, ತೋಳಿಲ್ಲದ ಜಾಕೆಟ್, ಅಂಚಿಲ್ಲದ ಸೀರೆ, ಕನ್ನಡಿಯಿಲ್ಲದ ಮೇಕಪ್ ಬಾಕ್ಸ್." ಎಂದು ತೋರಿಸಿದಾಗ ಅವಳ ಪತಿ ನಿಧಾನವಾಗಿ ಹೇಳಿದ:

"ನಾನು ಸಹ ಒಂದು ಹೊಸ ಫ್ಯಾಷನ್ ಕೊಂಡು ತಂದಿದ್ದೇನೆ. ಅದಾವುದು ಗೊತ್ತೆ? ಹಣವಿಲ್ಲದ ಜೋಬು."

— ಎಸ್. ಬಿ. ರವೀಂದ್ರನಾಥ

*

ಮ್ಯಾನೇಜರ- ಈ ಕೆಲಸಕ್ಕೆ ನನಗೊಬ್ಬ ಹೊಣೆಗಾರ ಮನುಷ್ಯ ಬೇಕು.

ಅರ್ಜಿದಾರ- ಹಾಗಾದರೆ ನನಗಿಂತ ಹೆಚ್ಚು ಅರ್ಹತೆಯುಳ್ಳವ ಇನ್ನಾರೂ ಇಲ್ಲ. ನಾನು ಕೆಲಸ ಮಾಡಿದಲ್ಲೆಲ್ಲ ಏನಾದರೂ ತಪ್ಪಾಯಿತು ಅಂದರೆ "ಇವನೇ ಹೊಣೆಗಾರ" ಎನ್ನುತ್ತಿದ್ದರು.

*

ಹಡಗೊಡೆದು ಸಮುದ್ರಪಾಲಾದ ನಾವಿಕನೊಬ್ಬ ನಿರ್ಜನ ದ್ವೀಪಕ್ಕೆ ಹೋಗಿ ಬಿದ್ದ. ತಿಂಗಳುಗಟ್ಟಳೆ ಒಂಟಿಯಾಗಿ ಜೀವಿಸಿ ಬೇಸತ್ತ ಮೇಲೆ ಒಂದು ದಿನ ಅತ ಒಂದು ಗಿಳಿಯನ್ನು ಹಿಡಿದ. ಕಷ್ಟಪಟ್ಟು ಅದಕ್ಕೆ ಮಾತು ಕಲಿಸಿದ.

ಒಂದು ದಿನ ಗಿಳಿ, "ಹೆಣ್ಣು, ಹೆಣ್ಣು, ಎಂಥಾ ಹೆಣ್ಣು ಅನ್ನುತ್ತೀ! ಬಾ ನನ್ನ ಸಂಗಡ" ಎಂದಿತು.

ನಾವಿಕ ಅದರ ಹಿಂದೆ ಧಾವಿಸಿದ. ಅವನ ಓಟ ಸಾವಕಾಶವಾದಾಗೆಲ್ಲ ಗಿಳಿ, "ಅಹಾ! ಎಂಥ ರೂಪ! ಎಂಥ ಬಣ್ಣ!" ಎನ್ನುತ್ತಿತ್ತು. ಕಡೆಗೆ ಅದು ಒಂದು ಕಡೆ ತಡೆದು ಹೇಳಿತು: "ನೋಡು, ಚೆಲುವೆ ಹೌದೋ ಅಲ್ಲವೊ ಹೇಳೀಗ!"

ಅದು ಇನ್ನೊಂದು ಗಿಳಿಯಾಗಿತ್ತು.

*

ಕಾಲೇಜು ಹುಡುಗನೊಬ್ಬನಿಗೆ ತನ್ನ ಪ್ರೊಫೆಸರರನ್ನು ಹೇಗೆ ಸಂಬೋಧಿಸಬೇಕೆಂಬ ಸಮಸ್ಯೆ ಬಗೆಹರಿಯದೆ ಅವರನ್ನೇ ಕೇಳಿದ:

"ನಿಮ್ಮನ್ನು ಡಾಕ್ಟರ್ ಎಂದು ಸಂಬೋಧಿಸಬೇಕೋ ಶ್ರೀಮತಿಯವರೇ ಎಂದೊ?"

ನಸುನಗುತ್ತ ಅವರು ಸಮಸ್ಯಾಪರಿಹಾರ ಮಾಡಿದರು: "ಶ್ರೀಮತಿ ಎಂದು; ನಾನು ಇದಕ್ಕಾಗಿ ಕಷ್ಟಪಟ್ಟಷ್ಟು ಅದಕ್ಕಾಗಿ ಪಡಲಿಲ್ಲ."



# ಅನ್ಯಲೋಕಗಳಲ್ಲಿ

ಒಬ್ಬ ರಶಿಯನ್ ಮತ್ತು ಒಬ್ಬ ಅಮೇರಿಕನ್ "ವಿಶ್ವಯಾತ್ರಿ" ಗಳು ಬಾಹ್ಯಾಂತರಿಕ್ಷಕ್ಕೆ ಹೋಗಿ ಬಂದ ಮೇಲೆ ಮಾನವ ಕುಲ ಇಂದು ಖಂಡಿತವಾಗಿ ಭೂಮಿಯಿಂದ ಬಾಹ್ಯವಿಶ್ವದ ಯಾತ್ರೆಯ ಹೊಸಲನ್ನು ದಾಟಿದೆ. ಇನ್ನು ಮಾನವ ಸಮೀಪದ ಗ್ರಹಗಳಿಗೆ, ಅನಂತರ ಅಪಾರ ವಿಶ್ವದಲ್ಲಿ ಕನಿಷ್ಠ ಸಮೀಪದ ನಕ್ಷತ್ರ ಲೋಕಗಳಿಗೆ ಹೋಗುವುದು ಕೇವಲ ವರ್ಷಗಳ— ಅಥವಾ ಕೆಲ ದಶಕಗಳ ಪ್ರಶ್ನೆಮಾತ್ರ.

ಈ ಸಂಕ್ರಮಣಕಾಲದಲ್ಲಿ ಭೂಮಿಯ ಹೊರಗೆ ಜೀವ ಜಂತುಗಳು ಇರಬಹುದೆ? ಇದ್ದರೆ ಅವುಗಳು ಎಂಥವಿರಬಹುದು ? ಅವು "ಬುದ್ಧಿಶಾಲಿ" ಗಳಾಗಿರಬಹುದೆ? ಎಂಬ ಪ್ರಶ್ನೆಗೆ ಮಹತ್ವ ಬಂದಿದೆ. ಲೋಕಾಂತರಗಳಿಗೆ ಹೋಗಲು ಮಾನವ ಸಿದ್ಧನಾಗಿರುವುದರಿಂದ ಇದೀಗ ಕೇವಲ ಸೋಮಾರಿಗಳ ವಿಚಾರಲಹರಿಯಾಗಿ ಉಳಿಯದೆ ವಾಸ್ತವಿಕ ಮಹತ್ವದ ಸಂಗತಿಯಾಗಿದೆ. ನಾವು ಬೇರೊಂದು ನಾಡಿಗೆ ಹೋಗುವ ಸನ್ನಾಹದಲ್ಲಿದ್ದರೆ ಆ ನಾಡಿನಲ್ಲಿ ನಾವು ಏನನ್ನು ನಿರೀಕ್ಷಿಸಬಹುದು ಎಂದು ಮುಂದಾಗಿ ತಿಳಿಯಬೇಡವೆ?



# ಜೀವಿಗಳಿಗಾಗಿ ಶೋಧ

ರಾಧಾಕೃಷ್ಣರಾವ್

ಅನ್ಯ ಗ್ರಹಗಳಲ್ಲಿ ಜೀವಿಗಳು ಇರಬಹುದೆ? ಎಂಬ ಪ್ರಶ್ನೆಗೆ ಉತ್ತರ ಬೇಕಾದರೆ ಜೀವವೆಂಬುದು ನಮ್ಮ ಪೃಥ್ವಿಯಲ್ಲಿ ಮೊಟ್ಟಮೊದಲು ಹೇಗೆ ಹುಟ್ಟಿತು? ಎಂಬುದಕ್ಕೆ ಉತ್ತರ ಪಡೆಯಲು ಯತ್ನಿಸಬೇಕಾಗುತ್ತದೆ. ದುರ್ದೈವದಿಂದ ಇದಕ್ಕೆ ಸರಿಯಾದ ಉತ್ತರ ನಮಗೆ ಇನ್ನೂ ಗೊತ್ತಿಲ್ಲ. ಮಾತ್ರವಲ್ಲ, ಪೃಥ್ವಿ ಹುಟ್ಟುವಾಗಲೆ ಅದರೊಡನೆ ಜೀವಬೀಜ ಇತ್ತೆ? ಇಲ್ಲದಿದ್ದರೆ ಯಾವಾಗ, ಹೇಗೆ ಅದು ಪ್ರಾರಂಭವಾಯಿತು? ಎಂದೂ ತಿಳಿದಿಲ್ಲ. ಪೃಥ್ವಿಯ ವಯಸ್ಸು ೪೬೦ ಕೋಟಿ ವರ್ಷಗಳೆಂಬುದು ತೀರ ಈಚೆಗಿನ ವೈಜ್ಞಾನಿಕ ಅಂದಾಜು. ನಮಗೆ ದೊರೆತಿರುವ ಅತಿ ಪ್ರಾಚೀನ ಜೀವಾವಶೇಷ ಕೇವಲ ೬೦ ಕೋಟಿ ವರ್ಷ ಹಳೆಯದು. ಆದರೂ ಪೃಥ್ವಿಯ ಆದಿ ಕಾಲದಲ್ಲಿ ನಡೆದ ಮಹಾವಿಪ್ಲವದ ದೆಸೆಯಿಂದ ಅದಕ್ಕೂ ಹಿಂದಿನ ಜೀವಾವಶೇಷಗಳು ನಮಗೆ ಸಿಕ್ಕಿರಲಿಕ್ಕಿಲ್ಲ ಎಂಬ ಸಂದೇಹವೂ ಇದೆ.

ಪೃಥ್ವಿಯ ಸಕಲ ಜೀವರಾಶಿಗಳ ಮೂಲ ಪದಾರ್ಥಗಳು ಏನೆಂದು ರಸಾಯನ ವಿಜ್ಞಾನಿಗಳು ಬಲ್ಲರು. ಆದರೆ ಅವುಗಳನ್ನು ಪ್ರಯೋಗ ಶಾಲೆಯಲ್ಲಿ ಕೃತಕವಾಗಿ ಸೃಷ್ಟಿಸಲು ಮಾತ್ರ ಅವರಿಗೆ ದೀರ್ಘ ಪರಿಶ್ರಮದ ನಂತರವೂ ಸಾಧ್ಯವಾಗಿರಲಿಲ್ಲ. ಸುಮಾರು ಹತ್ತು ವರ್ಷಗಳ ಕೆಳಗೆ ಈ ತೊಡಕು ಕೆಲ ಮಟ್ಟಿಗೆ ದೂರವಾಯಿತು. ಅಮೇರಿಕದ ಪ್ರೊ. ಸ್ಟಾನ್ಲೆ ಮಿಲ್ಲರರು ಪೃಥ್ವಿಯ ಆದಿ ಕಾಲದ ಸ್ಥಿತಿ ಹೇಗಿರಬಹುದೆಂದು ತರ್ಕಿಸಿದರು. ಆಗ ನಮ್ಮ ವಾತಾವರಣವು ಮೆಥೇನ್, ಅಮೋನಿಯ, ನೀರಿನ ಹಬೆ, ಜಲಜನಕ (ಹೈಡ್ರೊಜನ್) ಮತ್ತು ಸಾರಜನಕ (ನೈಟ್ರೊಜನ್) ಗಳಿಂದ ತುಂಬಿದ್ದಿರಬೇಕು. ಸೂರ್ಯಪ್ರಕಾಶ, ಮಿಂಚು, ರೇಡಿಯೋ ವಿಕಿರಣ ಮತ್ತು ಜ್ವಾಲಾಮುಖಿಜನ್ಯ ಉಷ್ಣತೆ ಇವು ಪೃಥ್ವಿಗೆ ಆಗ ಲಭ್ಯವಾಗಿದ್ದವು. ಪ್ರೊ. ಮಿಲ್ಲರರು ತಮ್ಮ ಪ್ರಯೋಗ ನಲಿಕೆಯಲ್ಲಿ ಇದೇ ಪರಿಸ್ಥಿತಿಯನ್ನು ಕೃತಕವಾಗಿ ಸೃಷ್ಟಿಸಿದರು. ತಕೊ! ಕೆಲವೇ ಹೊತ್ತಿನಲ್ಲಿ ಪ್ರಯೋಗ ನಲಿಕೆಯ "ವಾತಾವರಣ" ದಲ್ಲಿ ಈ ಶಕ್ತಿಸ್ರೋತಗಳ

(ಸೂರ್ಯಪ್ರಕಾಶ, ಮಿಂಚು ಇತ್ಯಾದಿ) ರಭಸದ ಕ್ರಿಯೆಯಿಂದ ಅಮಿನೋ ಆಮ್ಲಗಳೇ ಮೊದಲಾದ ಜಟಿಲ ಪದಾರ್ಥಗಳು ಉಂಟಾದವು. ಅಮಿನೋ ಆಮ್ಲಗಳು ಎಲ್ಲ ಬಗೆಯ ಜೀವಿಗಳಲ್ಲೂ ಇರುವ ಮೂಲ ಪದಾರ್ಥಗಳಲ್ಲಿ ಕೆಲವು. ಹೀಗೆ ಪ್ರಯೋಗಶಾಲೆಯಲ್ಲಿ ಇದಂಪ್ರಥಮವಾಗಿ ಜಡ ಪದಾರ್ಥಗಳಿಂದ ಜೀವಾಧಾರ ಪದಾರ್ಥಗಳ ನಿರ್ಮಾಣವಾದಂತಾಯಿತು.

ಆದಿಮ ಪೃಥ್ವಿಯಲ್ಲಿ ಇದೇ ತರಹದಿಂದ ಜೀವಜಾತಗಳು ತಾವಾಗಿ ಹುಟ್ಟಿದವೇ? ಈ ಅಮಿನೋ ಆಮ್ಲಗಳೇ ರೂಪಾಂತರಹೊಂದುತ್ತ ಪ್ರಪ್ರಥಮ ಏಕಾಣು ಜೀವಿ ಹುಟ್ಟಿತೆ? ಒಮ್ಮೆ ಏಕಾಣುಜೀವಿ ಹೇಗೆ ಹುಟ್ಟಿತೆಂದು ತೋರಿಸಿದರೆ ಅನಂತರ ಚಾರ್ಲಸ್ ಡಾರ್ವಿನ್ನನ ವಿಕಾಸವಾದವು ಈ ಆದಿ ಏಕಾಣುಜೀವಿಯಿಂದ ಹೇಗೆ ಪೃಥ್ವಿಯ ಸಕಲ ಜೀವಜಾತಗಳೂ ಉತ್ಪತ್ತಿ ಹೊಂದಿದವೆಂದು ವಿವರಿಸುತ್ತದೆ ಆದರೆ ಅಮಿನೋ ಆಮ್ಲಗಳು ಜೈವಿಕ ಪದಾರ್ಥಗಳಾದರೂ ಜೀವಕಣಗಳೇ ಅಲ್ಲ. ಜೀವಗಳ ಪ್ರಧಾನ ಲಕ್ಷಣ ಸಂತಾನೋತ್ಪತ್ತಿ—ಅಥವಾ ತನ್ನಿಂದ ತನ್ನಂಥ ಇತರ ಜೀವಗಳನ್ನು ಉಂಟುಮಾಡುವ ಶಕ್ತಿ. ಈ ಗುಣವನ್ನು ಹೊಂದಿರುವ ಪದಾರ್ಥಗಳೆಂದರೆ ಬೈಜಿಕ (ನ್ಯೂಕ್ಲಿಕ್) ಆಮ್ಲಗಳು. ಈ ಅಪೂರ್ವ ಗುಣಸಂಪನ್ನವಾದ ಆಮ್ಲಗಳು ಅಮಿನೋ ಆಮ್ಲಗಳಿಂದಲೆ ಹುಟ್ಟಿದವೆಂದು ಈ ವರೆಗಂತೂ ಯಾರೂ ತೋರಿಸಿಕೊಡಲು ಶಕ್ತರಾಗಿಲ್ಲ.

ಕೆಲ ವಿಜ್ಞಾನಿಗಳು ಜೀವವು ಮೂಲತಃ ಪೃಥ್ವಿಯದಲ್ಲವೇ ಅಲ್ಲ, ಯಾವುದೋ ಹೊರ ಲೋಕದಿಂದ ಇಲ್ಲಿಗೆ ಆಗಮಿಸಿ, ಅನುಕೂಲ ಪರಿಸರವನ್ನು ಕಂಡು ಇಲ್ಲಿ ಅಭಿವೃದ್ಧಿ ಹೊಂದಿರಬೇಕು ಎನ್ನುವಷ್ಟು ಮುಂದೆ ಹೋಗಿದ್ದಾರೆ. ಇದಕ್ಕೆ ಅನುಕೂಲವಾದ ಪ್ರಮಾಣವೊಂದು ೧೮೬೪ ರಲ್ಲೆ ದೊರೆತಿತ್ತು. ಆ ವರ್ಷದ ಮೇ ತಿಂಗಳಲ್ಲೊಂದು ಸಂಜೆ ಫ್ರಾನ್ಸಿನ ಓರ್ಗುವೀಲ್ ಎಂಬ ಹಳ್ಳಿಯ ಮೇಲೆ ಒಂದು ಪ್ರಬಲ ಉಲ್ಕಾವೃಷ್ಟಿಯಾಗಿ ದೊಡ್ಡ ದೊಡ್ಡ—ಕೆಲವು ಮಾನವನ ಬುರುಡೆಯಷ್ಟು ಗಾತ್ರದವು—ಬಂಡೆಗಳು ಬಾಹ್ಯಾಂತರಿಕ್ಷದಿಂದ ನೆಲಕ್ಕಪ್ಪಳಿಸಿದವು. ಅವುಗಳನ್ನು ರಾಸಾಯನಿಕ ವಿಶ್ಲೇಷಣಕ್ಕೊಳಪಡಿಸಿದಾಗ ಭೂಮಿಯಲ್ಲಿ ದೊರೆಯುವ ಕಬ್ಬಿಣ, ಸಿಲಿಕಾನ್, ಸೋಡಿಯಂ ಮೊದಲಾದ ಧಾತುಗಳೇ ಇದ್ದವಲ್ಲದೆ ಜೀವಕಣಗಳ ಆಧಾರಪದಾರ್ಥಗಳಾದ ಕೆಲ ಸಾವಯವ ಇಂಗಾಲ ಸಂಯುಕ್ತಗಳು (ಆರ್ಗಾನಿಕ್ ಕಾರ್ಬನ್ ಕಾಂಪೌಂಡ್ಸ್) ಕೂಡ ಸಿಕ್ಕಿದವು. ಉಲ್ಕೆಗಳಲ್ಲಿ ಸಾವಯವ ಪದಾರ್ಥವಿರುವುದಾದರೆ ಪೃಥ್ವಿಯ ಹೊರಗೆ ಜೀವಿಗಳು ಇರಬೇಕೆಂದು ವಿಜ್ಞಾನಿಗಳಲ್ಲಿ ಊಹಾಪೋಹ ಕೆಲಕಾಲದ ವರೆಗೆ ನಡೆಯಿತು. ಆದರೆ ಏನನ್ನೂ ಖಂಡಿತವಾಗಿ ತೀರ್ಮಾನಿಸುವ ಸಾಧನ ಆಗ ವಿಜ್ಞಾನಿಗಳ ಹತ್ತಿರ ಇದ್ದಿಲ್ಲವಾಗಿ ಚರ್ಚೆ ತಾನಾಗಿ ತಣ್ಣಗಾಗಿ ಹೋಯಿತು.

ಈಗ ನಿರ್ಣಯಿಸಬಲ್ಲ ಉಪಕರಣಗಳು ವಿಜ್ಞಾನಿಗಳ ಕೆಯಲ್ಲಿವೆ. ಅಮೇರಿಕದ ಫೋರ್ಡಾಂ ವಿಶ್ವವಿದ್ಯಾಲಯ, ಕೆಲಿಫೋರ್ನಿಯ ವಿಶ್ವವಿದ್ಯಾಲಯ ಮತ್ತು ಎಸ್ಸೋ ರಿಸರ್ಚ್ ಮತ್ತು ಎಂಜನಿಯರಿಂಗ್ ಕಂಪನಿಗಳ ಪ್ರಯೋಗಶಾಲೆಗಳಲ್ಲಿ ಕ್ಷ ಕಿರಣ ಪರೀಕ್ಷೆ ಮೊದಲಾದ ವಿಧಾನಗಳು ಕಳೆದ ಶತಮಾನದ ಫ್ರೆಂಚ್ ವಿಜ್ಞಾನಿಗಳ ಸಂಶಯವನ್ನು ದೃಢಪಡಿಸಿವೆ. ಕೆಲಿಫೋರ್ನಿಯದ ಪಂಡಿತರು ಉಲ್ಕಾಂಶಗಳನ್ನು ಪೃಥಕ್ಕರಿಸಿದಾಗ ಅದರಲ್ಲಿರುವ ಇಂಗಾಲದಲ್ಲಿ ಜೀವಜಾತದ ಕೀಲಿಕೈಯಂತಿರುವ ಬೈಜಿಕ ಆಮ್ಲದ ಅಂಶವಾದ ಸೈಟೋಸೀನ್ ಮೊದಲಾಗಿ ಅನೇಕ ಸಾವಯವ ಸಂಯುಕ್ತಗಳಿದ್ದವು. ಓರ್ಗುವೀಲ್‌ನ ಉಲ್ಕೆಗಳ ತುಣುಕುಗಳನ್ನು ಪೃಥಕ್ಕರಿಸಿದ ಮೇಲೆ

ಎಸ್ಸೋ ಕಂಪೆನಿಯ ಡಾ. ಮೈನ್ ಸ್ಕೈನರು, ನಮ್ಮ ಪೃಥ್ವಿಯಲ್ಲಿ ಜೀವಿಗಳಲ್ಲಿ ಮಾತ್ರವೇ ಸಿಗುವ ಪರಾಫಿನ್ ಹೈಡ್ರೋಕಾರ್ಬನ್‌ನ ಪ್ರಕಾರಗಳು ಅವುಗಳಲ್ಲಿದ್ದವೆಂದು ಹೇಳಿದರು. ಫೋರ್ಡ್ಹಾಂನ ಡಾ. ಬಾರ್ಥೆಲೋಮಿಯೋ ನೇಗಿ ಮೊದಲಾದವರು ಪರಿಶೀಲನೆಯ ನಂತರ ಅದೇ ಸಿದ್ಧಾಂತಕ್ಕೆ ಬಂದು ಪೃಥ್ವಿಯ ಹೊರಗೆ ಜೀವಿಗಳು ಇವೆಯೆಂಬುದಕ್ಕೆ ಇದು ಹೊಸ ಪ್ರಮಾಣ ಎಂದಿದ್ದಾರೆ.

ಉಲ್ಕೆಗಳೆಂದರೆ ಮಂಗಳ ಮತ್ತು ಗುರುಗ್ರಹ ನಡುವೆ ಹಿಂದೆಂದೋ ಇದ್ದು ಅನಂತರ ಒಡೆದು ನುಚ್ಚುನೂರಾದ ಒಂದು ಗ್ರಹದ ಅವಶೇಷಗಳಿರಬೇಕೆಂದು ಕೆಲ ಪ್ರಮುಖ ವಿಜ್ಞಾನಿಗಳು ಬಗೆಯುತ್ತಾರೆ; ಅಲ್ಲಿ ಪೃಥ್ವಿಯಲ್ಲಿದ್ದಂತೆ ಜೀವಿಗಳಿದ್ದಿರಬೇಕು, ಅದು ಧ್ವಂಸವಾದ ನಂತರ ಸಿಡಿದ ತುಣುಕುಗಳ ಎಡೆಗಳಲ್ಲಿ ಹೇಗೋ ಸುರಕ್ಷಿತವಾಗಿ ಉಳಿದಿದ್ದ ಸೂಕ್ಷ್ಮ ಜೀವಗಳು ೬೦ ಕೋಟಿ ವರ್ಷಕ್ಕೂ ಹಿಂದೆ ಪೃಥ್ವಿಗೆ ಬಂದು ಸೇರಿ ವೈವಿಧ್ಯಪೂರ್ಣವಾಗಿ ವಿಕಾಸ ಹೊಂದಿರಬೇಕು-ಇದು ಒಂದು ಊಹೆ

ಈ ಊಹೆಗಳು ಸರಿಯಾಗಿರಲಿ ಬಿಡಲಿ, ಇಂದು ಅಧಿಕಾಂಶ ವಿಜ್ಞಾನಿಗಳು ಪೃಥ್ವಿಯಲ್ಲದೆ ಅನ್ಯ ಲೋಕಗಳಲ್ಲಿ ಜೀವಜಂತುಗಳು ಇರಬಹುದೆಂಬುದನ್ನು ಅಲ್ಲಗಳೆಯುವುದಿಲ್ಲ. ಜೀವವೆಂಬುದು ಬೀಜರೂಪದಲ್ಲಿ ಮೊದಲು ಒಂದೇ ಕಡೆ ಹುಟ್ಟಿ ವಿಶ್ವದಲ್ಲೆಲ್ಲ ಚೆಲ್ಲಲ್ಪಟ್ಟು ಅನುಕೂಲವಿದ್ದಲ್ಲೆಲ್ಲ ವಿಕಾಸಹೊಂದಿರಲಿ, ಅಥವಾ ಅನುಕೂಲ ಪರಿಸ್ಥಿತಿ ಇರುವಲ್ಲೆಲ್ಲ ಜಡ ಪದಾರ್ಥಗಳಿಂದ ತಾನಾಗಿ ಜೀವೋತ್ಪತ್ತಿಯಾಗಿರಲಿ, ವಿಶ್ವದಲ್ಲಿ ಅನುಕೂಲ ಪರಿಸರವಿದ್ದಲ್ಲೆಲ್ಲ ಒಂದಲ್ಲ ಒಂದು ಬಗೆಯ ಜೀವಜಾತಗಳಿರಬಹುದು ಎಂದು ಅವರೀಗ ಒಪ್ಪುತ್ತಿದ್ದಾರೆ.

ಅವರಲ್ಲಿ ಕೆಲವರು ದೂರ ದೂರದ— ನಮ್ಮ ಸೂರ್ಯನಿಗಿಂತ ಕೋಟಿ ಕೋಟಿ ಮೈಲುಗಳಾಚೆಗಿರುವ— ನಕ್ಷತ್ರಗಳ ಸುತ್ತ ಸುಳಿಯುವ ಗ್ರಹಗಳಲ್ಲಿ ಜೀವಿಗಳಿರಬಹುದೆಂದಷ್ಟೇ ಅಲ್ಲ, ಮನುಷ್ಯಸದೃಶ ಅಥವಾ ನಮಗಿಂತಲೂ ಬುದ್ಧಿಶಾಲಿಗಳಾದ ಪ್ರಾಣಿಗಳಿರಬಹುದೆಂದು ದೃಢವಾಗಿ ನಂಬುತ್ತಾರೆ. ಎಷ್ಟು ದೃಢವಾಗಿ ಎಂದರೆ, ಅಮೇರಿಕನ್ ನೌಕಾ ಸಂಶೋಧನ ಶಾಖೆಯ ವಿಜ್ಞಾನಿಗಳು ತಮ್ಮ "ರೇಡಿಯೋ-ದೂರದರ್ಶಕ"ಗಳನ್ನು ಸುದೂರ ನಕ್ಷತ್ರಗಳ ದಿಕ್ಕಿಗೆ ತಿರುಗಿಸಿ ಕಳೆದ ವರ್ಷ ಅನೇಕ ತಿಂಗಳುಗಳ ವರೆಗೆ "ಆಲಿಸಿ"ದರು. ಈ ದೂರದರ್ಶಕವು ೧೦,೦೦೦ ಕೋಟಿ ಕೋಟಿ (೧ ರ ಮುಂದೆ ೧೮ ಶೂನ್ಯಗಳು) ಮೈಲು ದೂರದಿಂದ ಬರುವ ರೇಡಿಯೋ ಸಂಕೇತಗಳನ್ನು ಗುರುತಿಸಿ 'ಕೇಳ' ಬಲ್ಲದು. ಸುದೂರ ಲೋಕದ ಯಾವುದಾದರೂ ಬುದ್ಧಿಶಾಲಿ ಜೀವಿಗಳು ರೇಡಿಯೋ ಸಂದೇಶಗಳನ್ನು ಬಿತ್ತರಿಸುತ್ತಿರಬಹುದೆಂದು ಈ ವಿಜ್ಞಾನಿಗಳ ನಿರೀಕ್ಷೆಯಿತ್ತು. ಈ ವರೆಗೆ ಅವುಗಳನ್ನು ಕಂಡುಹಿಡಿಯುವಲ್ಲಿ ಅವರು ಸಫಲರಾಗಿಲ್ಲ. ಆದರೆ ಅವರು ಆಸೆ ಗುಂದಿಲ್ಲ. ಇನ್ನೂ ಮಂದವಾದ ಸಂಕೇತಗಳನ್ನು ಕಂಡುಹಿಡಿಯಬಲ್ಲ ಹೊಸ ಭಾರಿ ರೇಡಿಯೋ ದೂರದರ್ಶಕವನ್ನವರು ಕಟ್ಟುತ್ತಿದ್ದಾರೆ.

ಅವರ ನಂಬಿಕೆಗೆ ಆಧಾರವೇನು? ಹತ್ತು ಸಾವಿರ ಕೋಟಿ ಕೋಟಿ ಮೈಲು (೬೦ ಪ್ರಕಾಶ ವರ್ಷ) ತ್ರಿಜ್ಯದ ಆಕಾಶ ಪ್ರದೇಶದಲ್ಲಿ ಒಟ್ಟು ಹತ್ತು ಲಕ್ಷ ಕೋಟಿ ಕೋಟಿ (೧ ರ ಮುಂದೆ ೨೦ ಶೂನ್ಯ) ನಕ್ಷತ್ರಗಳಿವೆ. ಅವುಗಳಲ್ಲಿ ಏನಿಲ್ಲೆಂದರೂ ೧೦ ಕೋಟಿ ನಕ್ಷತ್ರಗಳ ಸುತ್ತ ಪೃಥ್ವಿಯ ಹಾಗೆ ಗಾತ್ರ, ವಾತಾವರಣ, ಉಷ್ಣತೆ ಇವೆಲ್ಲ ದೃಷ್ಟಿಯಿಂದಲೂ ಜೀವೋತ್ಪತ್ತಿಗೆ ಹಿತವಾದ ಒಂದೊಂದು ಗ್ರಹವಾದರೂ ಇರಬೇಕು. ಇಷ್ಟರ ಪೈಕಿ ಕೆಲವು ಲೋಕಗಳಲ್ಲಾದರೂ ಜೀವವಿಕಾಸ ಪೃಥ್ವಿಗಿಂತ ಎಷ್ಟೋ ಮೊದಲು ಪ್ರಾರಂಭವಾಗಿ ಅಲ್ಲಿನ "ಜನ"ರು ನಮಗಿಂತಲೂ ಬುದ್ಧಿಶಾಲಿ

ಗಳೂ ಸುಧಾರಿಸಿದವರೂ ಆಗಿರಬೇಕೆಂದು ಕಾರ್ನೆಲ್ ವಿಶ್ವವಿದ್ಯಾಲಯದ ಪ್ರೊ. ಮಾರಿಸನ್ ಮತ್ತು ಪ್ರೊ. ಕೊಕೋನಿಯವರು ಈಚೆಗೆ ಒಂದು ಲೇಖದಲ್ಲಿ ಬರೆದಿದ್ದಾರೆ. ಈ ಊಹೆ ನಿಜವಾಗಿದ್ದರೆ ಆ "ಜನ" ರಿಗೆ ರೇಡಿಯೋ ವಿದ್ಯೆ ತಿಳಿದಿರಲೇಬೇಕು. ಹೆಚ್ಚು ಸುಧಾರಿಸಿದವರಾದ್ದರಿಂದ ಅವರು ಸೂರ್ಯನ ಸುತ್ತಲ ಗ್ರಹಗಳಲ್ಲಿ ಬುದ್ಧಿಶಾಲಿ ಜೀವೋತ್ಪತ್ತಿಗೆ ಅನುಕೂಲ ಪರಿಸರ ವಿದೆಯೆಂದೂಹಿಸಿ ನಮ್ಮ ಕಡೆ ರೇಡಿಯೋ ಸಂಕೇತಗಳನ್ನು ಈಗ ಸಾವಿರಾರು ವರ್ಷಗಳಿಂದ ಕಳಿಸುತ್ತಿರಬಹುದು.

ಹೀಗೆಂದು ಯೋಚಿಸಿ ಅವರು ನಮಗೆ ಸಮೀಪದಲ್ಲಿರುವ, ನಮ್ಮ ಸೂರ್ಯನನ್ನು ಹೋಲುವ ಏಳು ನಕ್ಷತ್ರಗಳನ್ನಾರಿಸಿಕೊಂಡು ತಮ್ಮ ಹೊಸ ರೇಡಿಯೋ ದೂರದರ್ಶಕದ ಕಿವಿಯನ್ನು ಅವುಗಳ ಕಡೆ ಆಲಿಸಹಚ್ಚುವವರಿದ್ದಾರೆ. ಈ ಲೋಕಾಂತರಗಳಲ್ಲಿರುವ " ಜನ "ರಿಂದ ಅವರು ಇಂಗ್ಲೀಷಿನಲ್ಲಿ ಸಂದೇಶಗಳನ್ನು ನಿರೀಕ್ಷಿಸುತ್ತಿಲ್ಲವೆನ್ನಿ ! ಆ ಜನಕ್ಕೆ ಇಂಗ್ಲಿಷ್ ಬರುತ್ತಿರಲಿಕ್ಕಿಲ್ಲ. ಆದರೆ ಸಕಲ ವಿಶ್ವಕ್ಕೂ ತಿಳಿಯುವ ಗಣಿತ ಭಾಷೆಯಲ್ಲಿ ( ತಂತಿಯ ಕಡ-ಕಟ್ಟದ ಹಾಗೆ ) ಸಂದೇಶ ಕಳಿಸುವರು. ನಾವು ಅದಕ್ಕೆ ಅದೇ ಭಾಷೆಯಲ್ಲಿ ಉತ್ತರವೀಯುವೆವು. ಅತಿ ಸಮೀಪದ ನಕ್ಷತ್ರದಲ್ಲೇ ಸುದೈವದಿಂದ ಬುದ್ಧಿವಂತ " ಜನ " ರಿದ್ದರೂ ಅವರ ಸಂದೇಶ ನಮಗೆ ತಲುಪಲು ನಾಲ್ಕು ವರ್ಷ ಬೇಕು ; ನಮ್ಮ ಉತ್ತರ ಅವರಿಗೆ ಮುಟ್ಟಲು ಮತ್ತೆ ನಾಲ್ಕು ವರ್ಷ ಬೇಕು. ಅದಕ್ಕಿಂತ ದೂರವಿರುವ ನಕ್ಷತ್ರಗಳೊಡನೆ ಒಮ್ಮೊಮ್ಮೆ ಸಂಭಾಷಿಸಲು ಒಂದು, ಏಕೆ ನೂರಾರು ಜೀವಮಾನಗಳು ಬೇಕಾದಾವು. ಆದರೆ ವಿಜ್ಞಾನಿಗಳು ಇದರಿಂದ ಎದೆಗುಂದುವುದಿಲ್ಲ. ನಮ್ಮ ಪ್ರಶ್ನೆಗೆ ನಮ್ಮ ಮೊಮ್ಮಕ್ಕಳ ಕಾಲದಲ್ಲಿ ಉತ್ತರ ಬಂದರೂ ಅವರಿಗೆ ಅತೃಪ್ತಿಯಿಲ್ಲ.

ಸುದೂರ ಲೋಕಗಳ ಜೀವಪ್ರಪಂಚದ ಮಾತು ಒತ್ತಟ್ಟಿಗಿರಲಿ. ನಮ್ಮ ಬಳಗದ ಗ್ರಹಗಳ ಮಾತೇನು ? ಮಂಗಳ ಮತ್ತು ಶುಕ್ರ— ಇವು ನಮಗೆ ಅತಿ ಹತ್ತಿರದ ಗ್ರಹಗಳು. ಮಂಗಳ ಗ್ರಹ ಪೃಥ್ವಿಗಿಂತ ಬಹಳ ಹಗುರಾಗಿರುವುದರಿಂದ ಅದರ ವಾತಾವರಣ ಬಹಳ ವಿರಳವಾಗಿದೆ. ಅಲ್ಲಿ ತೀರ ಕಡಿಮೆ ಪ್ರಾಣವಾಯು ( ಆಮ್ಲಜನಕ) ಇದೆ. ನೀರಿನ ಬರವೂ ವಿಪರೀತ. ಚಳಿಯೂ ಅಸಾಧ್ಯ. ಅಲ್ಲಿನ ಭೂಮಧ್ಯ ರೇಖೆಯ ಪ್ರದೇಶದಲ್ಲೂ ರಾತ್ರಿ ಶೂನ್ಯಕ್ಕಿಂತ ೪೦ ಅಂಶ ಕೆಳಗಿನ ವರೆಗಿನ ಶೈತ್ಯ ಇದ್ದೀತು. ಈ ಸ್ಥಿತಿಯಲ್ಲಿ ನಮಗೆ ತಿಳಿದಂಥ ಜೀವಿಗಳು ಅಲ್ಲಿರುವುದು ಅಸಾಧ್ಯ.

ಆದರೆ ಪ್ರೊ. ಡಬ್ಲ್ಯು. ಎಂ. ಸಿಂಟನ್ನರು ಮತ್ತು ಇತರರು ಈಚೆಗೆ ಮಂಗಳ ಗ್ರಹದಿಂದ ಬರುವ ಬೆಳಕನ್ನು ಪರೀಕ್ಷಿಸಿದಾಗ ಅದರಲ್ಲಿ ಇಂಗಾಲ-ಜಲಜನಕ ಸಂಯೋಗವನ್ನು ತೋರಿಸುವ ಪ್ರಕಾಶ ಗೋಚರಕ್ಕೆ ಬಂತು. ಪೃಥ್ವಿಯಲ್ಲಿ ಸಾವಯುವ ಪದಾರ್ಥಗಳು ಇಂಥ ಪ್ರಕಾಶವನ್ನು ಬಿಂಬಿಸುತ್ತವೆ. ಈ ಬೆಳಕು ಮಂಗಳನ ಮೈಮೇಲೆ ಕಾಲುವೆಗಳಂತೆ ಕಾಣುವ ಪ್ರದೇಶಗಳಿಂದಲೇ ಬರುತ್ತದೆ. ಮತ್ತು ಬೇಸಗೆಯಲ್ಲಿ ಮಂಗಳದ ಧ್ರುವಗಳ ಹಿಮ ಕರಗಿ ಭೂಮಧ್ಯರೇಖೆಯತ್ತ ಹರಿಯತೊಡಗಿದಾಗ ಆ ಪ್ರದೇಶ ವಿಸ್ತಾರಗೊಳ್ಳುತ್ತದೆ. ಇದರಿಂದ ಮಂಗಳದಲ್ಲಿ ಕೆಲ ಬಲು ಕಷ್ಟಜೀವಿಗಳಾದ ಸಸ್ಯಗಳು ಬದುಕುತ್ತಿರಬಹುದೆಂದು ಅನೇಕ ವಿಜ್ಞಾನಿಗಳು ನಂಬತೊಡಗಿದ್ದಾರೆ.

ಆದರೆ ಹಿಂದೊಂದು ಕಾಲದಲ್ಲಿ ಮಂಗಳನ ಪರಿಸರ ಇಷ್ಟು ನಿಷ್ಠುರವಾಗಿರಲಿಲ್ಲ. ಆದ್ದರಿಂದ ಕೋಟ್ಯಂತರ ವರ್ಷಗಳ ಹಿಂದೆ ಇಲ್ಲಿ ಮಾನವ ಸದೃಶ ಬುದ್ಧಿಜೀವಿಗಳು ಇದ್ದು ನಾಗರಿಕತೆಗಳನ್ನು ಕಟ್ಟಿ ಈಗ ಅಳಿದುಹೋಗಿರಬಹುದೆ? ಕೆಲ ಸೋವಿಯಟ್ ವಿಜ್ಞಾನಿಗಳು ಹೌದೆಂದು

ಹೇಳುತ್ತಾರೆ.

ಶುಕ್ರನ ಮಾತೇನು? ಅದು ಗಾತ್ರ ತೂಕಗಳಲ್ಲಿ ನಮ್ಮ ಪೃಥ್ವಿಯನ್ನು ಹೋಲುತ್ತದೆ. ಆದರೆ ಅದರ ಸುತ್ತ ಹಬ್ಬಿದ ದಟ್ಟವಾದ ಮೋಡ ಅದನ್ನಿನ್ನೂ ಅತಿ ನಿಗೂಢ ಗ್ರಹವಾಗಿಟ್ಟಿದೆ. ಅಲ್ಲಿ ನೀರೇ ಇಲ್ಲದ್ದರಿಂದ ಜೀವಜಂತುಗಳು ಇರಲು ಸಾಧ್ಯವಿಲ್ಲೆಂದು ನಂಬಲಾಗಿತ್ತು. ಆದರೆ ಅಮೇರಿಕನ್ನರು ಕೆಲ ತಿಂಗಳ ಹಿಂದೆ ಬಲೂನಿನಲ್ಲಿಟ್ಟು ಪೃಥ್ವಿಯ ವಾತಾವರಣದ ಹೊರಗೆ ಕಳಿಸಿದ ದೂರದರ್ಶಕವು ಅಲ್ಲಿನ ಮೋಡಗಳಲ್ಲಿ ನೀರಿನ ಅಂಶಗಳನ್ನು ಗುರುತಿಸಿದೆ. ಶುಕ್ರ ಗ್ರಹವೆಲ್ಲ ಸಾಗರದಲ್ಲಿ ಮುಳುಗಿದೆ, ಅಲ್ಲಿ ನೆಲವೇ ಇಲ್ಲವೆಂದು ಊಹಾಪೋಹವೊಂದಿದೆ. ಆದರೆ ಶುಕ್ರನ ಮೇಲಿನ ಉಷ್ಣತೆ ೫೪೦ ಅಂಶದಷ್ಟಿರುವುದೆಂದೂ ಈಚೆಗೆ ಕಂಡುಬಂದಿರುವುದರಿಂದ ಅದರ ಕೊಳ್ಳುದಿಯುವ ಸಾಗರದಲ್ಲಿ ಯಾವ ಜೀವವೂ ಇರುವುದು ಬಲು ದುಸ್ಸಾಧ್ಯ.

ಉಳಿದ ಗ್ರಹಗಳಲ್ಲಿ ಬುಧ ಸೂರ್ಯನಿಗೆ ತೀರ ಸಮೀಪವಾಗಿದ್ದು ಅದರ ಒಂದು ಬದಿ ಕಬ್ಬಿಣ ಕರಗುವಷ್ಟು ಬಿಸಿ, ಇನ್ನೊಂದು ಬದಿ ಗಾಳಿನೀರಾಗುವುದಕ್ಕಿಂತಲೂ ಚಳಿಯಾಗಿದೆ. ಪೃಥ್ವಿಗಿಂತ ಹತ್ತುಪಟ್ಟು ದೊಡ್ಡದಾದ ಗುರುವಿನಲ್ಲಿ ೧೩ ಸಾವಿರ ಮೈಲು ದಪ್ಪದ ಹಿಮದ ಹಾಳೆ ಹಬ್ಬಿದೆ. ಶನಿ, ಉರಣ, ನೆಪ್ಚೂನ್, ಪ್ಲೂಟೋಗಳು ಸೂರ್ಯನಿಂದ ತೀರ ದೂರವಿದ್ದು ಆ ಅಸಾಧ್ಯ ಚಳಿಯಲ್ಲಿ ಯಾವ ಜೀವವೂ ಬದುಕದು.

ಆದ್ದರಿಂದ ನಮ್ಮ ಪ್ರಥಮ ಯತ್ನ ಮಂಗಳ, ಶುಕ್ರರ ಕಡೆಗೆ ಆಗಲಿದೆ. ಮಾನವರಹಿತ ಆಕಾಶಬಾಣಗಳನ್ನು ಅಲ್ಲಿ ಕಳಿಸಿ ಅಲ್ಲಿನ ನೆಲ ಅಥವಾ ವಾತಾವರಣದಲ್ಲಿ ಜೀವಾಣುಗಳು (ಮೈಕ್ರೋಬ್ಸ್) ಇರುವವೇ ಎಂದು ಸೂಕ್ಷ್ಮದರ್ಶಕದಲ್ಲಿ ಅಲ್ಲಿಂದಲೇ ಪರೀಕ್ಷಿಸಿ ಭೂಮಿಗೆ ವಾರ್ತೆ ಕಳಿಸುವ ಉಪಕರಣಗಳನ್ನು ಅದರೊಡನೆ ಇಡಲಾಗುವುದು. ಜೀವಾಣುಗಳಿದ್ದರೆ ಅಲ್ಲಿ ಇತರ ಜೀವಿಗಳಿರಬಹುದೆಂದು ನಾವು ತರ್ಕಿಸಬಹುದು. ಆಮೇಲೆ ಆ ಗ್ರಹಗಳಿಗೆ ಮಾನವನ ಗಮನ.

ಮಂಗಳ—ಮತ್ತು ಚಂದ್ರ—ಒಂದು ದೃಷ್ಟಿಯಿಂದ ಪ್ರಯೋಜನಕಾರಿಗಳು. ಅಲ್ಲಿ ವಾತಾವರಣ ತೀರ ವಿರಳವಾಗಿರುವುದರಿಂದ ಬಾಹ್ಯ ಲೋಕಗಳನ್ನು ಸ್ಪಷ್ಟವಾಗಿ ಕಾಣಬಹುದು. ಅಲ್ಲಿ ಭಾರಿ ದೂರದರ್ಶಕಗಳನ್ನು ಸ್ಥಾಪಿಸಿ ನಕ್ಷತ್ರಗಳಲ್ಲಿ ಯಾವುದರ ಸುತ್ತ ಗ್ರಹಗಳಿವೆ, ಯಾವ ಗ್ರಹಗಳು ಜೀವವಸತಿಗೆ ಹಿತವಾಗಿವೆ ಎಂದು ಕಂಡುಕೊಳ್ಳುವುದು ಸುಲಭ. ಮಾನವ ಆ ಗ್ರಹಗಳಿಗೆ ಹೋಗಲು ಸಮರ್ಥನಾದಾಗ ವಿಜ್ಞಾನಿಗಳು ಅಲ್ಲಿ ಈ ದೂರದರ್ಶಕಗಳನ್ನು ಸ್ಥಾಪಿಸುವರು.

ಅಂತೂ ಸೂರ್ಯನ ಗ್ರಹಗಳನ್ನು ನೋಡಿದರೆ ಮಾನವನಂತೆ ಬುದ್ಧಿಶಾಲಿ ಪ್ರಾಣಿಗಳನ್ನು ಕಾಣಬೇಕಾದರೆ ಸೂರ್ಯನನ್ನು ಬಿಟ್ಟು ಇತರ ನಕ್ಷತ್ರಗಳನ್ನೇ ಅರಸಬೇಕೆಂಬುದು ಹೆಚ್ಚು ಕಡಿಮೆ ನಿಶ್ಚಿತವಾದಂತೆಯೇ ಇದೆ. ಮಾನವ ಒಂದು ವೇಳೆ ಅಲ್ಲಿಗೆ ಹೋಗಬಲ್ಲನಾದರೆ ಎಂಥ ಆಕಾರದ "ಜನ" ಗಳನ್ನು ಆತ ಕಾಣಬಹುದು?

ಖಂಡಿತ ಹೇಳಲು ಬಾರದು, ಊಹಿಸಬಹುದು ಮಾತ್ರ. ನಮ್ಮ ಪೃಥ್ವಿಯಲ್ಲೇ ಜೀವಿಗಳು ಅಸಂಖ್ಯ-ವಿಚಿತ್ರ ಜಾತಿಯವಾಗಿವೆ. ಏಕೆಂದು ನಮಗೆ ಸರಿಯಾಗಿ ಗೊತ್ತಿಲ್ಲ. ಕಪಿಯಿಂದ ಮಾನವ ಹೇಗಾದ ಎಂದೂ ನಾವರಿಯೆವು. ನಮಗಿಂತ ಬುದ್ಧಿವಂತವಾದ ಜೀವಿ ನಾಳೆ ಉಂಟಾಗಲಿದ್ದರೆ ಆತನ ರೂಪ ಹೇಗಿದ್ದೀತೆಂದೂ ನಾವು ಹೇಳಲಾರೆವು. ಆದರೂ ಯಾವ ಲೋಕದ ಬುದ್ಧಿಶಾಲಿ ಜೀವಿಯೆ ಇರಲಿ, ಅವನಿಗೆ ಮೆದುಳಿರಬೇಕು, ಅದಕ್ಕೆ ಸಮೀಪವಾಗಿ ಅವನ ಕಣ್ಣು ಕಿವಿ ಮೂಗುಗಳಿರಬೇಕು. (ಇಲ್ಲದಿದ್ದರೆ ಅಪಾಯಗಳನ್ನು ತತ್‌ಕ್ಷಣ ಗ್ರಹಿಸಲಾರದೆ

ಆತ ಪ್ರಾಣಕ್ಕೆರವಾದಾನು.) ನಮ್ಮಂತೆ ಅವನೂ ಪ್ರಾಣವಾಯುವಿನಿಂದ "ಉರಿಯು"ಬೇಕಾದರೆ ಅವನಿಗೆ ಪುಪ್ಪುಸ ಹೃದಯಗಳಂಥ ಅಂಗಗಳಿರ ಬೇಕು. ಪೃಥ್ವಿಯಂಥ ಗ್ರಹದಲ್ಲಿದ್ದರೆ ಆ ಅಂಗ ಗಳನ್ನು ಕಾಪಾಡಲು ಅಸ್ಥಿಪಂಜರವೂ ಬೇಕು. ಹೀಗಿರುವುದರಿಂದ ಆತ ನಮ್ಮನ್ನು ಸ್ವಲ್ಪಮಟ್ಟಿಗೆ ಹೋಲಬಹುದು. ಆದರೆ ಅವನಿಗೆ ನಾಲ್ಕು ಕೈ, ಎರಡು ಕಾಲುಗಳಿರಬಾರದೆಂದಿಲ್ಲ, ತಲೆಯ ಹಿಂದೊಂದು ಕಣ್ಣು ಅವನ ರಕ್ಷಣೆಗೆ ಅನುಕೂಲ ವಾಗಬಹುದಾದ್ದರಿಂದ ಅದೂ ಸಂಭವವೇ.

ನಮ್ಮ ಈ ಊಹೆಗಳೆಲ್ಲ ಪೃಥ್ವಿಯ ಆರಾಮದ ಪರಿಸರದಲ್ಲಿ ಬೆಳೆದ ಜೀವಿಗಳನ್ನು ನೋಡಿ ಮಾಡಿ ದವು. ಆದರೆ ಜೀವವೆಂಬುದು ಬಲು ಗಟ್ಟಿ ವಸ್ತು. ಅಮೇರಿಕದ ಯೆಲ್ಲೊಸ್ಟೋನ್‌ನ ಕುದಿ ಯುವ ನೀರಿನ ಬುಗ್ಗೆಗಳಲ್ಲಿ ಒಂದು ವಿಧದ ಸೂಕ್ಷ್ಮಜೀವಿಗಳು ಯಾವ ಆತಂಕವೂ ಇಲ್ಲದೆ ಬದುಕುತ್ತವೆ. ಮಾನವನಿಗೆ ಘಾತಕವಾದದ್ದ ಕ್ಕಿಂತ ೧೦,೦೦೦ ಪಟ್ಟು ಬಲವಾದ ರೇಡಿಯೋ ವಿಕಿರಣವನ್ನು ಸಹಿಸಿಕೊಂಡು ಕೆಲ ಜೀವಾಣು ಗಳು ಬದುಕಿರುವುದು ಕಂಡುಬಂದಿದೆ. ಕಠೋರ ಪರಿಸರದ ಲೋಕಗಳಲ್ಲಿ ಜೀವ ಉಳಿಯಲಾ ರದು ಬೆಳೆಯಲಾರದು ಎಂದಾಗಲಿ ಅದು ಎಂಥೆಂಥ ರೂಪ ಧರಿಸಬಹುದೆಂದಾಗಲಿ ಹೇಳಲು ಶಕ್ಯವಿಲ್ಲ.

ಜೀವ ಜಾತಗಳು ಪೃಥ್ವಿಯಲ್ಲಿದ್ದಂತೆಯೇ ಎಲ್ಲೆಡೆ ಇರಬೇಕಾಗಿಲ್ಲ. ಉದಾಹರಣೆಗೆ ಸಕಲ ಜೀವಿಗಳಲ್ಲಿ ಕಾಣಿಸುವ ಪ್ರೋಟೀನ್ ದ್ರವ್ಯದ ಅಣುಗಳು ನಮ್ಮ ಪೃಥ್ವಿಯಲ್ಲಿ ಎಡ ಮುರಿಯಾಗಿ ರಚಿತವಾಗಿವೆ. ಅದರ ಬದಲು ಅವು ಬಲಮುರಿಯಾಗಿ ರಚಿತವಾಗಿದ್ದರೆ ನಮ್ಮ ಊಹಾ ಶಕ್ತಿಯನ್ನು ಕುಂಠಿತಗೊಳಿಸುವಷ್ಟು ವಿಪರೀತ ವೃತ್ತಿಯ ಅದ್ಭುತ ಜೀವಜಂತುಗಳು ಹುಟ್ಟಬಹುದಿತ್ತು. ಇಲ್ಲಿ ಬಲಮುರಿ ಪ್ರೋಟೀನ್ ಗಳಿಲ್ಲವೆಂದಾಕ್ಷಣ ಬೇರೆ ಕಡೆಗೂ ಅವಿಲ್ಲವೆಂದು ಹೇಗೆ ಹೇಳೋಣ?

ಪೃಥ್ವಿಯ ಮೇಲಿನ ಜೀವಿಗಳ ಶರೀರಕ್ಕೆಲ್ಲ ಇಂಗಾಲವೇ ಆಧಾರ. ಇಂಗಾಲ ಪ್ರಾಣವಾಯು ಗಳ ಜೋಡಿಯಿಂದ ಪೃಥ್ವಿಯ ಜೀವರಾಶಿ ಸಾಗುತ್ತದೆ. ಆದರೆ ಪೃಥ್ವಿಯ ಆದಿ ಕಾಲ ದಲ್ಲಿನ ಅದರ ವಾತಾವರಣದ ವಿಶಿಷ್ಟ ಸ್ವರೂಪದ ದೆಸೆಯಿಂದಲೇ ನಮ್ಮಲ್ಲಿ ಇಂಗಾಲ ಮೂಲ ಜೀವಿಗಳ ಉತ್ಪತ್ತಿಯಾಗಿರಬಹುದೆ? ಇಂಗಾಲ ದಲ್ಲಿ ಜೀವಾಧಾರವಾಗುವ ಅನೇಕ ಗುಣಗಳಿರು ವುದು ನಿಜ. ಆದರೆ ಬೇರೆ ಧಾತುಗಳಲ್ಲಿ ಆ ಗುಣಗಳೇ ಇಲ್ಲವೆಂದು ಹೇಳಬರುವುದಿಲ್ಲ.

ಇಂಗಾಲವಲ್ಲದೆ ಜೀವಾಧಾರವಾಗಬಲ್ಲ ಇನ್ನೊಂದು ಪದಾರ್ಥವುಂಟೆಂದು ವಿಜ್ಞಾನಿಗಳು ಹೇಳುತ್ತಾರೆ. ಅದು ಸಿಲಿಕಾನ್. ಇಂಗಾಲದಂತೆ ಅನೇಕ ಗುಣಗಳು ಅದರಲ್ಲಿವೆ. ವಿಶ್ವದ ಬೇರೆ ಲೋಕಗಳಲ್ಲಿ ಸಿಲಿಕಾನ್‌ಮೂಲವಾದ ಜೀವಿ ಗಳಿರಲೂಬಹುದು. ಅವುಗಳು ಪ್ರಾಣವಾಯು ವನ್ನು ಸೇದಿಕೊಂಡು ಸಿಲಿಕಾನ್ ಡಯಾಕ್ಸೈ ಡನ್ನು ಹೊರಗೆ ಬಿಡಬಹುದೆಂದು ಡಾ. ಟಾಂಬಾ ಗರು ಹೇಳುತ್ತಾರೆ. ಅಂಥ ಜೀವಿಗಳು ಯಾವ ರೂಪ ಧರಿಸಬಹುದೆಂದು ಯಾರು ಬಲ್ಲರು?

ಆದರೆ ಬಾಹ್ಯಾಂತರಿಕ್ಷದ ಹೊಸಲಾಚೆಗೆ ಕಾಲಿಟ್ಟ ಮಾನವ ಈ ಸಮಸ್ಯೆಯನ್ನು ಬಿಡಿಸು ವತ್ತ ಇನ್ನೊಂದು ಹೆಜ್ಜೆ ಹಾಕಿದ್ದಾನೆಂಬುದು ನಿಜ. ★






# ರಾಜಾಪುರದ ವಿಸ್ಮಯಕರ ಗಂಗಾವತರಣ

ವಿ. ಬಿ. ಕುಲಕರ್ಣಿ

ಪವಿತ್ರ ಗಂಗಾಮಾತೆ ಬಂದಳು !

ಸುದ್ದಿ ಹಬ್ಬುವುದೇ ತಡ, ಕೊಂಕಣ ಪ್ರದೇಶದ ಚಿಕ್ಕ ಪಟ್ಟಣವಾದ ರಾಜಾಪುರಕ್ಕೆ ಎಲ್ಲಿಲ್ಲದ ಮಹತ್ವ ಬಂದುಬಿಡುತ್ತದೆ. ರಾಜಾಪುರದ ಇಕ್ಕಟ್ಟಾದ ಪೇಟೆಯ ರಸ್ತೆಗಳಲ್ಲಿ, ಕೆಂಪು ಹಂಚಿನ ಇಳಿಜಾರಾದ ಮಾಡುಗಳ ಮನೆಗಳಲ್ಲಿ, ಎಲ್ಲೆಲ್ಲಿಯೂ ಈ ಮಾತೇಮಾತು. ತಮ್ಮ ಜೀವನಾವಶ್ಯಕ ಸಾಮಾನುಗಳನ್ನು ಕೊಳ್ಳಲು ಹಳ್ಳಿಗಳಿಂದ ಈ ಪೇಟೆಗೆ ಬರುವ ಜನರಿಂದ, ತಾಲೂಕು ಕಚೇರಿಗಳಿಗೆ ಹಲವಾರು ಕಾರ್ಯಗಳಿಗಾಗಿ ಬರುವ ಜನರಿಂದ, 'ಗಂಗಾಮಾತೆ' ಬಂದ ಸಮಾಚಾರ ಹಳ್ಳಿಹಳ್ಳಿಗೆ ಮುಟ್ಟುತ್ತದೆ. ಸುದ್ದಿ ಮುಟ್ಟಿದ್ದೇ ತಡ, ಪವಿತ್ರ ಗಂಗೆಯಲ್ಲಿ ಮಿಂದು ಪಾವನರಾಗುವ ಆಶೆಯಿಂದ ಹಳ್ಳಿಗರು ಸಾಲುಗಟ್ಟಿಕೊಂಡು ರಾಜಾಪುರಕ್ಕೆ ಬರುತ್ತಾರೆ. ಈಗ ರಾಜಾಪುರದ ಪ್ರವಾಸ ಸರಕಾರೀ ಬಸ್ಸುಗಳ ಮೂಲಕ ಸುಲಭವಾಗಿದೆ. ಇವು ಬರುವವರೆಗೆ ಜನ ಕಾಲ್ನಡಿಗೆಯಿಂದಲೂ ಸವಾರಿ ಕಟ್ಟಿದ ಎತ್ತಿನ ಬಂಡಿಗಳಲ್ಲೂ ಬರುತ್ತಿದ್ದರು.

ರಾಜಾಪುರ ಸುಂದರ ಪಟ್ಟಣ. ಹಸಿರು ಮಾವಿನ ತೋಪುಗಳು, ಕೊಳ್ಳದ ಇಳಿಜಾರಾದ ಭೂಮಿಯಲ್ಲಿ ಬೆಳೆದಿರುವ ನಾನಾ ಗಿಡಗಂಟಿಗಳು ಮುಂತಾದವುಗಳಿಂದ ಈ ಪಟ್ಟಣಕ್ಕೆ ದಿವ್ಯ ಸೌಂದರ್ಯವೊಂದು ಪ್ರಾಪ್ತವಾಗಿದೆ. ಮುಂಬಯಿ-

"ಮುಂಬಯಿ ಸ್ಟೇಟ್ ಟ್ರಾನ್ಸ್‌ಪೋರ್ಟ್ ರಿವ್ಯೂ" ನಿಂದ

ಕೊಂಕಣ-ಗೋವಾ ಹೆದ್ದಾರಿಯಲ್ಲಿ ಕೊಲ್ಲಾಪುರದಿಂದ ೮೦ ಮೈಲು, ರತ್ನಾಗಿರಿಯಿಂದ ೪೮ ಮತ್ತು ಮುಸಾಖಾಜಿ ಬಂದರದಿಂದ ೧೮ ಮೈಲು ದೂರದಲ್ಲಿ ರಾಜಾಪುರವಿದೆ.

ಈ ಮೂರೂ ಸ್ಥಳಗಳಿಂದ ಎಸ್. ಟಿ. ಬಸ್ಸುಗಳಲ್ಲಿ ರಾಜಾಪುರವನ್ನು ತಲುಪಬಹುದು. ಯಾತ್ರಿಕರು ರಾಜಾಪುರದಿಂದ ಗಂಗಾಮಾತೆ ಉದ್ಭವಿಸಿರುವ ಸ್ಥಳಕ್ಕೆ ನಡೆದುಕೊಂಡೇ ಹೋಗುತ್ತಾರೆ.

ರಾಜಾಪುರದ ಮಗ್ಗುಲಲ್ಲಿ ಹರಿಯುವ ನದಿಯ ಎಡ ದಂಡೆಯ ಮೇಲೆ ತುಸುವೇ ದೂರದಲ್ಲಿ ಸುಪ್ರಸಿದ್ಧವಾದ ಬಿಸಿನೀರಿನ ಬುಗ್ಗೆಯಿದೆ. ಜಿಲ್ಲಾ ಲೋಕಲ್ ಬೋರ್ಡಿನವರ ಪರಿಶ್ರಮದಿಂದ ಈ ಸ್ಥಳ ಸಾಕಷ್ಟು ಆರೋಗ್ಯಕರವಾಗಿರುತ್ತದೆ. ಸ್ತ್ರೀಯರು ಸ್ನಾನ ಮಾಡುವುದಕ್ಕಾಗಿ ಪ್ರತ್ಯೇಕ ಏರ್ಪಾಡಿದೆ. ದಣಿದು ಬಂದ ಯಾತ್ರಿಕರು 'ಗೋಮುಖ'ದಿಂದ ಸದಾಕಾಲ ಕೆಳಗೆ ಬೀಳುವ ನೀರಿನಲ್ಲಿ ಮಿಂದು ಪ್ರಸನ್ನರಾಗುತ್ತಾರೆ.

ಈ 'ಗೋಮುಖ'ವನ್ನು ಯಾರು, ಯಾವಾಗ ಕಟ್ಟಿದರು ಎಂಬ ಬಗ್ಗೆ ಏನೂ ತಿಳಿದಿಲ್ಲ. ಆದರೆ ಇದು ಬಹುಶಃ ೩೦೦ ವರ್ಷಗಳ ಹಿಂದಿನದಿರಬೇಕು ಎಂದು ಅಂದಾಜಿದೆ. ಸುಮಾರು ೩,೦೦೦ ಚದರಡಿ ಬಯಲಿನ ಸುತ್ತ ಒಂದು ಕಲ್ಲಿನ ಗೋಡೆಯಿದೆ. ಈ ಬಯಲಿನಲ್ಲಿ ಜಗತ್ತಿನ ಆಶ್ಚರ್ಯಕರ ವಸ್ತುಗಳಲ್ಲಿ ಒಂದಿದೆ. ಈ ಚಮತ್ಕಾರಕ್ಕೆ ವಿವರಣೆಯನ್ನು ಕೊಡಲು ವಿಜ್ಞಾನ ಇನ್ನೂ ಸಮರ್ಥವಾಗಿಲ್ಲ. ಇದು ದೇವರ ಕೃತಿ ಎಂದು ಜನ ನಂಬುತ್ತಾರೆ.

ಕರಿಕಲ್ಲಿನಲ್ಲಿ ಕಟ್ಟಿದ ೧೪ ಕೆರೆಗಳು ಇಲ್ಲಿವೆ. ಎಲ್ಲವೂ ಹೆಚ್ಚು ಕಡಿಮೆ ಒಂದೇ ಮಟ್ಟದಲ್ಲಿವೆ. ಗಂಗಾಮಾತೆಯ ಆಶೀರ್ವಾದವಾದಾಗ ಅಂದರೆ ಗಂಗಾಮಾತೆ ಉದ್ಭವವಾದಾಗ ಈ ಹದಿನಾಲ್ಕು ಕೆರೆಗಳೂ ತುಂಬಿ ತುಳುಕುತ್ತವೆ. ಆಲದ ಮರವೊಂದರ ಬುಡದಲ್ಲಿರುವ ಈ ಕೆರೆಗಳ ಪೈಕಿ ಅತಿ ಚಿಕ್ಕದಾದ ಕೆರೆಯಲ್ಲಿ ಮೊದಲು ನೀರು ಕಾಣಿಸಿಕೊಳ್ಳುತ್ತದೆ. ಆ ಮೇಲೆ ಎಲ್ಲ ಕೆರೆಗಳೂ ತುಂಬಿಕೊಳ್ಳುತ್ತವೆ. ಪ್ರತಿಯೊಂದಕ್ಕೂ ಒಂದೊಂದು ಹೆಸರಿದೆ. ಇವುಗಳಲ್ಲಿ ಕಾಶಿಕುಂಡವೇ ಮುಖ್ಯವಾದದ್ದು. ಕಾಶಿಕುಂಡ ಮೂರು ಅಡಿ ಉದ್ದ, ಮೂರು ಅಡಿ ಅಗಲವಾಗಿದ್ದು ಎಂಟಡಿ ಆಳವಾಗಿದೆ. ಅದರ ಸುತ್ತಲೂ ಹನ್ನೆರಡಡಿ ಅಗಲದ ಕಟ್ಟೆಯಿದೆ. ಕುಂಡದ ಅಡಿಯ ನೆಲದಿಂದ ನೀರು ಝರಿಯಿಂದ ಹರಿಯುವ ನೀರಿನಂತಲ್ಲ, ಆದರೆ ಬುಗ್ಗೆಯಿಂದ ಚಿಮ್ಮುವ ನೀರಿನಂತೆ ಬರುವುದನ್ನು ಕಾಣಬಹುದು. ಈ ಕುಂಡಕ್ಕೆ 'ಗೋಮುಖ'ವಿದ್ದು ಈ ನೀರಿನಲ್ಲಿ ಸ್ನಾನ ಮಾಡುವುದೆಂದರೆ ಸ್ವರ್ಗಸುಖ ಪಡೆದಂತೆಯೆ ಅನಿಸುವುದು.

ಹಿಂದಿನ ದಾಖಲೆಗಳನ್ನು ನೋಡಿದರೆ ಈ ಅದ್ಭುತ, ವರ್ಷದ ಯಾವ ಕಾಲದಲ್ಲಿಯೆ ಜರುಗಬಹುದು ಎಂದು ಕಾಣುವುದು. ಆದರೂ ಬೇಸಿಗೆ ಮುಗಿಯುವ ಕಾಲದಲ್ಲಿ ಈ ಚಮತ್ಕಾರ ಜರುಗುವುದು ಹೆಚ್ಚು. ಬೇಸಿಗೆಯಲ್ಲಿ ಸುತ್ತಮುತ್ತಲೆಲ್ಲ ನೀರಿನ ಅಭಾವವಿರುವಾಗ ಗುಡ್ಡದ ಬುಡದಲ್ಲಿ ಹರಿಯುವ ನದಿ ಕೂಡ ರಸ್ತೆಯ ಅಂಚಿನಲ್ಲಿರುವ ಕಾಲುವೆಯಂತೆ ಚಿಕ್ಕದಾಗಿ ಹರಿಯುವಾಗ, ಗುಡ್ಡದ ಮೇಲಿರುವ ಈ ಕೆರೆಗಳು ಹಠಾತ್ತಾಗಿ ತುಂಬಿಕೊಂಡು ಅನೇಕಾನೇಕ ದಿನಗಳ ವರೆಗೆ, ಕೆಲ ಸಲ ತಿಂಗಳುಗಳ ವರೆಗೆ ಹರಿಯುತ್ತಿರುವುದು ಅದ್ಭುತವಲ್ಲದೆ ಇನ್ನೇನು? ಕೆರೆಗಳಲ್ಲಿ ನೀರು ಎಂದು ಬಂದೀತು, ಯಾವಾಗ ನೀರು ಇಲ್ಲದಂತಾದೀತು, ಬಂದ ನೀರು ಎಷ್ಟು ದಿನಗಳ ವರೆಗೆ ಇದ್ದೀತು ಎಂದು ಹೇಳುವುದು ಯಾರಿಗೂ ಸಾಧ್ಯವಿಲ್ಲ. ಇದಕ್ಕೆಲ್ಲ ಕಾರಣವೇನು ಎಂಬುದು ರಹಸ್ಯವಾಗಿಯೆ ಉಳಿದಿದೆ.

ಇನ್ನೂ ಆಶ್ಚರ್ಯದ ಮಾತೆಂದರೆ ಈ ಕೆರೆಗಳಲ್ಲಿಯ ನೀರು ಬೇರೆ ಬೇರೆ ಬಗೆಯದಿರುತ್ತದೆ. ಇವುಗಳ ಘನತ್ವ (Density) ಮತ್ತು

ಉಷ್ಣತಾಮಾನ ಭಿನ್ನವಾಗಿರುತ್ತದೆ. ಇದರಿಂದ ಇವುಗಳ ಉಗಮ ಒಂದೇ ಆಗಿರದೆ ಬೇರೆ ಬೇರೆ ಯಾಗಿದೆ ಎಂದು ಸ್ಪಷ್ಟವಾಗುತ್ತದೆ. ನೀರು ಸ್ಫಟಿಕದಂತೆ ಸ್ವಚ್ಛವಾಗಿದ್ದು ಸರಿಯಾಗಿ ಇಟ್ಟರೆ ವರ್ಷಗಟ್ಟಲೆ ಶುದ್ಧವಾಗಿಯೆ ಇರುವುದು. ಈ ನೀರನ್ನು ೩೦ ವರ್ಷಗಳ ವರೆಗೂ ಇಟ್ಟುಕೊಂಡ ವರಿದ್ದಾರೆ. ಕಾಶಿಯ ಗಂಗಾಜಲದಂತೆ ಈ ನೀರು ಕೂಡ ಅನೇಕಾನೇಕ ದಿನಗಳ ವರೆಗೆ ಸಂಗ್ರಹಿಸಿಟ್ಟರೂ ಕೆಡುವುದಿಲ್ಲ.

ಈ ಕೆರೆಗಳಿರುವ ಬಯಲಿನ ಆವಾರದಲ್ಲಿ ದತ್ತಾತ್ರಯನ ಚಿಕ್ಕ ಗುಡಿಯೊಂದಿದೆ. ಕೆರೆಗಳು ತೀರ ಚಿಕ್ಕವಾಗಿದ್ದರೂ ಎಷ್ಟು ಜನ ಮಿಂದರೂ ನೀರು ಮುಗಿಯುವುದಿಲ್ಲ. ಕೆರೆಗಳು ಎಷ್ಟು ಅಕ ಸ್ಮಾತ್ತಾಗಿ ತುಂಬಿಕೊಳ್ಳುವವೊ ಅಷ್ಟೇ ಅಕ ಸ್ಮಾತ್ತಾಗಿ ಬರಿದಾಗುತ್ತವೆ.

ಈ ಅದ್ಭುತ ವಿಜ್ಞಾನಕ್ಕಿನ್ನೂ ಅಗಮ್ಯವಾ ಗಿಯೆ ಇದೆ. ಆದ್ದರಿಂದ ಸ್ವಾಭಾವಿಕವಾಗಿಯೆ ಇದರ ಬಗ್ಗೆ ಅನೇಕ ದಂತಕಥೆಗಳಿವೆ. ಹೆಚ್ಚು ಪ್ರಚಾರವಾಗಿರುವ ಕಥೆ ಇಂತಿದೆ. ದೈವಭಕ್ತ ನಾದ ಒಕ್ಕಲಿಗನೊಬ್ಬ ಒಮ್ಮೆ ಕಾಳನ್ನು ಒಕ್ಕು ತ್ತಿದ್ದಾಗ ಬಿಸಿಲಿನ ತಾಪದಿಂದ ನೀರಡಿಸಿದ. ಸಮೀಪದಲ್ಲೆಲ್ಲೂ ನೀರಿರಲಿಲ್ಲ. ತನ್ನ ತಾರುಣ್ಯ ದಲ್ಲಿ ಅನೇಕ ಸಲ ಈತ ಯಾತ್ರೆಮಾಡಿ ಗಂಗಾ ಸ್ನಾನ ಮಾಡಿ ಬಂದಿದ್ದನಾದ್ದರಿಂದ ತನ್ನ ಈ ಕಷ್ಟಕಾಲದಲ್ಲಿ ಗಂಗಾಮಾತೆಯನ್ನು ಪ್ರಾರ್ಥಿಸಿ ಕೊಂಡ. ಕರುಣಾಮಯಿಯಾದ ಗಂಗಾದೇವಿ ಒಕ್ಕುವುದಕ್ಕಾಗಿ ಎತ್ತುಗಳನ್ನು ಕಟ್ಟಿದ್ದ ಮೇಟಿ ಯಿಂದ ಹೊರಬಂದಳು. ರೈತ ಮತ್ತು ಅವನ ಎತ್ತುಗಳು ಮನದಣಿಯೆ ನೀರು ಕುಡಿ-ದವು.

ಈ ಕಂಬವೇ ಮುಂದೆ ಒಂದು ಭವ್ಯವಾದ ಆಲದ ಮರವಾಗಿ ಬೆಳೆಯಿತು. ಚಿಕ್ಕ ಕೆರೆಯ ದಂಡೆಯಲ್ಲಿರುವ ಆಲದ ಮರವೇ ಈ ಆಲದ ಮರ ವೆನ್ನುತ್ತಾರೆ. ಈ ಚಿಕ್ಕ ಕೆರೆಯಲ್ಲಿಯೇ ಮೊದ ಲಿಗೆ ನೀರು ಕಾಣಿಸಿಕೊಳ್ಳುವುದರಿಂದ ಈ ಕಥೆ ಯನ್ನು ಭಾವುಕರು ನಂಬುವುದರಲ್ಲಿ ಆಶ್ಚರ್ಯ ವೇನೂ ಇಲ್ಲ.

೧೬೬೧ ರಿಂದಲೇ ಈ ಕುಂಡಗಳಿವೆ ಎಂದು ತಿಳಿಯುತ್ತದೆ. ಛತ್ರಪತಿ ಶಿವಾಜಿ ಇಲ್ಲಿ ಮಿಂದು ಪವಿತ್ರನಾದ ಎನ್ನುತ್ತಾರೆ. ಕಳೆದ ನೂರು ವರ್ಷ ಗಳಲ್ಲಿ ಸುಮಾರು ೨೫ ಸಲ ಕೆರೆಗಳಲ್ಲಿ ನೀರು ಬಂದಿದೆ. ನೀರು ಬರುವುದಕ್ಕೆ ನಿಯಮಿತ ಕಾಲವಿಲ್ಲ. ಒಮ್ಮೆ ಬಂದ ಮರುವರ್ಷವೇ ಬಂದರೂ ಬರುವುದು. ೧೮ ವರ್ಷಗಳ ನಂತರ ಬಂದರೂ ಬರಬಹುದು. ನೀರು ೧೬ ರಿಂದ ೬೦ ದಿನಗಳ ವರೆಗೆ ಇದ್ದ ದಾಖಲೆಗಳಿವೆ. ಜಲವನ್ನು ಅಪವಿತ್ರಗೊಳಿಸಿದರೆ ಅದು ಮಾಯವಾಗುತ್ತ ದೆಂದು ಜನ ಅನ್ನುತ್ತಾರೆ. ಆದ್ದರಿಂದ ಉಳಿ ದೆಲ್ಲ ಕ್ಷೇತ್ರಸ್ಥಳಗಳಿಗಿಂತಲೂ ಈ ಸ್ಥಳ ಹೆಚ್ಚು ಶುಚಿಯಾಗಿದೆ. *

ಜೀವನವು ಮಹತ್ವದ್ದಲ್ಲ; ಜೀವನದಲ್ಲಿ ನಾವು ತೋರಿಸುವ ಧೈರ್ಯ-ಸಾಹಸ ಗಳು ಮಹತ್ವದವು.

—ವಾಲ್‌ಪೋಲ್

*

ಒಳ್ಳೇ ರಾಷ್ಟ್ರ ನಿರ್ಮಿತಿಯಾಗಬೇಕಾದರೆ ಒಳ್ಳೊಳ್ಳೇ ವ್ಯಕ್ತಿಗಳು ನಿರ್ಮಾಣ ವಾಗಬೇಕು.

—ಸರ್ ಎಂ. ವಿಶ್ವೇಶ್ವರಯ್ಯ

*

ಮಾಡಲಿಕ್ಕೆ ಬಂದವರು ಮಾಡುತ್ತಾರೆ. ಮಾಡಲಿಕ್ಕೆ ಬಾರದವರು ಮಾಸ್ತರಿಕೆ ಮಾಡುತ್ತಾರೆ.

—ಬರ್ನಾರ್ಡ್ ಶಾ

ಪ್ರಯೋಗಗಳಿಂದ ಸಿದ್ಧವಾದ ಹೊಸ ಲಕ್ಷಣ ಶಾಸ್ತ್ರ



# ನಿಮ್ಮ ಧ್ವನಿ: ನೀವೆಂಥವರು ಎಂದು ಹೇಳುತ್ತದೆ

ನಿಮ್ಮ ದನಿಯನ್ನು ಕೇಳಿ ನಿಮ್ಮ ವಯಸ್ಸೆಷ್ಟು, ನಿಮ್ಮ ನಿಲುವಿಕೆ ಎತ್ತರವೊ ಗಿಡ್ಡವೊ, ನಿಮ್ಮ ವಿಚಾರ-ಪ್ರವೃತ್ತಿ ಅಂತರ್ಮುಖವಾದದ್ದೊ ಬಹಿರ್ಮುಖವಾದದ್ದೊ—ಇತ್ಯಾದಿ ಎಲ್ಲ ವಿಷಯಗಳನ್ನು ಹೇಳಬಹುದೆಂದು ನಿಮಗೆ ಗೊತ್ತಿದೆಯೆ? ಈಚೆಗೆ ಹಾರ್ವರ್ಡ್ ವಿಶ್ವವಿದ್ಯಾಲಯದ ಮನೋವೈಜ್ಞಾನಿಕ ಪ್ರಯೋಗ ಶಾಲೆಯವರು ಮಾಡಿದ ಪರೀಕ್ಷೆಯಿಂದ ಕೇವಲ ನಿಮ್ಮ ಮಾತುಗಳನ್ನು ಕೇಳಿ ನಿಮ್ಮ ವ್ಯಕ್ತಿತ್ವವನ್ನು ೯೦% ಸರಿಯಾಗಿ ವಿವರಿಸಬಹುದು ಎಂದು ತಿಳಿದು ಬಂದಿದೆ.

ಅಮೇರಿಕೆಯ ಸಂಯುಕ್ತಸಂಸ್ಥಾನಗಳಲ್ಲಿ ಮತ್ತು ಇಂಗ್ಲೆಂಡಿನಲ್ಲಿ ವಿಜ್ಞಾನಿಗಳು ಧ್ವನಿಯನು ಸಾಕಷ್ಟು ಅಭ್ಯಾಸ ಮಾಡಿ ಒಬ್ಬನ ಧ್ವನಿ ಕೇಳಿ ಅವನ ಮಾನಸಿಕ ಹಾಗೂ ಶಾರೀರಿಕ ರಚನೆಗಳನ್ನು ಗುರುತಿಸಬಹುದೆಂದು ಸಿದ್ಧ ಮಾಡಿದಾರೆ. ಈ ಸಿದ್ಧಾಂತದ ಸತ್ಯತೆಯನ್ನು ಕಂಡುಕೊಳ್ಳಲು ವಿಯೆನ್ನಾ ವಿಶ್ವವಿದ್ಯಾಲಯದ ಮನೋವೈಜ್ಞಾನಿಕ ಸಂಸ್ಥೆಯವರು ಒಂದು ಪ್ರಯೋಗವನ್ನು ಮಾಡಿದರು.

ಭಿನ್ನ ವಯಸ್ಸಿನ, ಭಿನ್ನ ಉದ್ಯೋಗದ, ಭಿನ್ನ ಸ್ವಭಾವದ ಒಂಭತ್ತು ಜನರ ಧ್ವನಿಯನ್ನು ರೇಡಿಯೋ ಸ್ಟೇಶನ್ನಿನಿಂದ ಪ್ರಸಾರ ಮಾಡಲಾಯಿತು. ಈ ಪ್ರಸಾರದ ಮೊದಲೇ ರೇಡಿಯೋ ಕೇಳುವವರಿಗೆ ಪ್ರಶ್ನಾವಳಿಯ ಒಂದೊಂದು ಕಾಗದ ಕೊಟ್ಟು, ಆ ಧ್ವನಿಗಳನ್ನು ಕೇಳಿ ಆಯಾ ಧ್ವನಿಯ ವ್ಯಕ್ತಿಯ ವಯೋಮಾನ, ಪ್ರಕೃತಿಮಾನ, ರೂಪ, ಸ್ವಭಾವ, ಉದ್ಯೋಗ ಇತ್ಯಾದಿಗಳನ್ನು ತಮಗೆ ತೋಚಿದಂತೆ ಪ್ರಶ್ನಾವಳಿಯಲ್ಲಿ ಬರೆಯಬೇಕೆಂದು ಹೇಳಲಾಗಿತ್ತು. ಈ ರೀತಿ ರೇಡಿಯೋ ಕೇಳುವವರಿಂದ ತುಂಬಲ್ಪಟ್ಟ ಪ್ರಶ್ನಾವಳಿಯ ಫಾರ್ಮುಗಳನ್ನು ವಿಶ್ವವಿದ್ಯಾಲಯ ತರಿಸಿಕೊಂಡಿತು.

ಪ್ರಸಾರವಾದ ಧ್ವನಿಯ ಜನರಲ್ಲಿ ಒಬ್ಬಳು ಸ್ಟೆನೋಗ್ರಾಫರಳಾಗಿದ್ದಳು. ಅವಳ ವಯಸ್ಸು ೨೭; ಎರಡನೇ ವ್ಯಕ್ತಿ ಕಾಲೇಜ್ ಪ್ರೊಫೆಸರ್, ವಯಸ್ಸು ೪೮; ಮೂರನೆಯವ ಹೋಟೆಲ್ ಮಾಲಕ, ವಯಸ್ಸು ೫೩; ನಾಲ್ಕನೆಯಾತ ಪಾದ್ರಿ, ವಯಸ್ಸು ೫೮; ಐದನೇ ವ್ಯಕ್ತಿ ಒಬ್ಬ ಮಾಧ್ಯಮಿಕ ಶಾಲಾ-ಶಿಕ್ಷಕ, ವಯಸ್ಸು ೩೯;

ಆರನೆಯವಳು ಒಬ್ಬ ಮಹಿಳೆ, ಗಣಿತಜ್ಞಳು, ವಯಸ್ಸು ೪೬; ಏಳನೇ ವ್ಯಕ್ತಿ ಒಬ್ಬ ಟ್ಯಾಕ್ಸಿ ಡ್ರೈವರ್, ವಯಸ್ಸು ೩೦; ಎಂಟನೇ ಒಂಬತ್ತನೆಯವರು ಒಬ್ಬ ೧೨ ವರ್ಷದ ಹುಡುಗ ಮತ್ತು ೧೪ ವರ್ಷದ ಹುಡುಗಿ.

ಒಟ್ಟಿಗೆ ೨೭೦೦ ಜನರು ತಮ್ಮ ಊಹೆಗಳನ್ನು ಫಾರ್ಮುಗಳಲ್ಲಿ ಬರೆದು ಕಳಿಸಿದ್ದರು. ಈ ಫಾರ್ಮುಗಳನ್ನು ಪರೀಕ್ಷಿಸಿದಾಗ ಬಹಳಷ್ಟು ಉತ್ತರಗಳು ತಕ್ಕಮಟ್ಟಿಗೆ ಸರಿಯಾಗಿರುವುದು ಕಂಡುಬಂತು.

೨೭ ವರ್ಷದ ಸ್ಟೆನೋಗ್ರಾಫರಳ ವಯಸ್ಸನ್ನು ಬಹಳ ಜನರು ೨೬ ಎಂದು ಬರೆದಿದ್ದರು. ೩೯ ವರ್ಷದ ಶಿಕ್ಷಕನ ವಯಸ್ಸನ್ನು ೩೮ ಎಂದು ಬರೆದಿದ್ದರು. ಹುಡುಗನ ವಯಸ್ಸು ಬರೆಯುವಾಗ ಮಾತ್ರ ಅನೇಕರು ೨ ವರ್ಷ ಹೆಚ್ಚು ಹೇಳಿದ್ದರು.

೪೫ ರ ಮುಂದಿನವರ ವಯಸ್ಸು ಅಷ್ಟೊಂದು ಸರಿಯಾಗಿ ಊಹಿಸಲ್ಪಡಲಿಲ್ಲ. ಇದರಿಂದ ಪರೀಕ್ಷರು ಮಧ್ಯವಯಸ್ಸಿನ ವರೆಗೆ ಅವನ ಅಥವಾ ಅವಳ ವಯಸ್ಸನ್ನು ಧ್ವನಿ ಕೇಳಿ ಊಹಿಸಬಹುದು. ಇಳಿ ವಯಸ್ಸಾಗುತ್ತ ಹೋದಂತೆಲ್ಲ ಧ್ವನಿಯಿಂದ ಅಷ್ಟು ಸ್ಪಷ್ಟವಾಗಿ ವಯೋಮಾನವನ್ನು ಹೇಳಲಿಕ್ಕಾಗದು. ಯಾಕೆಂದರೆ ಮುಪ್ಪಾದಂತೆ ವ್ಯಕ್ತಿಗಳ ಧ್ವನಿಯಲ್ಲಿ ಸ್ಪಷ್ಟ ಬದಲಾವಣೆಯಾಗುವುದಿಲ್ಲವೆಂದು ವಿಜ್ಞಾನಿಗಳು ನಿರ್ಣಯಿಸಿದರು.

ಸ್ವಭಾವ ಮತ್ತು ಶರೀರರಚನೆ ಬಗ್ಗೆ ನೀಡಲಾದ ಅನುಮಾನಗಳು ಬಹುಮಟ್ಟಿಗೆ ಸರಿಯಾಗಿದ್ದವೆಂದು ಮನೋವಿಜ್ಞಾನಿಗಳು ಕಂಡುಕೊಂಡರು. ಟ್ಯಾಕ್ಸಿ ಡ್ರೈವರ್ ಮತ್ತು ಕೊನೆಯ ಎರಡು ಹುಡುಗರ ಬಗ್ಗೆ ಕೊಟ್ಟ ಅನುಮಾನಗಳು ಮಾತ್ರ ಸ್ವಲ್ಪ ತಪ್ಪಿದ್ದವು ಅಷ್ಟೇ.

ರೇಡಿಯೋನಲ್ಲಿ ಯಾರೊಬ್ಬರು ಮಾತಾಡಿದ್ದನ್ನು ಕೇಳಿ ಅವರ ಉದ್ಯೋಗ ಇಂಥದೇ ಇರಬೇಕೆಂದು ನಿರ್ಣಯಿಸುವುದು ಆಶ್ಚರ್ಯವೇ ಅಲ್ಲವೆ? ಸುಮಾರು ಅರ್ಧ ಜನರು ಪ್ರೊಫೆಸರನ ಬಗ್ಗೆ 'ವಾರ್ಷಿಕ ಪ್ರಮಾಣದ ಮೇಲೆ ದುಡಿಯುವ ವ್ಯಕ್ತಿ' ಎಂದು ಅನುಮಾನ ಮಾಡಿದ್ದರು.

ನೂರಕ್ಕೆ ಸುಮಾರು ೨೭ ರಿಂದ ೩೫ ರ ವರೆಗೆ ಜನರು ಗಣಿತಜ್ಞಳನ್ನು, ಹೋಟೆಲ್ ಮಾಲಿಕನನ್ನು, ಪಾದ್ರಿಯನ್ನು, ಶಾಲಾ ಶಿಕ್ಷಕನನ್ನು ಸರಿಯಾಗಿ ಊಹಿಸಿದ್ದರು. ಟ್ಯಾಕ್ಸಿ ಡ್ರೈವರನ ಉದ್ಯೋಗವನ್ನು ೨,೭೦೦ ಜನರಲ್ಲಿ ೨,೦೦೦ ಜನರು ಸರಿಯಾಗಿ ಗುರುತಿಸಿದ್ದರು. ಆದರೆ ಸ್ಟೆನೋಗ್ರಾಫರಳೊಬ್ಬಳ ವಿಷಯದಲ್ಲಿ ಮಾತ್ರ ೯೩ % ಜನರ ತರ್ಕ ತಪ್ಪಾಗಿತ್ತು. ಆದರೆ ಅವಳ ಸ್ವಭಾವ ಮತ್ತು ಶರೀರ ಸೌಷ್ಠವದ ಬಗ್ಗೆ ಚಾಚೂ ತಪ್ಪದಂತೆ ನಿರ್ಣಯಿಸಿದ್ದರು. ವಯಸ್ಸಿನಲ್ಲಿ ಒಂದೇ ವರ್ಷದ ಅಂತರ ಉಳಿಸಿದ್ದರು ಅಷ್ಟೇ!

ಈ ಪ್ರಯೋಗದಲ್ಲಿ ಭಾಗ ವಹಿಸಿದ ರೇಡಿಯೋ ಕೇಳುವ ಜನರಲ್ಲಿ ಸಾಕಷ್ಟು ಜನರು ಪೂರ್ಣ ಕುರುಡರಾಗಿದ್ದರು ಮತ್ತು ಸರಿಯಾದ ಉತ್ತರಗಳನ್ನು ಕಳಿಸಿದವರಲ್ಲಿ ಬಹುಶಃ ಕುರುಡರೇ ಹೆಚ್ಚಾಗಿದ್ದರು.

ಇದಕ್ಕೆ ಕಾರಣ ಅವರಿಗೆ ಕಣ್ಣಿಲ್ಲದಿರುವುದೇ. ಕಣ್ಣಿಲ್ಲದ್ದರಿಂದ ಕಿವಿ ಮೊದಲಾದ ಉಳಿದ ಜ್ಞಾನೇಂದ್ರಿಯಗಳು ಅವರಲ್ಲಿ ಹೆಚ್ಚು ಚುರುಕಾಗಿರುತ್ತವೆ.

ಹಾರವರ್ಡ್ ವಿಶ್ವವಿದ್ಯಾಲಯದ ವಿಜ್ಞಾನಿಗಳು 'ಧ್ವನಿಯಿಂದ ಮನುಷ್ಯನ ಗುಣ-ರೂಪಗಳನ್ನು ಪರಿಕ್ಷಿಸುವ' ಇನ್ನೊಂದು ಪ್ರಯೋಗ ಮಾಡಿದ್ದರು. ಅದು ಬಹಳ ಮಾರ್ಮಿಕವಾಗಿತ್ತು. 'ಧ್ವನಿಯನ್ನು ಗುರುತಿಸುವವರಿಗೆ' ಅಲ್ಲಿ ಮಾತಾಡುವ ಮನುಷ್ಯನ ಮನಃಸ್ಥಿತಿ ಉಲ್ಲಾಸದಲ್ಲಿದೆಯೋ ಖಿನ್ನವಾಗಿದೆಯೊ, ಉದ್ವಾಮವಾಗಿದೆಯೋ ಅಥವಾ ಷೋಕೀ ಆಗಿದೆಯೋ ಎಂದೂ ಕೇಳಲಾಗಿತ್ತು. ೯೧% ಉತ್ತರಗಳು ಸರಿಯಾಗಿದ್ದವು.

ಡೀ ಪಾ ವಿಶ್ವವಿದ್ಯಾಲಯದವರೂ ಒಂದು

ಪ್ರಯೋಗವನ್ನು ಮಾಡಿದರು. ಭಾಷಣದ ಮಾದರಿಯಲ್ಲಿ ಕೆಲವರ ಧ್ವನಿಯನ್ನು ಪ್ರಸಾರ ಗೊಳಿಸಲಾಗಿತ್ತು. ಮತ್ತು ವಿದ್ಯಾರ್ಥಿಗಳಿಗೆ ಅವರ ಶರೀರ ರಚನೆಯ ಬಗ್ಗೆ ಕೇಳಲಾಗಿತ್ತು. ಆಗ ಧ್ವನಿಯಿಂದ ಮನುಷ್ಯನ ಎತ್ತರ, ಅಗಲ-ಮೊದಲಾದ ಶಾರೀರಿಕ ವೈಷಮ್ಯಗಳನ್ನು ನಿರ್ಣಯಿಸುವುದು ಸುಲಭವೆಂದು ಕಂಡುಬಂತು.

ಪ್ರಮಾಣಬದ್ಧವಾಗಿ ಬೆಳೆದ ಶರೀರದವರನ್ನು ಧ್ವನಿಯಿಂದ ಹಾಗೆಂದು ಗುರುತಿಸುವುದು ಮಾತ್ರ ಅಸಾಧ್ಯವೆನಿಸಿತು.

ಎತ್ತರ ನಿಲುವಿಕೆಯುಳ್ಳವ ಬಡಕಲಾಗಿದ್ದರೆ ಅವರ ಸ್ವರ ಗಿಡ್ಡ ದಪ್ಪ ಮನುಷ್ಯನ ಸ್ವರಕ್ಕಿಂತ ತೀರ ಭಿನ್ನವಾಗಿದ್ದು ಈ ಭಿನ್ನತೆ ಒಮ್ಮೆಲೆ ಒಡೆದು ಕಾಣುವಷ್ಟು ಸ್ಪಷ್ಟವಾಗಿರುತ್ತದೆ. ಪ್ರಮಾಣಬದ್ಧ ಶರೀರದವರ ಸ್ವರ ಮೇಲಿನ ಇಬ್ಬರಿಗಿಂತಲೂ ಭಿನ್ನವಾಗಿರುತ್ತದೆಂದೂ ಡೀ ಪಾ ಪ್ರಯೋಗದಲ್ಲಿ ಸ್ಥಿರವಾಯಿತು.

ನಮ್ಮ ಮಾತಿನಲ್ಲಿ ನಮ್ಮ ಮನಸ್ಸು ಎಷ್ಟೊಂದು ವ್ಯಕ್ತವಾಗಿರುತ್ತದೆ ಎಂಬದನ್ನು ಶಾಸ್ತ್ರೀಯವಾಗಿ ನಿರ್ಣಯಿಸುವುದು ಇನ್ನೂ ಸಾಧ್ಯವಾಗಿಲ್ಲ. ಆದರೆ ಈ ಪ್ರಯೋಗಗಳಿಂದ, ಮಾತಾಡುವ ವ್ಯಕ್ತಿಯ ಮಾತು ಸತ್ಯವಾಗಿದೆಯೊ ಸುಳ್ಳಾಗಿದೆಯೊ ಎಂಬದನ್ನು ಅವನ ಮಾತಿನ ಧ್ವನಿಯಿಂದ ಕಂಡುಕೊಳ್ಳಬಹುದೆಂಬುದು ಸಿದ್ಧವಾಗಿದೆ.

ಡೀ ಪಾ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೆ ಮರೆಯಲ್ಲಿ ನಿಂತು ಮಾತಾಡಿದವರ ಮಾತು ನಿಜವೊ ಸುಳ್ಳೋ ಎಂಬುದನ್ನು ಬರೆಯಲು ಹೇಳಲಾಗಿತ್ತು. ಮರೆಯಲ್ಲಿ ನಿಂತವರು 'ನಾನು ಹಸಿರು ಟೈ ಕಟ್ಟಿದ್ದೇನೆ' ಅಥವಾ 'ನನ್ನ ಹೆಸರು ಫ್ರೆಡ್' ಅಥವಾ 'ನಾನು ಹ್ಯಾಮ್ (ಹಂದಿಯ ಮಾಂಸದ ಅಡಿಗೆ) ಮತ್ತು ತತ್ತಿಗಳನ್ನು ಮುಂಜಾನೆ ತಿಂದೆನು' ಇತ್ಯಾದಿಯಾಗಿ ಹೇಳುತ್ತಿದ್ದರು. ಸತ್ಯ ಅಥವಾ ಸುಳ್ಳು ಎಂದು ಬರೆದ ಬಹುತರ ಊಹೆಗಳು ಸರಿಯಾಗಿದ್ದವು.

ಪುರುಷರಿಗಿಂತ ಸ್ತ್ರೀಯರೇ ಹೆಚ್ಚು ಸರಿಯಾಗಿ ಉತ್ತರಿಸಿದ್ದು ಇಲ್ಲಿ ಕಂಡುಬಂದಿತು. ಈ ಪ್ರಯೋಗದಲ್ಲಿ ಗೊತ್ತಾದ ಇನ್ನೊಂದು ಸಂಗತಿ ಎಂದರೆ, ಸ್ತ್ರೀಯು ಸುಳ್ಳು ಹೇಳಿದರೆ ಅವಳ ಧ್ವನಿ ಸುಳ್ಳು ಹೇಳುವ ಪುರುಷನ ಧ್ವನಿಯಷ್ಟು ಬದಲಾಗುವುದಿಲ್ಲ ಎಂಬುದು.

ಮನೋವಿಶ್ಲೇಷಣೆಯಿಂದಲೇ ತಿಳಕೊಳ್ಳಬಹುದಾದ ಹಲವಾರು ಸಂಗತಿಗಳನ್ನು ಎಷ್ಟೋ ಸಲ ಧ್ವನಿಯಿಂದಲೇ ಗುರುತಿಸಬಹುದು ಎಂದು ಮನೋವಿಜ್ಞಾನಿಗಳ ಅಭಿಪ್ರಾಯವಾಗಿದೆ. ಉದಾಹರಣಾರ್ಥವಾಗಿ ಓಹಿಯೋದ ಕೆಂಟ್-ಸ್ಟೇಟ್ ಕಾಲೇಜಿನವರು ಕರ್ಕಶ ಕಂಠದವರು ಬಹುಶಃ ನರಗಳ ಬೇನೆಯಿಂದ ಬಳಲುವವರಾಗಿರುವ ಸಂಭವವಿದೆ ಎಂದು ಕಂಡುಹಿಡಿದಿದ್ದಾರೆ.

ಕೇಳಲು ಹಿತವಾದ ಕಂಠವಿರುವ ನೂರಾರು ಸ್ತ್ರೀ-ಪುರುಷರನ್ನು ಪರೀಕ್ಷಿಸಿ ಅಂಥವರು ಹೊಂದಿಕೊಳ್ಳುವ ಸ್ವಭಾವದವರಾಗಿರುತ್ತಾರೆ ಎಂದು ಸಿದ್ಧ ಮಾಡಿದ್ದಾರೆ. ಕರ್ಕಶ ಸ್ವರದವರು ಸಾಧಾರಣವಾಗಿ ಮೂರು ಬಗೆಯ ಪ್ರಕೃತಿಯವರಾಗಿರುತ್ತಾರೆಂದು ಕಂಡಿದೆ. ೧) ಪಿಸುಮಾತಿನವರು ೨) ಮೂಗಿನಿಂದ ಮಾತಾಡುವವರು ಮತ್ತು ೩) ಕಂಚಿನಂತೆ ಕರ್ಕಶಧ್ವನಿ ಇರುವವರು. ಮೂಗಿನಿಂದ ಮಾತಾಡುವವರು ಸಹಸಾ ಅಸ್ಥಿರ ಮನಸ್ಸಿನವರಿರುತ್ತಾರೆಂದು ಕಂಡುಬಂದಿದೆ.

ಧ್ವನಿಯಿಂದಲೇ ಮನುಷ್ಯನ ಸ್ವಭಾವ ಮತ್ತು ಮನೋವೃತ್ತಿಗಳನ್ನು ಗುರುತಿಸುವುದು ಪ್ರವೀಣರಿಗೆ ಎಷ್ಟು ಉಪಯುಕ್ತವಾಗಬಹುದೊ ಅಷ್ಟೇ ಸಾಮಾನ್ಯರಿಗೂ ಅವರ ಸುತ್ತಿನವರ ಸ್ವಭಾವವನ್ನು ಅರಿಯಲು ಉಪಯುಕ್ತವಾಗುವುದು. ★



# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿ ಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.

೧. ಮುಖರಿತ

(ಅ) ಮೋರೆಯ ಚರ್ಮ (ಆ) ಸುಲಕ್ಷಣ (ಇ) ನುಂಗಿದ (ಈ) ಶಬ್ದ ಮಾಡುವ

೨. ಉಪೇತ

(ಅ) ಒಡಗೂಡಿದ (ಆ) ಶೂನ್ಯ (ಇ) ತಿರಸ್ಕರಿಸಿದ (ಈ) ಶತ್ರು

೩. ಅಪೇತ

(ಅ) ಬಯಸಿದ್ದು (ಆ) ಹೊರಟುಹೋದ (ಇ) ಸೇರಿದ (ಈ) ಅಪಕಾರಿ

೪. ಅಧ್ಯಾಹಾರ

(ಅ) ಹೊಟ್ಟೆತುಂಬ ಊಟ (ಆ) ಕಳವು (ಇ) ಮಾಲೆ (ಈ) ಒದಗಿಸುವುದು

೫. ಇಮರು

(ಅ) ಹಿಡಿ (ಆ) ಆವಿಯಾಗು (ಇ) ಆಕ್ರಮಿಸು (ಈ) ಕಹಿ

೬. ತಂದ್ರಿ

(ಅ) ಆಯಾಸ (ಆ) ತಂತಿ (ಇ) ವಾದ್ಯ (ಈ) ಕುಯುಕ್ತಿ

೭. ಸಾಧರ್ಮ್ಯ

(ಅ) ತನ್ನ ಮತ (ಆ) ಸಹಾಯ (ಇ) ಪಳಗಿಸುವಿಕೆ (ಈ) ಅದೇ ಗುಣವಿರುವಿಕೆ

೮. ಅಭ್ಯರ್ಥಿ

(ಅ) ತುಂಬಾ ಸಂತೋಷ (ಆ) ಹಣಗಾರ (ಇ) ಬೇಡಿಕೊಳ್ಳುವವ (ಈ) ವಿರೋಧಿ

೯. ವಿಸ್ರಸ್ತ

(ಅ) ಜಾರಿದ (ಆ) ಸೋರಿದ (ಇ) ಮೀರಿದ (ಈ) ಕಾಡಿದ

೧೦. ವಿಡಂಬನೆ

(ಅ) ಅಹಂಕಾರ (ಆ) ತೊಡಕು (ಇ) ಅಣಕ (ಈ) ವ್ಯಭಿಚಾರ

೧೧. ಪರಿವ್ರಾಜಕ

(ಅ) ರತ್ನವ್ಯಾಪಾರಿ (ಆ) ಸಂನ್ಯಾಸಿ (ಇ) ಚಕ್ರವರ್ತಿ (ಈ) ಆಡಳಿತಪಟು

೧೨. ದಂದುಗ

(ಅ) ಪೆಟ್ಟಿಗೆ (ಆ) ಕಾಲ್ಬಳೆ (ಇ) ತೊಡಕು (ಈ) ಪಲ್ಲಕಿ



# 'ಶಬ್ದಭಾಂಡಾರ'ದ ಸರಿಯಾದ ಅರ್ಥಗಳು

೧. **ಮುಖರಿತ** (ಈ) ಶಬ್ದಮಾಡುವ, ಸಶಬ್ದ, ಬಾರಿಸಲ್ಪಡುವ. ಉದಾ— ಗಂಟೆ, ವಾದ್ಯ, ನಗಾರಿಗಳಿಂದ ವಾತಾವರಣ ಮುಖರಿತವಾಗಿತ್ತು. [ಸಂ]

೨. **ಉಪೇತ** (ಅ) ಒಡಗೂಡಿದ, ಹೊಂದಿದ; ಸಮೀಪಿಸಿದ. ಉದಾ— ಸಕಲ ಗುಣೋಪೇತನಾದ ವ್ಯಕ್ತಿ. [ಸಂ ಉಪ = ಹತ್ತಿರ, ಇತ = ಹೋದ]

೩. **ಅಪೇತ** (ಆ) ಹೊರಟುಹೋದ, ಬಿಟ್ಟು ಹೋದ; ಮುಕ್ತ; ವಿಹೀನ. ಉದಾ— ದುಃಖದಿಂದ ಅಪೇತವಾದ ಜೀವನ ಯಾರಿಗೂ ಲಭ್ಯವಲ್ಲ. [ಸಂ. ಅಪ = ದೂರ, ಇತ = ಹೋದ]

೪. **ಅಧ್ಯಾಹಾರ** (ಈ) ಬಿಟ್ಟದ್ದನ್ನು ಒದಗಿಸುವುದು, ಪೂರೈಸುವುದು; ಊಹಿಸಿಕೊಳ್ಳುವುದು. ಉದಾ— ಅನೇಕ ಶಬ್ದಗಳನ್ನು ಅಧ್ಯಾಹಾರ ಮಾಡಿಕೊಂಡರೆ ಮಾತ್ರ ಈ ವಾಕ್ಯದ ಅರ್ಥವಾದೀತು. [ಸಂ. ಅಧಿ = ಮೇಲೆ, ಆ+ಹಾರ = ತರುವಿಕೆ]

೫. **ಇಮುರು** (ಆ) ಕುದಿದು ಆವಿಯಾಗು, ಒಣಗು, ಇಂಗು; ಮಾಯು; ಕ್ಷೀಣವಾಗು. [ಕನ್ನಡ]

೬. **ತಂದ್ರಿ** (ಅ) ಆಯಾಸ; ಮೈಗಳ್ಳತನ; ತೂಕಡಿಸುವಿಕೆ, ಸರಿಯಾಗಿ ಎಚ್ಚರವಿಲ್ಲದಿರುವುದು. [ಸಂ.]

೭. **ಸಾಧರ್ಮ್ಯ** (ಈ) ಅದೇ ಗುಣವಿರುವಿಕೆ, ಅದೇ ಧರ್ಮವಿರುವಿಕೆ. ಉದಾ— ಅವನಿಗೂ ಅವಳಿಗೂ ಅನೇಕ ಸಾಧರ್ಮ್ಯಗಳಿವೆ ಅಂದರೆ ಇಬ್ಬರಲ್ಲಿಯೂ ಸಮಾನ ಗುಣ ಸ್ವಭಾವಗಳಿವೆ. [ಸಂ. ಸಧರ್ಮ = ಸಮಾನಗುಣ ಎಂಬುದರಿಂದ]

೮. **ಅಭ್ಯರ್ಥಿ** (ಇ) ಬೇಡಿಕೊಳ್ಳುವವ, ಕೇಳಿಕೊಳ್ಳುವವ, ಅರ್ಜಿದಾರ, ಬಯಸುವವ. [ಸಂ.]

೯. **ವಿಸ್ರಸ್ತ** (ಅ) ಜಾರಿದ, ಉದುರಿದ, ಕೆಳಗೆ ಬಿದ್ದ; ದುರ್ಬಲ, ನಿತ್ರಾಣ. ಉದಾ— ಅವಳ ವಿಸ್ರಸ್ತವಾದ ವಸ್ತ್ರಗಳನ್ನು ನೋಡಿ. [ಸಂ. ವಿ = ವಿಶೇಷವಾಗಿ ಸ್ರಸ್ತ = ಬಿದ್ದ]

೧೦. **ವಿಡಂಬನೆ** (ಇ) ಅಣಕ, ಸೋಗು ಮಾಡುವುದು, ನಕಲಿ; ಗೇಲಿ ಮಾಡುವುದು; ಮೋಸ. ಉದಾ— ಇದೊಂದು ವಿಧಿಯ ವಿಡಂಬನೆ ಅಂದರೆ ಅದೃಷ್ಟದ ಗೇಲಿ. [ಸಂ.]

೧೧. **ಪರಿವ್ರಾಜಕ** (ಆ) ಸಂನ್ಯಾಸಿ, ಬೈರಾಗಿ; ಒಂದೇ ಕಡೆ ನಿಲ್ಲದೆ ಯಾವಾಗಲೂ ಸಂಚರಿಸುತ್ತಿರುವವ. [ಸಂ. ಪರಿ = ಸುತ್ತಲೂ, ವ್ರಜ = ತೆರಳು ಎಂಬುದರಿಂದ.]

೧೨. **ದಂದುಗ** (ಇ) ತೊಡಕು, ಗಲಿಬಿಲಿ; ತೊಂದರೆ, ಉಪದ್ರವ, ಪೀಡೆ. [ಕನ್ನಡ]

---

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

೬—೮ ಸರಿಯಿದ್ದರೆ .... ಸಾಧಾರಣ

೯—೧೦ " .... ಉತ್ತಮ

೧೧—೧೨ " .... ಅತ್ಯುತ್ತಮ

ನಿಮ್ಮ ಕಣ್ಣಿಂದ ಅನ್ಯರು
ನೋಡಬಹುದು !

# ಕಣ್ಣಿನ ಬ್ಯಾಂಕುಗಳು

ಡೇವಿಡ್ ಗುನ್‌ಸ್ಪನ್

ಇನ್ನೊಬ್ಬರ ದೃಷ್ಟಿಯಿಂದ ನೋಡು ಎಂಬ ಮಾತು ಇಂದು ಬರಿ ಅಲಂಕಾರ ವಾಗಿರದೆ ಅಕ್ಷರಶಃ ವಾಸ್ತವವಾಗಿದೆ. ಇನ್ನೊಬ್ಬರ ಕಣ್ಣಿನ ಒಂದಂಶವನು ತನ್ನ ಕಣ್ಣಿಗೆ " ಕಸಿ" ಮಾಡಿಸಿಕೊಂಡು ಇಂದು ಕುರುಡನು ಕಣ್ಣು ಪಡೆಯ ಬಹುದಾಗಿದೆ.

ಒಂದೂವರೆ ಶತಮಾನದ ವೈದ್ಯಕೀಯತಪಸ್ಯೆ ಬಲುಗಾಲದ ಒಂದು ಕನ್ನ ಸನ್ನ ನನಸು ಮಾಡಿದೆ. ಸಂಗಡಲೇ ಪ್ರತಿಯೊಬ್ಬನಿಗೂ ಅದಿಂದು ಇತಿಹಾಸ. ದಲ್ಲಿ ಎಂದೆಂದೂ ಇದ್ದಿಲ್ಲದ ಪರೋಪಕಾರದ ಅವಕಾಶವೊದಗಿಸಿಕೊಟ್ಟಿದೆ ನಾವು ಇಹಲೋಕ ತ್ಯಾಗ ಮಾಡುವಾಗ ನಮ್ಮ ಕಣ್ಣನ್ನು ಇನ್ನೊಬ್ಬರಿಗೆ ದಾನ ಮಾಡಿ ಅವರ ಕುರುಡುತನವನ್ನು ನಿವಾರಿಸಿ ಪುಣ್ಯ ಸಂಪಾದಿಸಬಹು ದಾಗಿದೆ.

ದೃಕ್‌ಪಟಲದ ಕಸಿ ಎಂದು ಈ ಶಸ್ತ್ರಕ್ರಿಯೆಗೆ ಹೆಸರು. ದೃಕ್‌ಪಟಲವೆಂದರೆ ನಿಮ್ಮ ಕಣ್ಣುಗುಡ್ಡೆಯ ಮೇಲಿರುವ ಪಾರದರ್ಶಕ ಪರೆ. ಅದರ ಮೂಲಕ ಹೊರಗಿನ ಪ್ರಕಾಶ ಒಳ ಸೇರುವುದರಿಂದಲೇ ನಮಗೆ ಕಣ್ಣು ಕಾಣಿಸುತ್ತದೆ. ಆದರೆ ಅದರ ಮೇಲೆ ಪರೆ ಮೂಡಿಯೋ ಅಥವಾ ಗಾಯವಾಗಿಯೋ ಇದ್ದರೆ ದೃಷ್ಟಿ ಮಂದವಾಗುತ್ತದೆ ಇಲ್ಲವೆ ಪೂರ್ತಿ ಕುರುಡಾಗುತ್ತದೆ.

ನಮ್ಮ ಶರೀರವು ಬೇರೆ ಶರೀರಗಳಿಂದ ಯಾವ ಅಂಶವನ್ನು ಕಸಿ ಮಾಡಿದರೂ ಅದನ್ನು ತೆಗೆದುಕೊಳ್ಳುವುದಿಲ್ಲ. ಪ್ಲಾಸ್ಟಿಕ್ ಸರ್ಜರಿಯಲ್ಲಿ ಕೂಡ ಒಂದು ಕಡೆಯ ಚರ್ಮವನ್ನು ಬೇರೆ ಕಡೆಗೆ ಹಚ್ಚಬೇಕಾದರೆ ನಂನಮ್ಮ ಸ್ವಂತಚರ್ಮವನ್ನೆ ತೆಗೆದುಕೊಳ್ಳಬೇಕಲ್ಲದೆ ಪರರ ತೊಗಲು ನಡೆಯುವುದಿಲ್ಲ. ಆದರೆ ಸುದೈವದಿಂದ ದೃಷ್ಟಿ ಪಟಲವೊಂದು ಮಾತ್ರ ಇದಕ್ಕೆ ಅಪವಾದ ವಾಗಿದೆ. ಒಬ್ಬ ಮನುಷ ನ ದೃಷ್ಟಿಪಟಲವನ್ನು ಇನ್ನೊಬ್ಬನ ಕಣ್ಣಿಗೆ ಸರಿಯಾಗಿ ಕಸಿ ಮಾಡಿದರೆ ಅದು ಬೆಳೆದು ಸುತ್ತಲ ಭಾಗಗಳೊಡನೆ ಕೂಡಿ

ಕೊಂಡು ಬೆಳೆದು ರೋಗಿಗೆ ಪುನಃ ಕಣ್ಣು ಕೊಡುತ್ತದೆ. ಈ ಶಸ್ತ್ರಕ್ರಿಯೆ ಸೇಕಡಾ ೬೦ ರಿಂದ ೯೦ ರಷ್ಟು ಜನರಲ್ಲಿ ಯಶಸ್ವಿಯಾಗಿದೆ; ಕೆಲವರಲ್ಲಿ ಮೊದಲೇ ಆದ ರೋಗ ಅಥವಾ ಅಪಘಾತದಿಂದ ಕಣ್ಣಿನ ಇತರ ಭಾಗಗಳಿಗೆ ಧಕ್ಕೆಯಾಗಿದ್ದರೆ ಪೂರ್ತಿ ದೃಷ್ಟಿ ಮರಳದಿದ್ದರೂ ಪರರ ಸಹಾಯವಿಲ್ಲದೆ ಓಡಾಡಲು ಸಾಧ್ಯವಾಗುವಷ್ಟಂತೂ ಸುಧಾರಣೆಯಾಗುತ್ತದೆ.

ಇದಕ್ಕಿರುವ ಒಂದೇ ಒಂದು ಅನಿವಾರ್ಯ ಕರಾರೆಂದರೆ, "ದಾನ ಬಂದ" ದೃಕ್‌ಪಟಲ ಸರಿಯಾಗಿರಬೇಕು; "ದಾನಿ" ಸತ್ತು ಕೆಲ ತಾಸುಗಳೊಳಗೆ ಅದನ್ನು ತೆಗೆದು ಶೀತಕಪಾಟದಲ್ಲಿ ಕಾಪಾಡಿ ಆದಷ್ಟು ಬೇಗನೆ ರೋಗಿಯ ದೃಷ್ಟಿಗೆ ಅದನ್ನು ಕಸಿ ಮಾಡಬೇಕು.

ಒಬ್ಬರ ಕಣ್ಣಿನ ಪಟಲವನ್ನು ಕತ್ತರಿಸಿ ಇನ್ನೊಬ್ಬರ ಕೆಟ್ಟುಹೋದ ಪಟಲದ ಸ್ಥಾನದಲ್ಲಿ ಕಸಿ ಮಾಡಬಾರದೇಕೆ ಎಂಬ ಪ್ರಶ್ನೆಯನ್ನು ಮೊದಲು ಪ್ರಸ್ತಾಪಿಸಿದವನು ಬ್ರಿಟಿಶ್ ವಿಜ್ಞಾನಿ ಇರಾಸ್ಮಸ್ ಡಾರ್ವಿನ್. ೧೭೯೪-೯೬ ರಲ್ಲಿ ಅವನು ತನ್ನ ಸೂಚನೆಯನ್ನು ಮಂಡಿಸಿದ ಬಳಿಕ ಬಹಳ ಕಾಲ ಮೊಲ, ನಾಯಿ, ಕುರಿ, ಹಂದಿ ಮತ್ತು ಒಮ್ಮೊಮ್ಮೆ ಜಿಂಕೆಯ ಕಣ್ಣಿನ ಪಟಲಗಳನ್ನು ಮಾನವನ ದೃಷ್ಟಿಗೆ ಕಸಿ ಮಾಡುವ ವಿಫಲ ಪ್ರಯತ್ನಗಳಾದವು. ದೃಕ್‌ಪಟಲದ ಕಸಿಯನ್ನು ಮೊಟ್ಟಮೊದಲು ಫ್ರಾನ್ಸ್‌ನ ರೇಸ್ನರನೆಂಬ ಸರ್ಜನ್ ೧೮೧೮ ರಲ್ಲಿ ಸಾಧಿಸಿದನು. ೧೮೩೭ ರಲ್ಲಿ ಬಿಗ್ಗರನು ದೃಕ್‌ಪಟಲ ಕಸಿಯಿಂದ ಕುರುಡನೊಬ್ಬನಿಗೆ ಮೊಟ್ಟಮೊದಲು ಕಣ್ಣು ತಂದುಕೊಟ್ಟನು.

ಆದರೆ ಡಾಕ್ಟರರ ಹೀಯಾಳಿಕೆ, ಜನರ ಪೂರ್ವಾಗ್ರಹ, ಸರಿಯಾದ ಉಪಕರಣಗಳ ಅಭಾವ ಮತ್ತು ಯೋಗ್ಯ ನಂಜುನಿರೋಧಕ ಔಷಧದ ಕೊರತೆಯಿಂದ ಅರ್ಧ ಶತಮಾನ ಕಾಲ ಈ ಪ್ರಯೋಗ ದುಸ್ಸಾಹಸಿಗಳ ಹುಚ್ಚಾಟವೆಂಬುದಾಗಿಯೇ ಪರಿಗಣಿಸಲ್ಪಟ್ಟಿತ್ತು. ಇದರ ಸಾಧ್ಯತೆಯನ್ನು ಸಂಶಯಕ್ಕೆಡೆಯಿಲ್ಲದಂತೆ ತೋರಿಸಿಕೊಡುವ ಪುಣ್ಯ ಪ್ರಸಿದ್ಧ ಜರ್ಮನ್ ನೇತ್ರವೈದ್ಯ ಆರ್ಥರ್ ವಾನ್ ಹಿಪ್ಪೆಲನಿಗೆ ಸೇರಿದ್ದು. ೧೮೮೬-೮೭ ರಲ್ಲಿ ಆತ ಹೈಡೆಲ್‌ಬರ್ಗಿನಲ್ಲಿ ತಾನು ಪ್ರಾಣಿಯ ದೃಕ್ ಪಟಲವನ್ನು ಕಸಿಹಚ್ಚಿ ಕಣ್ಣು ತಂದುಕೊಟ್ಟ ಮನುಷ್ಯನೊಬ್ಬನನ್ನು ಸಾರ್ವಜನಿಕವಾಗಿ ಪ್ರದರ್ಶಿಸಿದನು. ೧೮೮೮ರಲ್ಲಿ ಹಿಪ್ಪೆಲನು ಒಬ್ಬ ಮನುಷ್ಯನಿಂದ ಇನ್ನೊಬ್ಬನಿಗೆ ದೃಕ್‌ಪಟಲ ಕಸಿಮಾಡುವುದರಲ್ಲಿ ಯಶಸ್ವಿಯಾದನು.

ಇಂದು ಈ ಶಸ್ತ್ರಕ್ರಿಯೆಯಲ್ಲಿ ಉಪಯೋಗಿಸುವ ಟ್ರೆಫೈನ್ ಎಂಬ ಸೂಕ್ಷ್ಮ ಆಯುಧವನ್ನು ರೂಪಿಸಿದವನೂ ಶಸ್ತ್ರಕ್ರಿಯೆಯಲ್ಲಿ ನಂಜಾಗದಂತೆ ಯೋಜಿಸತಕ್ಕ ಉಪಾಯಗಳನ್ನು ಗೊತ್ತುಪಡಿಸಿದವನೂ ಹಿಪ್ಪೆಲನೇ. ೧೯೦೫ ರಲ್ಲಿ ಮೊರೇವಿಯದ ನೇತ್ರವೈದ್ಯ ಝಿರ್ಮನು ಬೇರೆ ವೈದ್ಯಕೀಯ ಕಾರಣಕ್ಕಾಗಿ ತೆಗೆಯಬೇಕಾಗಿ ಬಂದ ಒಬ್ಬ ಹುಡುಗನ ಕಣ್ಣಿನಿಂದ ದೃಕ್‌ಪಟಲವನ್ನು ತೆಗೆದು ಕಣ್ಕುರುಡಾದ ಇನ್ನೊಬ್ಬನಿಗೆ ಅದನ್ನು ಕಸಿ ಮಾಡಿದ ಪ್ರಕರಣ ಪ್ರಸಿದ್ಧವಾದ ನಂತರ ಈ ನೇತ್ರ ಚಿಕಿತ್ಸೆಯನ್ನು ಹಲವು ದೇಶಗಳಲ್ಲಿ ವೈದ್ಯರು ಪ್ರಗತಿಪಥದಲ್ಲಿ ಸಾಗಿಸಿದ್ದಾರೆ.

ಕಸಿ ಮಾಡಲು ಉಪಯೋಗಿಸಿದ ದೃಕ್‌ಪಟಲವೊಂದು ಆರೋಗ್ಯ ಸ್ಥಿತಿಯಲ್ಲಿದ್ದರೆ ಮತ್ತು ಅದರಲ್ಲಿ ಗಾಯದ ಕಲೆಗಳಿಲ್ಲದಿದ್ದರೆ "ದೃಷ್ಟಿ-ದಾನ" ಮಾಡಿದವನ ಆರೋಗ್ಯ, ವಯಸ್ಸು, ದೃಕ್‌ಶಕ್ತಿ ಅಥವಾ ಮರಣದ ಕಾರಣ ಇವಾವವೂ ಮಹತ್ವದವಲ್ಲ. ವಯಸ್ಸಾದವರ ಪಟಲವೇ ಬಾಲಕರ ಪಟಲಕ್ಕಿಂತ ಕಸಿಮಾಡಲು ಒಳ್ಳೆಯದೆಂದು ಕಂಡುಬಂದಿದೆ. ದೃಷ್ಟಿ ಸರಿಯಾಗಿಲ್ಲದೆ ಕನ್ನಡಕ ಉಪಯೋಗಿಸುತ್ತಿದ್ದವರ ದೃಕ್‌ಪಟಲ ಕೂಡ ಅವರ ಮರಣಾನಂತರ ಇತರರಿಗೆ ಕಣ್ಣು ಕೊಡಬಲ್ಲದು. ಏಕೆಂದರೆ ಇಲ್ಲಿ ಕಸಿ ಮಾಡುವುದು ಕಣ್ಣಿನ ಗುಡ್ಡೆಯ ಭೂತಗನ್ನಡಿ

(ಲೆನ್ಸ್) ಯನ್ನಲ್ಲ, ಕೇವಲ ಹೊರಗಿನ ಪಾರ ದರ್ಶಕ ಪಟಲವನ್ನು.

ಮಾತ್ರ, ದೃಷ್ಟಿದಾನಿ ಸತ್ತು ಎರಡು ತಾಸಿನಲ್ಲಿ—ಬಹಳ ತಡವೆಂದರೆ ಹತ್ತು ಗಂಟೆಗಳೊಳಗೆ— ಅವನ ಕಣ್ಣುಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಇದು ಮೃತನ ಸಂಬಂಧಿಕರಿಗೆ ಮನನೋಯಿಸುವ ಸಂಗತಿಯಾಗಿರುವುದೇ ದೃಷ್ಟಿದಾನದಲ್ಲಿರುವ ಮೊದಲನೇ ತೊಡಕು. ಆದರೆ ಮುಂದೆ ಯಾರಿಗಾದರೂ ಈ ಕಣ್ಣು ಉಪಯೋಗಕ್ಕೆ ಬೀಳಬೇಕಾದರೆ ಕಣ್ಣನ್ನು ಕೂಡಲೆ ತೆಗೆದುಕೊಳ್ಳುವುದು ಅತ್ಯಗತ್ಯವಾದದ್ದೆಂದೂ ತಡವಾಗಿ ಹೋದರೆ ದಾನದಿಂದ ಪ್ರಯೋಜನವಿಲ್ಲೆಂದೂ ಸಂಬಂಧಿಕರು ಗಮನಿಸಬೇಕು.

ಮೊದಲೇ ಒಂದು ಎಚ್ಚರಿಕೆ ಕೊಡಬೇಕಾಗಿದೆ. ಎಲ್ಲ ಕುರುಡುತನಕ್ಕೂ ದೃಕ್‌ಪಟಲ ಕಸಿ ರಾಮಬಾಣೋಪಾಯವಲ್ಲ. ಅನೇಕರ ಕಣ್ಣಿನ ದೋಷ ದೃಕ್‌ಪಟಲಕ್ಕೆ ಸಂಬಂಧಿಸಿರದೆ ಇತರ ಕಾರಣಗಳಿಂದಾಗಿರುತ್ತದೆ. ಅಂಥವರಿಗೆ ಯಾವ ಪವಾಡವೂ ನೆರವಾಗದು.

ಕಣ್ಣನ್ನು ತೆಗೆದುಕೊಳ್ಳುವ ಕೆಲಸವನ್ನು ಯಾವ ಡಾಕ್ಟರನೂ ಮಾಡಬಲ್ಲನು. ತೆಗೆದೊಡನೆ ಅದನ್ನು ಗಾಜ್‌ಪ್ಯಾಡಿನಲ್ಲಿಟ್ಟು ಪಾರಾಫಿನ್ ಎಣ್ಣೆ ತುಂಬಿದ ಹೂಜಿಯಲ್ಲಿ ಹಾಕುತ್ತಾರೆ. ಅಲ್ಲಿಂದ ಸಾಧ್ಯವಿದ್ದಷ್ಟು ತ್ವರಿತವಾಗಿ ಅದನ್ನು ಕಣ್ಣಿನ ಬ್ಯಾಂಕಿಗೆ ಕಳಿಸಲಾಗುತ್ತದೆ. ಅಲ್ಲಿ ಬರ್ಫದ ಪೆಟ್ಟಿಗೆಯಲ್ಲಿ ಅದನ್ನು ತಾಮ್ರದ ಪಾತ್ರದಲ್ಲಿ ಕಾದಿಡಲಾಗುತ್ತದೆ.

ಮೃತನಿಂದ ಕಣ್ಣು ತೆಗೆದೊಡನೆ ಅದರಿಂದ ದೃಕ್‌ಪಟಲವನ್ನು ತೆಗೆದು ಕುರುಡನಿಗೆ ಇಲ್ಲವೇ ಕುರುಡನಾಗಲಿರುವವನಿಗೆ ಕಸಿ ಮಾಡಿಬಿಡುವುದು ಉತ್ತಮ ಪಕ್ಷ. ಕಣ್ಣಿನ ಆಸ್ಪತ್ರೆಯಲ್ಲೇ ಆದರೆ ಇದು ಸುಲಭ ಕೆಲವೊಮ್ಮೆ ರೋಗಿಯ ಕೆಟ್ಟುಹೋದ ಒಂದು ಕಣ್ಣಿನ ಪಟಲವನ್ನು ಅವನದೇ ಇನ್ನೊಂದು ಕಣ್ಣನ್ನುಳಿಸಲು ಉಪಯೋಗಿಸುವುದುಂಟು. ಹೀಗಾದರೆ ತೆಗೆದೊಡನೆ ಕಸಿ ಮಾಡಲು ಅನುಕೂಲವಾಗುತ್ತದೆ. ಆದರೆ ಬಹುತರವಾಗಿ ಮೃತನಿಂದ ದಾನ ಬಂದ ಕಣ್ಣನ್ನು ಅದು ಯಾರಿಗೆ ಬೇಕೋ ಅವನಿದ್ದಲ್ಲಿಗೆ ಒಯ್ಯಬೇಕಾಗುತ್ತದೆ.

ಇಂಥ ಪ್ರಸಂಗಗಳಲ್ಲಿ ಅದನ್ನು ಕಾಪಾಡಿಡುವ ಸಮಸ್ಯೆಯ ಬಗ್ಗೆ ಸಂಶೋಧನೆಗಳು ನಡೆಯುತ್ತಿವೆ. ತೆಗೆದ ನಾಲ್ಕು ದಿನಗಳೊಳಗೆ ಅದನು ಕಸಿ ಮಾಡುವುದಿದ್ದರೆ ಆಸ್ಪತ್ರೆಯ ಶೀತ ಕಪಾಟದಲ್ಲಿ ಅದನ್ನು ೪° C ನಲ್ಲಿ ಇಡಲಾಗುತ್ತದೆ. ಅದಕ್ಕೂ ಹೆಚ್ಚು ತಡವಾಗುವುದಾದರೆ ದ್ರವ ಪಾರಾಫಿನ್‌ನಲ್ಲಿ ಹಾಕಿ ಅಷ್ಟೇ ಶೈತ್ಯಮಾನ್ನದಲ್ಲಿರಿಸಬೇಕಾಗುತ್ತದೆ. ಆಗ ಅದನ್ನು ಡೆಕ್‌ಸ್ಟ್ರೋಸ್ ಸಕ್ಕರೆಯಿಂದ ಪೋಷಿಸುವ ಅಗತ್ಯವಿದೆ.

ಇನ್ನೂ ಹೆಚ್ಚು ಕಾಲ— ಮೂರು ವಾರ ಮಿಕ್ಕಿ— ಅದನ್ನು ಕಾಪಾಡಬೇಕಾದರೆ ಆ ಕಣ್ಣನ್ನು ಸಾವಕಾಶವಾಗಿ ತಂಪುಗೊಳಿಸಿ ಶೂನ್ಯಾಂಶಕ್ಕಿಂತ ಕೆಳಗೆ ೭೯° C ಯಷ್ಟು ಶೈತ್ಯವುಳ್ಳ ಅಂಗಾರಾಮ್ಲ "ಹಿಮ" ದಲ್ಲಿಡುವುದು ರೂಢಿ. ಈಗ ದೃಕ್‌ಪಟಲವನ್ನು ಒಣಗಿಸಿ ನೈಟ್ರೋಜಿನ್ ಅನಿಲದಲ್ಲಿರಿಸುವ ವಿಧಾನ ಅಮೇರಿಕದಲ್ಲಿ ಬಳಕೆಗೆ ಬರುತ್ತಿದೆ. ಬೇಕಾದಾಗ ಅದನ್ನು ಹೊರತೆಗೆದು ಪುನರುಜ್ಜೀವಿಸಿದರೆ ಜೀವಂತ ದೃಕ್‌ಪಟಲದಷ್ಟೇ ಚೆನ್ನಾಗಿರುತದೆ.

ದೃಕ್‌ಪಟಲ ಶಸ್ತ್ರಕ್ರಿಯೆ ಕೌಶಲದ ಒಂದು ಅದ್ಭುತವೇ ಆಗಿದೆ. ರೋಗಿ ಆಸ್ಪತ್ರೆಯಲ್ಲಿ ಎರಡರಿಂದ ನಾಲ್ಕು ವಾರಗಳ ಕಾಲ ಇರಬೇಕಾಗುವುದು. ಕಣ್ಣುಗುಡ್ಡೆಯನ್ನು ಔಷಧಪ್ರಯೋಗದಿಂದ ಕುಗ್ಗಿಸಿ ವೇದನಾಹರ ಔಷಧವನ್ನು ಹಾಕಿ ಟ್ರೆಫೈನ್ ಆಯುಧ ಉಪಯೋಗಿಸಿ ರೋಗದಿಂದ ಅಪಾರದರ್ಶಕವಾದ ಅವನ ದೃಕ್‌ಪಟಲದಲ್ಲಿ ಒಂದು ವೃತ್ತಾಕಾರದ ಖಂಡವನ್ನು ಕತ್ತರಿಸಿ ತೆಗೆಯುವರು. ಅನಂತರ ದಾನಬಂದ ಕಣ್ಣಿನಿಂದ ಸರಿಯಾಗಿ ಅಷ್ಟೇ ಅಳತೆಯ ದೃಕ್

ಪಟಲವನ್ನು ಅದೇ ಆಯುಧದಿಂದ ಕೊರೆದು ಸೂಕ್ಷ್ಮ ಚಿಮ್ಮಟಿಗೆಯಿಂದ ಅದನ್ನು ನಾಜೂಕಾಗಿ ಸುಲಿದುಕೊಂಡು ರೋಗಿಯ ದೃಕ್‌ಪಟಲದ ಸ್ಥಾನಕ್ಕೆ ಸರಿಯಾಗಿ ಕೂಡಿಸಿ ನವಿರಾದ ರೇಶ್ಮೆ ಅಥವಾ ಮೊನೋಫಿಲಾಮೆಂಟ್ ದಾರದಿಂದ ಇದಕ್ಕಾಗಿಯೆ ತಯಾರಾದ ೪ ಮಿಲಿಮಿಟರಿನಷ್ಟು ಚಿಕ್ಕ ಸೂಜಿಯಿಂದ ಎಂಟು ಕಡೆ ಹೊಲಿಗೆ ಹಾಕುವರು. ಅನಂತರ ರೋಗಿಯ ಕಣ್ಣಿಗೆ ಅನೇಕ ದಿವಸ ಕಾಲ ಬ್ಯಾಂಡೇಜು ಕಟ್ಟುವರು. ೧೮–೨೦ ದಿನಗಳ ನಂತರ ಹೊಲಿಗೆ ತೆಗೆಯುವರು. ಪ್ರಾರಂಭದಲ್ಲಿ ಕಸಿ ಮಾಡಿದ ಅಂಶ ಹೊರಗುಬ್ಬಿದಂತೆ ಕಂಡರೂ ಆರು ತಿಂಗಳೊಳಗೆ ಅದು ಸಂಪೂರ್ಣ ಹೊಂದಿಕೊಂಡು ಯಾವ ಮಾಯಕದಿಂದಲೋ ಅವನ ಶರೀರದ ಸಜೀವ ಅಂಶವಾಗಿಬಿಡುತ್ತದೆ.

ದೀರ್ಘ ಕಾಲದಿಂದ ನೋಟವೆಂದರೆ ಕೇವಲ ಅಸ್ಪಷ್ಟ ನೆರಳುಗಳೆಂಬ ಭಾವನೆಯಾಗಿದ್ದ ಮತ್ತು ಎಷ್ಟೋ ಸಲ ಶುದ್ಧ ಕತ್ತಲನ್ನೇ ಕಾಣುತ್ತಿದ್ದ ಜನಕ್ಕೆ ಈ ಶಸ್ತ್ರಕ್ರಿಯೆಯಿಂದ ಓದುವಷ್ಟು ಮತ್ತು ದೂರದ ದೃಶ್ಯಗಳನ್ನೂ ಸ್ಫುಟವಾಗಿ ಕಾಣುವಷ್ಟು ಕಣ್ಣು ಬಂದಾಗ ಅವರಿಗಾಗುವ ಸಾನಂದಾಶ್ಚರ್ಯ ಹೇಳಲಾಸಲ್ಲ. ಈ ಅದ್ಭುತವನ್ನು ಕಂಡ ಮಹಿಳೆಯೊಬ್ಬಳು, "ನನ್ನ ಕಣ್ಣಿಂದ ಕಣ್ಣು ಪಡೆದವರ ಮೂಲಕ ನಾನು ಕಾಣುವೆ" ಎಂದು ಉದ್ಗಾರವೆತ್ತಿ ತನ್ನ ಮರಣಾನಂತರ ತನ್ನ ಕಣ್ಣುಗಳನ್ನು ಇತರರಿಗೆ ದಾನ ಕೊಡುವುದಾಗಿ ಸಾರಿದಳು.

ಇಂಥ ಉದಾರ ಜೀವಿಗಳಿರುವುದರಿಂದಲೇ "ಕಣ್ಣಿನ ಬ್ಯಾಂಕು"ಗಳು ಪ್ರಾರಂಭವಾಗಲು ಸಾಧ್ಯವಾಯಿತು. ತಮ್ಮ ಕಣ್ಣುಗಳನ್ನು ದಾನ ಮಾಡಿ ಹೋದವರಿಂದ ತೆಗೆದುಕೊಂಡ ಕಣ್ಣುಗಳನ್ನು ಕಾಪಾಡಿ ಅಗತ್ಯವಿದ್ದಲ್ಲಿ ಅಗತ್ಯವಿದ್ದವರಿಗಾಗಿ ಅವುಗಳನ್ನೊದಗಿಸುವುದಕ್ಕಾಗಿ ಜಗತ್ತಿನ ಪ್ರಥಮ ಕಣ್ಣಿನ ಬ್ಯಾಂಕು ೧೯೪೪ ರಲ್ಲಿ ಅಮೇರಿಕದ ಮನಹಟನ್ ಕಣ್ಣು, ಕಿವಿ, ಗಂಟಲು ಆಸ್ಪತ್ರೆಯಲ್ಲಿ ಪ್ರಾರಂಭವಾಯಿತು. ಇಂದು ಅದರೊಡನೆ ಸಮಾವೇಶ ಹೊಂದಿದ ೧೬ ಕಣ್ಣಿನ ಬ್ಯಾಂಕುಗಳು ಇವೆ. ದಾನಿಗಳಿಂದ ಕಣ್ಣುಗಳನ್ನು ತೆಗೆದುಕೊಂಡು ಕಾಪಾಡಿ ಎಲ್ಲಿ ಅವು ಅತಿ ಅಗತ್ಯವೋ ಅಲ್ಲಿಗೆ ತತ್‌ಕ್ಷಣ (ಕೆಲ ವೇಳೆ ವಿಮಾನದಿಂದ ಕೂಡ) ಒದಗಿಸುವ ಈ ಸಂಸ್ಥೆ ಜಗತ್ತಿನ ಎಲ್ಲ ದೇಶಗಳಿಗೊಂದು ಮೇಲ್ಪಂಕ್ತಿಯಂತಿದೆ. ಅದು ದಾನ ಬಂದ ಕಣ್ಣುಗಳ ರಕ್ಷಣೆ ಮತ್ತು ಕಣ್ಣಿನ ಶಸ್ತ್ರಚಿಕಿತ್ಸೆಯ ಬಗ್ಗೆ ಸುಸಂಘಟಿತವಾದ ಸಂಶೋಧನೆಗಳಲ್ಲಿಯೂ ನಿರತವಾಗಿದೆ.

೧೯೪೮ ರಲ್ಲಿ ಫ್ರಾನ್ಸು ಈ ಮಾದರಿಯನ್ನನುಸರಿಸಿತು. ಪ್ಯಾರೀಸ್‌ನಲ್ಲಿ ಸ್ಥಾಪಿತವಾದ ಕಣ್ಣಿನ ಬ್ಯಾಂಕಿನ ಶಾಖೆಗಳು ಫ್ರಾನ್ಸಿನಲ್ಲೆಲ್ಲ ಹಬ್ಬಿವೆ. ೧೯೫೦ ರಲ್ಲಿ ಸ್ಪೇನಿನ ರಾಜಧಾನಿ ಮಾದ್ರಿದ್‌ನಲ್ಲಿ, ೧೯೫೨ ರಲ್ಲಿ ಲಂಡನ್ನಿನಲ್ಲಿ ಕಣ್ಣಿನ ಬ್ಯಾಂಕುಗಳು ತಲೆಯೆತ್ತಿದವು.

ದುರ್ದೈವದಿಂದ ಕಣ್ಣಿನ ಬ್ಯಾಂಕುಗಳು ಎಂಬ ಹೆಸರು ಅನ್ವರ್ಥಕವಾಗಿಲ್ಲ. ಏಕೆಂದರೆ ಅವುಗಳಲ್ಲಿ ಕಣ್ಣುಗಳ ಶಿಲ್ಕು ಇರುವುದೇ ಕಡಿಮೆ. ಕಣ್ಣಿನ ಬ್ಯಾಂಕುಗಳಲ್ಲಿ ಮೊದಲಿಗನೆನಿಸಿದ ಅಮೇರಿಕದಲ್ಲೇ ಇಂದು ೩೦,೦೦೦ ಅಂಧರು ದೃಕ್‌ಪಟಲಗಳ ಪೂರೈಕೆಯ ದಾರಿ ನೋಡುತ್ತ ಆಶಾತಂತುವಿನಿಂದ ಜೋತಾಡುತ್ತಿದ್ದಾರೆ.

ಈ ಕಣ್ಣುಗಳ ಕೊರತೆಗೆ ಎರಡು ಕಾರಣಗಳಿವೆ. ಮೊದಲನೆಯದು ಜನರ ಅಂಧ ವಿಶ್ವಾಸಗಳು. ಮರಣಾನಂತರ ತಮ್ಮ ಕಣ್ಣುಗಳು ಇತರರಿಗೆ ಸಿಗುವಂತೆ ಧಾರೆಯೆರೆದು ಹೋಗುವವರು ಸಾಕಷ್ಟಿಲ್ಲ. ಸಾಲದ್ದಕ್ಕೆ ಬಳಗದವರು ತಮ್ಮ ಮೃತ ಬಂಧುಗಳನ್ನು ಅಷ್ಟು ಬೇಗ "ವಿಕೃತ"ಗೊಳಿಸಲು ಇಷ್ಟಪಡುವುದಿಲ್ಲ.

ಎರಡನೆಯದು ಕಾಯದೆಯ ತೊಂದರೆ. ಅನೇಕ ದೇಶಗಳಲ್ಲಿ ಸತ್ತು ೨೪ ಗಂಟೆಗಳು ಕಳೆಯದೆ ಶರೀರದ ಯಾವ ಅಂಶವನ್ನೂ ಛೇದಿಸಲು ಪ್ರತಿಬಂಧವಿದೆ.

ಪ್ರಗತಿಪರ ರಾಷ್ಟ್ರಗಳಿಂದು ಕಾಯದೆಯ ತೊಡಕುಗಳನ್ನು ನಿವಾರಿಸಲು ಮುಂದಾಗಿವೆ. ೧೯೪೭ರಲ್ಲಿ ಫ್ರಾನ್ಸ್ ೨೪ ತಾಸುಗಳ ನಿಯಮವನ್ನು ತೆಗೆದುಹಾಕಿತು. ಸ್ಪೇನ್ ೧೯೫೦ರಲ್ಲಿ ಇದೇ ಮಾದರಿಯ ಕಾಯದೆ ಮಾಡಿತು. ಎರಡು ವರ್ಷಗಳ ನಂತರ ಬ್ರಿಟನ್ ಕಣ್ಣುಗಳನ್ನು ದಾನವೀಯಲು ಅನುಕೂಲ ಮಾಡಿಕೊಟ್ಟಿತು. ಸಿರಿಯಾ ಕೂಡ ಇದೇ ದಿಶೆಯಲ್ಲಿ ಮುಂದುವರಿದಿದೆ.

ಆದರೆ ಇತರ ದೇಶಗಳಲ್ಲಿ ಇನ್ನೂ ಕಾಯದೆಗಳು ಸ್ಪಷ್ಟವಾಗಿಲ್ಲ. ಮೊರೊಕ್ಕೋನಲ್ಲಿ ಒಂದು ಕಣ್ಣಿನ ಬ್ಯಾಂಕು ಇದ್ದರೂ ಮುಸ್ಲಿಂಧಾರ್ಮಿಕ ಭಯಗಳು ಆತಂಕವಾಗಿವೆ. ಇಜಿಪ್ತನಲ್ಲಿ ಕಾಯದೆಗಳು ಸುಗಮಗೊಳಿಸಲ್ಪಟ್ಟಿದ್ದರೂ ಜನರ ಪೂರ್ವಾಗ್ರಹಗಳು ಅಡ್ಡಿ ಮಾಡುತ್ತಿವೆ.

ಭಾರತದಲ್ಲಿ ಅಂಧತ್ವದ ಪೀಡೆ ಎಲ್ಲಕ್ಕೂ ಮಿಗಿಲಾಗಿರುವುದರಿಂದ ಅಲ್ಲಿ ಕಣ್ಣಿನ ಬ್ಯಾಂಕುಗಳ ಅಗತ್ಯ ಅತಿಶಯವಾಗಿದೆ. ಆದರೆ ಮದ್ರಾಸ್ ಮತ್ತು ಅಲೀಗಡದಲ್ಲಿ ಮಾತ್ರ ಚಿಕ್ಕ ಕಣ್ಣಿನ ಬ್ಯಾಂಕುಗಳಿವೆಯಷ್ಟೇ.

ಫ್ರಾನ್ಸ್, ಇಂಗ್ಲಂಡ್, ಅಮೇರಿಕ ಮತ್ತು ಬೇರೆ ಒಂದೆರಡು ದೇಶಗಳಲ್ಲಿ ಯಾವನಾದರೂ ಕೇವಲ ಒಂದು ಫಾರ್ಮಿನಲ್ಲಿ ಸಹಿ ಹಾಕಿ ತನ್ನ ಕಣ್ಣುಗಳನ್ನು ( ಮರಣಾನಂತರ ) ದಾನವೀಯಬಹುದಾಗಿದೆ. ಎಲ್ಲ ದೇಶಗಳಲ್ಲಿಯೂ ಈ ಬಗ್ಗೆ ಕಾಯದೆಗಳಾಗಬೇಕು. ಅದಕ್ಕೂ ಹೆಚ್ಚಾಗಿ ಜನರ ಪೂರ್ವಾಗ್ರಹಗಳನ್ನು ನಿವಾರಿಸಲು ದೊಡ್ಡ ಪ್ರಮಾಣದಲ್ಲಿ ಪ್ರಚಾರ ಸತ್ರ ಪ್ರಾರಂಭವಾಗಬೇಕು. ಜನ ತಿಳಿವಳಿಕೆಗೊಂಡು ಹೆಚ್ಚು ಸಂಖ್ಯೆಯಲ್ಲಿ ದೃಷ್ಟಿದಾನಕ್ಕೆ ಮುಂದೆ ಬರಬೇಕು.

ಕೇವಲ ದೃಕ್‌ಪಟಲದ ಅಪಾರದರ್ಶಕತ್ವದಿಂದ ಜೀವನ ದುರಂತವಾದುದನ್ನು ಕಂಡವರಾರೂ ಈ ಪ್ರಶ್ನೆಯ ಮಹತ್ವವನ್ನು ಅರಿಯದಿರರು. *

"ಯುನೆಸ್ಕೊ ಕೋರಿಯರ್" ನಿಂದ

## ವಿಚಿತ್ರ ಸತ್ಯ

ಕಾನಡಾ ಮತ್ತು ಅಮೇರಿಕದ ಗಡಿಯಲ್ಲಿ ಟಾಮ್ ಕೆಲಿ ಎಂಬಾತನಿದ್ದಾನೆ. ಈತ ನಿತ್ಯ ಅಮೇರಿಕದಲ್ಲಿ ಮಲಗುತ್ತಾನೆ, ಕಾನಡಾದಲ್ಲಿ ಊಟ ಮಾಡುತ್ತಾನೆ. ಇದೇನೂ ಗುಳಿಗೆಯ ಮಾತಲ್ಲ. ಆತನ ಮನೆ ಸರಿಯಾಗಿ ಗಡಿ ರೇಖೆಯಲ್ಲಿದ್ದು ಅಡಿಗೆ ಮನೆ ಕಾನಡಾದಲ್ಲಿಯೂ ಕೂಡ್ರುವ ಕೋಣೆ ಅಮೇರಿಕಾದಲ್ಲೂ ಇದೆ.

ಈತ ಒಂದು ಗಿಳಿಯನ್ನು ಸಾಕಿದ್ದಾನೆ. ಅದರ ಮೇಲೆ ಇವನಿಗೆ, ಇವನ ಮೇಲೆ ಅದಕ್ಕೆ ತುಂಬ ಪ್ರೇಮವಿದೆ. ಒಂದು ದಿನ ಟಾಮನ ಅಮೇರಿಕನ್ ಮಿತ್ರನೊಬ್ಬ—ಅವನೊಬ್ಬ ಸರಕಾರಿ ಅಧಿಕಾರಿ— ಅವನ ಮನೆಗೆ ಬಂದ. ಅಡಿಗೆಮನೆಯಲ್ಲಿದ್ದ ಗಿಳಿಯನ್ನೆತ್ತಿಕೊಂಡು ಟಾಮ್ ಮಿತ್ರನ ಸ್ವಾಗತಕ್ಕಾಗಿ ಕೂಡ್ರುವ ಕೋಣೆಗೆ ಬಂದ. ಆಗ ಆ ಮಿತ್ರ " ಅಮೇರಿಕದಲ್ಲಿ ಅಪ್ಪಣೆಯಿಲ್ಲದೆ ಹೊರಗಿನಿಂದ ಗಿಳಿಗಳನ್ನು ತರಲು ನಿರ್ಬಂಧವಿದೆ. ನೀನು ಕೆನಡಾದಿಂದ ಗಿಳಿ ತಂದು ಅಪರಾಧ ಮಾಡಿರುವಿ " ಎಂದ. ಟಾಮ್ ಮಿತ್ರನ ಮಾತು ನಗಚಾಟಿಕೆಯೆಂದು ಭಾವಿಸಿದ.

ಆದರೆ ಮುಂದೆ ಕೆಲ ದಿನಗಳಲ್ಲಿ ಅವನಿಗೆ ಅಮೇರಿಕನ್ ಸರಕಾರದ ನೋಟೀಸು ಬಂತು. ಈಗ ಟಾಮನ ಗಿಳಿ ಸದಾ ಕಾಲ ಅಡಿಗೆಮನೆಯಲ್ಲಿ ಬಂಧಿತವಾಗಿರುತ್ತದೆ.

# ತಪ್ಪು ಮಾಡಿ ಲಾಭ ಹೊಂದಿದರು

ಬ್ಲಾಟಿಂಗ್ ಪೇಪರು ಬರುವುದಕ್ಕೆ ಮುಂಚೆ ಕಾಗದದ ಮೇಲೆ ಬರೆದ ನಂತರ ಮಸಿಯನ್ನು ಒಣಗಿಸಲು ಉಸುಕನ್ನು ಉದುರಿಸುತ್ತಿದ್ದರು. ಜಾನ್ ಸ್ಲೇಡ್ ಎಂಬ ಕಾಗದ ತಯಾರಕನೊಬ್ಬ ಅಲಕ್ಷ್ಯದಿಂದ ಒಂದು ತಪ್ಪುಮಾಡಿರದಿದ್ದರೆ ಇಂದಿಗೂ ನಾವು ಬ್ಲಾಟಿಂಗ್ ಪೇಪರನ್ನು ಕಾಣುತ್ತಿದ್ದೆವೋ ಇಲ್ಲವೋ ? ೧೯ ನೆಯ ಶತಮಾನದ ಪ್ರಾರಂಭದಲ್ಲಿ ಈ ಕಾಗದದ ತಯಾರಕ ಜಾನ್ ಸ್ಲೇಡನಿಗೆ ಒಂದು ದಿನ ತಯಾರಿಸಿದ ಕಾಗದದ ಪಲ್ಪಿನಲ್ಲಿ ಅಂಟಿನ ದ್ರವ್ಯವನ್ನು ಕೂಡಿಸಲು ಮರೆತುಹೋದದ್ದು ಅರಿವಾಯಿತು. ಆ ಪಲ್ಪಿನಿಂದ ತಯಾರಾದ ಕಾಗದ ನಿರುಪಯೋಗಿ ಎಂದಾತ ಚೆಲ್ಲಿಕೊಡುವುದರಲ್ಲಿದ್ದ. ಅಷ್ಟರಲ್ಲಿ ಸಹಜವಾಗಿ ಆ ಕಾಗದದ ಮೇಲೆ ಬರೆದ. ಬರೆದೊಡನೆ ಮಸಿ ಇಂಗಿ ಹೋಗಲು ಅವನಿಗೆ ಆಶ್ಚರ್ಯವಾಯಿತು. ಜೊತೆಗೆ ಈ ಕಾಗದ ಉಸುಕನ್ನು ಉಪಯೋಗಿಸುವುದನ್ನು ತಪ್ಪಿಸಬಹುದು ಎಂಬ ವಿಚಾರವೂ ಅವನಿಗೆ ಹೊಳೆಯಿತು. ಅಂದೇ ನಾವಿಂದು ಕಾಣುವ ಬ್ಲಾಟಿಂಗ್ ಪೇಪರ್ ಜನ್ಮಿಸಿತು.

ನೀಲಿ ಕಾಗದ ಬಳಕೆಗೆ ಬಂದದ್ದೂ ಹೀಗೆಯೇ. ಕಾಗದ ತಯಾರಕನೊಬ್ಬನ ಹೆಂಡತಿ ಒಮ್ಮೆ ಕಾಗದದ ಪಲ್ಪು ಇಟ್ಟಿದ್ದ ಶೆಡ್ಡಿನಲ್ಲಿ ಹಾಯ್ದು ಹೋಗುತ್ತಿರುವಾಗ ಅವಳ ಕೈಲಿದ್ದ ನೀಲಿ ಪುಡಿಯ ಪೊಟ್ಟಣ ಅದರಲ್ಲಿ ಬಿದ್ದುಬಿಟ್ಟಿತು. ಗಂಡ ಬೈದಾನೆಂದು ಅವಳು ಆ ಮಾತನ್ನು ಯಾರಿಗೂ ಹೇಳಲಿಲ್ಲ. ಆ ಪಲ್ಪಿನಿಂದ ತಯಾರಿಸಿದ ಕಾಗದ ಎಂದಿನಂತೆ ಬಿಳಿಯ ಬಣ್ಣದ್ದಾಗದೆ ತಿಳಿ ನೀಲಿ ಬಣ್ಣದ್ದಾಯಿತು. ಅದನ್ನು ಕಂಡು ಆ ಕಾಗದ ತಯಾರಕನಿಗೆ ಬ್ರಹ್ಮಾಂಡ ಸಿಟ್ಟು ಬಂದಿದ್ದರ ಜೊತೆಗೆ ಇದು ಹೇಗೆ ಹೀಗಾಯಿತು ಎಂಬ ಪ್ರಶ್ನೆಯೂ ಹುಟ್ಟಿಕೊಂಡಿತು. ಆ ಕಾಗದವನ್ನು ರದ್ದಿ ಮಾಡಬೇಕೆಂದು ಮೊದಲು ಅವನು ಯೋಚಿಸಿದರೂ ಕಡೆಗೆ ತನ್ನೊಬ್ಬ ಗಿರಾಕಿಗೆ ಅದನ್ನು ಅಗ್ಗಕ್ಕೆ ಮಾರಿದ. ಆದರೆ ಆ ನೀಲಿ ಕಾಗದಕ್ಕೆ ಬಂದ ಬೇಡಿಕೆಯನ್ನು ಕಂಡು ಅವನು ಅಚ್ಚರಿಪಟ್ಟುಕೊಂಡ. ನೀಲಿ ಕಾಗದ ತಯಾರಿಕೆಯಿಂದ ಅವನು ಶ್ರೀಮಂತನೂ ಆದ.

* * *

೧೯೦೩. ಫ್ರಾನ್ಸಿನ ಕೆಮಿಸ್ಟ್ ಎಡ್ವರ್ಡ್ ಬೆನೆಡಿಕ್ಟಸ್ ಏನೋ ಸಂಶೋಧನೆಯ ಕಾರ್ಯದಲ್ಲಿ ತೊಡಗಿದ್ದಾಗ ಅವನ ಕೈ ತಗಲಿ ಶೆಲ್ಫಿನ ಮೇಲಿದ್ದ ಬಾಟ್ಲಿಯೊಂದು ಕೆಳಗೆ ಬಿತ್ತು. ಆದರೆ ಅದು ಒಡೆಯಲಿಲ್ಲ. ಎಡ್ವರ್ಡನು ಆ ಬಾಟ್ಲಿಯನ್ನೆತ್ತಿ ನೆಲಕ್ಕೆ ಅಪ್ಪಳಿಸಿದ. ಆಗಲೂ ಅದು ಒಡೆಯಲಿಲ್ಲ. ಅಷ್ಟೇ ಅಲ್ಲ, ಅದಕ್ಕೆ ಬಿರುಕು ಕೂಡ ಬಿಡಲಿಲ್ಲ. ಆಶ್ಚರ್ಯದಿಂದ ಅವನು ಆ ಬಾಟ್ಲಿಯ ಒಳಗಿನ ಭಾಗವನ್ನು ಪರೀಕ್ಷಿಸಿದಾಗ ಅಲ್ಲಿ ಸೆಲ್ಯುಲ್ಯಾಡ್ ರಸದ ತೆಳ್ಳನ್ನ ಲೇಪವಿರುವುದು ಕಾಣಿಸಿತು. ಆ ಲೇಪ ತೀರ ತೆಳ್ಳಗಾಗಿದ್ದರೂ ಒಡೆದ ಬಾಟ್ಲಿಯ ತುಣುಕುಗಳನ್ನು ಪ್ರತ್ಯೇಕವಾಗಿ ಬೀಳದಂತೆ ಎಳೆದು ಹಿಡಿಯಲು ಸಮರ್ಥವಾಗಿತ್ತು. ಆಗಲೇ ಒಡೆಯದ ಕಾಜಿನ ಶೋಧವಾಯಿತು.




ಹಳದಿ
LUX
Yellow


ಹಸುರು
LUX
Green


ನೀಲಿ
LUX
Blue


ನಸುಗೆಂಪು
LUX
Pink


ಕಾಮನಬಿಲ್ಲಿನ ನಾಲ್ಕು
ಬಣ್ಣಗಳಲ್ಲಿ ನನ್ನ ಲಕ್ಸ್
-ಹೌದು, ಬಿಳಿಬಣ್ಣದಲ್ಲಿ
ಕೂಡ ಇದೆ'
ಎಂದು ಅನ್ನುತ್ತಾಳೆ
ಎಂ. ಎನ್. ರಾಜಂ



ಆ ಚರಿತ್ರಾರ್ಹ ದಿನ ನಾಗಾಸಾಕಿಯ ಮೇಲೆ ಪರಮಾಣು ಬಾಂಬ್ ಒಗೆದ ವೈಮಾನಿಕ ಫ್ರೆಡ್ ಒಲೀವಿಕಾನ ಹೃದಯತಾಪದ ಮರ್ಮಸ್ಪರ್ಶಿ ನಿವೇದನೆ

# ನಾನು ಪರಮಾಣು ಬಾಂಬ್ ಹಾಕಿದೆ

ಮುಕ್ತಾ ರಾಜೆಯವರಿಂದ ಪ್ರಸ್ತುತ

ನಿಜವಾಗಿಯೂ ಅದು ನಾನು ಈಗ ಹತ್ತು ವರ್ಷಗಳಿಂದಲೂ ಮರೆಯಲು ಪ್ರಯತ್ನಿಸುತ್ತಿರುವ ಒಂದು ಅನುಭವ. ನಾನು ಪ್ರತಿ ರಾತ್ರಿ ಮಲಗುವಾಗ "ದೇವರೇ, ಆ ರಾತ್ರಿಯ ನೆನಪು ನನ್ನ ಮನದಿಂದ ಅಳಿಸಿ ಹೋಗುವಂತೆ ಮಾಡು" ಎಂದು ಪ್ರಾರ್ಥಿಸಿಕೊಳ್ಳುತ್ತಿದ್ದೇನೆ. ಕಳೆದ ವರ್ಷ ವರಿಷ್ಠ ಸಮ್ಮೇಲನದ ಮಾತು ಸುಳ್ಳಾದ ಮೇಲೆ ಮತ್ತು ಕಾಂಗೊ ಹಾಗೂ ಲಾವೋಸ್ ಘಟನೆಗಳನ್ನು ಕಂಡಾಗ ಇನ್ನೊಂದು ಮಹಾ ಯುದ್ಧ ಸಂಭವಿಸುವುದು ಸಾಧ್ಯವಿದೆ ಎಂದು ಅನಿಸಹತ್ತಿದೆ. ಇದರಿಂದ ನನ್ನ ಆ ಭೀಕರ ನೆನಪು ಅಳಿಯುವ ಬದಲು ಹೆಚ್ಚೆಚ್ಚು ಬಲಿಯತೊಡಗಿದ್ದು ನಾನು ರಾತ್ರಿಯೆಲ್ಲ ಎಚ್ಚರವಿರುವಂತಾಗಿದೆ.

ಅದು ಕಳೆದ ಮಹಾಯುದ್ಧದ ಅತ್ಯಂತ ಭಯಂಕರ, ಅತ್ಯಂತ ಅಮಾನುಷ ಮತ್ತು ಅತ್ಯಂತ ಕ್ರೂರ ಘಟನೆಯಾಗಿತ್ತು. ನನ್ನಂಥ ಸಾಮಾನ್ಯ ವ್ಯಕ್ತಿಯೊಬ್ಬ ಆ ಘಟನೆಗೆ ಹೊಣೆಯಾಗಿದ್ದನಲ್ಲ ಎಂಬ ಮಾತೇ ನನ್ನ ಮನವನ್ನು ತಿನ್ನುತ್ತಿದೆ. ಇಂದಿನ ಯುದ್ಧದ ಸ್ವರೂಪವಾದರೂ ಎಷ್ಟು ವಿಚಿತ್ರವಾಗಿದೆ! ಹಿಂದಿನ ಕಾಲದಲ್ಲೊ ಒಂದು ಮಹಾ ಕಾರ್ಯವನ್ನೆಸಗಲು ಒಬ್ಬ ವಾಶಿಂಗ್ಟನ್ನನೋ, ಒಬ್ಬ ನೆಪೋಲಿಯನ್ನನೋ ಬೇಕಾಗುತ್ತಿತ್ತು. ಅವರು ತುಂಬ ವಿಚಾರದಿಂದ ಪ್ರತಿ ಹೆಜ್ಜೆಯನ್ನು ಇಡುತ್ತಿದ್ದರು. ಆದರೆ ಈಗ, ಮಾನವನ ಅನೇಕ ಪೀಳಿಗೆಗಳ ಮೇಲೆ ಪ್ರಭಾವವನ್ನು ಬೀರಬಹುದಾದಂಥ ಕಾರ್ಯವನ್ನು ನನ್ನಂಥ ಸಾಮಾನ್ಯನೊಬ್ಬ ಮಾಡಬಹುದಾಗಿದೆ. ಅಂಥ ಕಾರ್ಯದ ಬಗ್ಗೆ ಆತನಿಗೆ ತಿಳಿದಿರಲಿ ಇಲ್ಲದಿರಲಿ, ಅವನ ಅಭಿಪ್ರಾಯ ಹೇಗೇ ಏನೇ ಇರಲಿ, ಅವನ ಕೈಯಿಂದ ಅಂಥದೊಂದು ಮಹತ್ಕಾರ್ಯ ಅನಿವಾರ್ಯವಾಗಿ, ಸಹಜವಾಗಿ ಸಂಭವಿಸಬಹುದಾಗಿದೆ.

ಅಂದರೆ ಅಂದು ನಾನೆಸಗಿದ ಕಾರ್ಯಕ್ಕಾಗಿ ನನಗೆ ಪಶ್ಚಾತ್ತಾಪವಾಗಿದೆ, ಅಥವಾ ನನ್ನಲ್ಲಿ ಅಪರಾಧಿ ಭಾವ ಬೆಳೆದಿದೆ ಎಂದೇನೂ ಅಲ್ಲ. ನಾನು ನನ್ನ ಕರ್ತವ್ಯವನ್ನು ಮಾಡಿದ್ದೆ. ಮತ್ತು ಆಗಿನ ಐತಿಹಾಸಿಕ ಪರಿಸ್ಥಿತಿಯಲ್ಲಿ ಮಹಾಯುದ್ಧವನ್ನು ಮುಗಿಸಲು ಅದೊಂದೇ ಉಪಾಯವಾಗಿತ್ತು ಎನ್ನಲೂ ಬಹುದು. ಹಾಗಿದ್ದರೂ ಅಂಥ ಘಟನೆ ಇನ್ನೊಮ್ಮೆ ಸಂಭವಿಸದಿದ್ದರೇನೇ ಮಾನವಜಾತಿಗೆ ಕಲ್ಯಾಣ ಎಂದು ನನಗನಿಸುತ್ತದೆ. ಆ ಕಾಳ ರಾತ್ರಿಯನ್ನು ಕಣ್ಣಾರೆ ಕಂಡಿರದವನಿಗೆ ಅದರ ಭೀಕರತೆಯ ಕಲ್ಪನೆಯೂ ಆಗಲಾರದು.

ಕಳೆದ ಮಹಾಯುದ್ಧದಲ್ಲಿ ನಾಗಾಸಾಕಿಯ ಮೇಲೆ ಪರಮಾಣು ಬಾಂಬು ಬಿತ್ತಲ್ಲ, ಅದೇ ನಾನು ಹೇಳುತ್ತಿರುವ ದುರ್ಘಟನೆ. ನಾಗಾಸಾಕಿಯ ಮೇಲೆ ಆ ಬಾಂಬನ್ನೆಸೆದ ವೈಮಾನಿಕ ನಾನೇ. ಪರಮಾಣುಬಾಂಬು ಹಾಕಿದಾಗ ನಮ್ಮ ವಿಮಾನ ಆಕಾಶದಲ್ಲಿ ೩೦,೦೦೦ ಅಡಿ ಎತ್ತರದಲ್ಲಿದ್ದರೂ ಆ ಅನುಭವ ಎಷ್ಟು ಭಯಾನಕವಾಗಿತ್ತೆಂದು ನಾನು ಬಲ್ಲೆ.

ಮೊದಲಿನಿಂದಲೇ ಹೇಳುತ್ತೇನೆ. ದ್ವಿತೀಯ ಜಾಗತಿಕ ಯುದ್ಧ ನಡೆದಿದ್ದಾಗ ಇಂಥದೊಂದು ಬಾಂಬು ತಯಾರಾಗಲಿದೆ ಎಂಬ ಹಾರಿಕೆಯ ಸುದ್ದಿ ಇದ್ದೇ ಇತ್ತು. ಆದರೆ ಇಂಥದೊಂದು ಬಾಂಬು ತಯಾರಾಗಿದೆ, ಅದು ಅಮೇರಿಕದ ಬಳಿ ಇದೆ ಎಂದು ಹೇಳಿದರೆ ಯಾರೂ ನಂಬುವಂತಿರಲಿಲ್ಲ. ಪರಮಾಣು ಬಾಂಬನ್ನು ಚೆಲ್ಲಲು ಒಂದು ವರ್ಷದಿಂದ ತರಬೇತಿ ಹೊಂದುತ್ತಿದ್ದ ನಮಗೇ ಈ ಮಾತಿನಲ್ಲಿ ಪೂರ್ಣ ನಂಬಿಕೆಯಾಗುತ್ತಿರಲಿಲ್ಲ. ಈ ಬಾಂಬನ್ನು ತೆಗೆದುಕೊಂಡು ಹೇಗೆ ಹಾರಬೇಕು, ಹೇಗೆ ಹೋಗಬೇಕು, ಬಾಂಬು ಎಸೆದು ಹೇಗೆ ತಿರುಗಿ ಬರಬೇಕು, ಹೇಗೆ ನಮ್ಮನ್ನು ರಕ್ಷಿಸಿಕೊಳ್ಳಬೇಕು ಎಂಬ ವಿಚಾರದಲ್ಲಿ ನಾವು ಇಪ್ಪತ್ತಾರು ಜನರಿಗೆ ಮಾತ್ರ ಶಿಕ್ಷಣ ಕೊಡಲ್ಪಡುತ್ತಿತ್ತು. ಆದರೆ ಇದೆಲ್ಲ ನಾವು ಓದುವ, ಓದಿ ರೋಮಾಂಚಿತರಾಗುವ, ಆದರೆ ನಂಬದಿರುವ ಒಂದು ದೆವ್ವದ ಭೀಕರ ಕಥೆಯಂತಿತ್ತು. ನಮ್ಮ ಶಿಕ್ಷಕರೂ ನಮ್ಮ ಸರಕಾರವೂ ಈ ವಿಷಯದಲ್ಲಿ ನಮ್ಮೊಂದಿಗೆ ಪ್ರಾಮಾಣಿಕತನದಿಂದ ನಡೆದುಕೊಂಡಿದ್ದರೆಂದು ಒಪ್ಪಿಕೊಳ್ಳಬೇಕು. ಮಾನವನ ಇತಿಹಾಸದಲ್ಲೆ ಇದುವರೆಗೆ ಆಗದಂಥ ಭೀಕರ ನರಹತ್ಯೆಯನ್ನು ಈ ಬಾಂಬು ಮಾಡುವುದೆಂದು ನಮಗೆ ಸ್ಪಷ್ಟವಾಗಿ ತಿಳಿಸಿದ್ದರು. ಈ ಕಾರ್ಯ ಮಾಡಲು ಮನಸ್ಸಿರದಿದ್ದರೆ ನೌಕರಿಗೆ ರಾಜೀನಾಮೆ ಕೊಡುವ ಸ್ವಾತಂತ್ರ್ಯವನ್ನು ನಮಗೆ ಇತ್ತಿದ್ದರು. ಈ ಮಾತುಗಳನ್ನು ಕೇಳಿದಾಗ ನಾವೆಲ್ಲ ಒಂದು ನಿಮಿಷ ಸ್ತಬ್ಧರಾಗಿ ನಿಂತುಬಿಟ್ಟೆವು. ಒಬ್ಬರ ಬಾಯಿಂದಲೂ ಮಾತು ಹೊರಡಲಿಲ್ಲ. ಹೀಗಾಗುವುದು ಸಾಧ್ಯವಿದೆ ಎಂಬ

ಮಾತಿನಲ್ಲಿ ನಮ್ಮಲ್ಲಿ ಒಬ್ಬರಿಗಾದರೂ ನಂಬಿಕೆ ಹುಟ್ಟಲಿಲ್ಲ ಎಂಬುದೇ ಅದಕ್ಕೆ ನಿಜ ಕಾರಣ ವಿರಬೇಕು. ಕಣ್ಣಿನಿಂದ ಕಂಡ ವಿನಾ ಇಂಥ ಮಾತನ್ನು ಯಾರಾದರೂ ನಂಬಬಹುದೇ? ಆದರೆ ಮೂರು ದಿನಗಳ ನಂತರ ನಾನು ಅದನ್ನು ಪ್ರತ್ಯಕ್ಷ ನೋಡಿದೆ.

ನಮ್ಮ ದಲವನ್ನು ಎರಡು ಭಾಗಗಳನ್ನಾಗಿ ಮಾಡಿದ್ದರು. ಒಂದು ತಂಡವನ್ನು ಹಿರೋಶಿಮಾದ ಮೇಲೆ ಪರಮಾಣು ಬಾಂಬು ಹಾಕಲು ಕಳಿಸಿದರು. ೭೨ ತಾಸುಗಳ ನಂತರ ಕೋಕುರಾ ಎಂಬ ನಗರದ ಮೇಲೆ ಪರಮಾಣು ಬಾಂಬನ್ನೆಸೆಯಬೇಕಾಗಿದ್ದ ಎರಡನೆಯ ತಂಡದಲ್ಲಿ ನಾನಿದ್ದೆ. ಬಹುಶಃ ವಾಚಕರು ಕೋಕುರಾ ನಗರವ ಹೆಸರನ್ನು ಇದುವರೆಗೆ ಕೇಳಿರಲಿಕ್ಕಿಲ್ಲ. ಕೋಕುರಾದ ಮೇಲೆ ಬಾಂಬನ್ನೆಸೆಯಲು ಹೋದ ನಾವು ನಾಗಾಸಾಕಿಯ ಮೇಲೆ ಎಸೆದದ್ದೂ ಒಂದು ಕರುಣಾಜನಕ ಕಥೆಯೆ ಆಗಿದೆ. ಕೋಕುರಾವನ್ನು ನಾವು ತಲುಪಿದಾಗ ಅದರ ಮೇಲೆ ದಟ್ಟವಾದ ಮೋಡಗಳು ಹಬ್ಬಿಕೊಂಡಿದ್ದವು ಒಂದು ನಿರ್ದಿಷ್ಟ ಎತ್ತರಕ್ಕಿಂತ ಕೆಳಗೆ ನಮ್ಮ ವಿಮಾನ ಹಾರುವಂತಿರಲಿಲ್ಲ. ಹಾಗೆ ಹೋಗಿದ್ದರೆ ನಾವೇ ಸ್ವತಃ ಪರಮಾಣು ಬಾಂಬಿಗೆ ಬಲಿಯಾಗುತ್ತಿದ್ದೆವು. ನಾವಿರಬೇಕಾದಷ್ಟು ಎತ್ತರದಲ್ಲಿ ಕೋಕುರಾದ ಮೇಲೆ ಮತ್ತು ಸುತ್ತಮುತ್ತ ಮೈಲುಗಟ್ಟಲೆ ಪ್ರದೇಶದಲ್ಲಿ ಮೋಡಗಳ ಹೊರತು ಮತ್ತೇನೂ ಕಾಣಿಸುತ್ತಿರಲಿಲ್ಲ.

ಕೋಕುರಾದ ಮೇಲೆ ಎಸೆಯಲು ಸಾಧ್ಯವಾಗದಿದ್ದರೆ ಬಾಂಬನ್ನು ನಾಗಾಸಾಕಿಯ ಮೇಲೆ ಎಸೆಯಬೇಕು ಎಂದು ನಮಗೆ ಆದೇಶವಿತ್ತು. ಕೋಕುರಾದ ಮೇಲೆ ಒಂದೆರಡು ಸಲ ಹಾರಾಡಿ ನಾವು ನಾಗಾಸಾಕಿಯ ಕಡೆ ಹೊರಟೆವು. ಲಕ್ಷಗಟ್ಟಲೆ ಜನರ ಸಾವು-ಬದುಕುಗಳು ಎಂಥ ಚಿಲ್ಲರೆ ಸಂಗತಿಯನ್ನವಲಂಬಿಸಿರುತ್ತವಲ್ಲ! ಅಂದು ಕೋಕುರಾದ ಮೇಲೆ ಆಕಾಶ ಸ್ವಚ್ಛವಾಗಿದ್ದರೆ ಲಕ್ಷಗಟ್ಟಲೆ ಜನರ ಅದೃಷ್ಟ ಬದಲಾಯಿಸುತ್ತಿತ್ತು. ನಾಗಾಸಾಕಿಯಲ್ಲಿ ಸತ್ತ ಲಕ್ಷಗಟ್ಟಲೆ ಜನ ಬದುಕಿರುತ್ತಿದ್ದರು. ಕೋಕುರಾದಲ್ಲಿ ಬದುಕುಳಿದ ಅಸಂಖ್ಯ ಜನರು ಸಾಯುತ್ತಿದ್ದರು.

ನಾಗಾಸಾಕಿಯ ಮೇಲ್ಗಡೆಯಲ್ಲಿ ಹವೆ ಚೆನ್ನಾಗಿರಲಿಲ್ಲ: ತುಂಬಾ ಮೋಡಗಳಿದ್ದವು. ಆದರೆ ನಾವು ಬಾಂಬನ್ನೆಸೆಯದೆ ಗತ್ಯಂತರವಿರಲಿಲ್ಲ. ಅದನ್ನಿಟ್ಟುಕೊಂಡು ನಾವೆಲ್ಲಿಯೂ ಇಳಿಯುವುದು ಸಾಧ್ಯವಿರಲಿಲ್ಲ. ವಿಮಾನ ಇಳಿಯುವಾಗ ಆಗುವ ಸೌಮ್ಯ ಧಕ್ಕೆಯಿಂದ ಕೂಡ ಬಾಂಬು ಸ್ಫೋಟವಾಗಿ ವಿಮಾನವೂ ಅದರಲ್ಲಿದ್ದ ನಾವಂತೂ ಸರಿಯೆ, ವಿಮಾನ ನಿಲ್ದಾಣವೂ ಅದರ ಸುತ್ತಮುತ್ತ ಇಪ್ಪತ್ತು ಮೈಲು ದೂರದ ವರೆಗಿನ ಪ್ರದೇಶದಲ್ಲಿದ್ದ ಸೈನಿಕ ಶಿಬಿರಗಳೆಲ್ಲವೂ ಉಧ್ವಸ್ತವಾಗಿ ಹೋಗುತ್ತಿದ್ದವು. ರಾಕ್ಷಸ ತನ್ನ ಬಾಯನ್ನು ತೆರೆದಾಗ ಅವನ ಗಂಟಲಲ್ಲಿ ಬೇಟೆ ಇಳಿಯಲೇಬೇಕಲ್ಲವೆ? ಆ ಸಮಯದಲ್ಲಿ ಬೇರೆಯವರ ಪ್ರಾಣಹರಣಕ್ಕಾಗಿ ಎಂಬ ಕಾರಣಕ್ಕಿಂತಲೂ ಹೆಚ್ಚಾಗಿ ನಮ್ಮ ಪ್ರಾಣಗಳನ್ನುಳಿಸಿಕೊಳ್ಳಲು ನಾವು ಬಾಂಬನ್ನು ಚೆಲ್ಲಲೇಬೇಕಾಗಿತ್ತು.

ಕೊನೆಗೆ ಮೋಡಗಳ ಮಧ್ಯದಲ್ಲಿಯ ಒಂದು ಸ್ಥಳವನ್ನಾರಿಸಿಕೊಂಡು ಬಾಂಬನ್ನು ಚೆಲ್ಲಿದೆವು. ಸ್ಫೋಟವನ್ನು ಕಂಡೆವು, ಆದರೆ ಸಪ್ಪಳ ಕೇಳಿಸಲಿಲ್ಲ. ಏಕೆಂದರೆ ನಾವು ಆಕಾಶದಲ್ಲಿ ಬಹು ಎತ್ತರದಲ್ಲಿ– ಸಪ್ಪಳ ಕೇಳಿಬರದಷ್ಟು ಎತ್ತರದಲ್ಲಿದ್ದೆವು. ಆದರೆ ಕೆಲ ಕ್ಷಣಗಳಲ್ಲೆ ನಮಗೆ ಆಘಾತದ ಮೊದಲನೆಯ ತೆರೆ ಅಪ್ಪಳಿಸಿತು. ನನ್ನ ಜೀವನದಲ್ಲಿ ಇದು ಎಲ್ಲಕ್ಕಿಂತಲೂ ಭಯಾನಕವಾದ, ಮೈ ನಡುಗಿಸುವ ಅನುಭವವೆನಿಸಿತು. ನಮ್ಮ ವಿಮಾನ, ನಮ್ಮ ಮನಸ್ಸು, ನಮ್ಮ ಎಲುವು ಮಾಂಸಗಳು ಕೂಡ ತತ್ತರಿಸಿಹೋದವು.

ಆ ಆಘಾತದಿಂದ ಚೇತರಿಸಿಕೊಂಡಾಗ ಒಂದು

ಭಯಾನಕ ಭಾವನೆ ನಮ್ಮನ್ನಾಕ್ರಮಿಸಿತು. ನಾವು ಮಾಡಿದ ವಿನಾಶವನ್ನು ನಮ್ಮ ಕಣ್ಣುಗಳಿಂದಲೇ ನೋಡಬೇಕೆಂದೆನಿಸಿತು. ಈ ವಿಷಯದಲ್ಲಿ ನಮಗೆ ಕೊಟ್ಟಿದ್ದ ಆದೇಶ ಸ್ಪಷ್ಟವಾಗಿತ್ತು- "ಬಾಂಬು ಹಾಕಿರಿ ಮತ್ತು ಓಡಿರಿ." ಒಂದು ಮಿನಿಟಾದರೂ ನಿಂತಿದ್ದೇ ಆದರೆ ನಾವು ಸಹ ಬೂದಿಯಾಗಿಹೋಗುವೆವು ಎಂದು ನಮಗೆ ತಿಳಿಸಿದ್ದರು. ಆದರೆ ನಮ್ಮಲ್ಲುಂಟಾದ ಭಾವನೆ ಎಂಥ ವಿಚಿತ್ರವಾಗಿತ್ತೆನ್ನುತ್ತೀರಿ ? ಮನುಷ್ಯನ ಕುತೂಹಲವೆಂಥದು ಬಲ್ಲಿರಾ ! ತಾನು ಮಾಡಿದ ಕಾರ್ಯ ಕೆಟ್ಟದ್ದೇ ಆಗಿರಲಿ, ಒಳ್ಳೆಯದೇ ಆಗಿರಲಿ, ಅದರ ಪರಿಣಾಮವನ್ನು ಸ್ವತಃ ನಿರೀಕ್ಷಿಸಲು ಆತ ಅತ್ಯಂತ ಆತುರನಾಗಿರುತ್ತಾನೆ.

ನನ್ನ ಸಂಗಡಿಗರ ಮುಖ ನೋಡಿದೆ. ಆ ಮೇಲೆ ನಮ್ಮ ನಾಯಕನನ್ನು ನೋಡಿದೆ. ಪರಸ್ಪರರ ಮನಸ್ಸಿನಲ್ಲಿರುವುದು ನಮಗೆಲ್ಲ ಅರ್ಥವಾಗುತ್ತಿತ್ತು. ನಾಯಕ "ಓ. ಕೆ." ಎಂದ. ಮೇಲಕ್ಕೇರುವ ಬದಲು ನಮ್ಮ ವಿಮಾನ ಕೆಳಗಿಳಿಯಿತು. ನಾಗಾಸಾಕಿಯ ರುದ್ರಭೀಕರ ದೃಶ್ಯ ಕಾಣಿಸಿತು.

ಅಬ್ಬಾ! ಎಂಥ ಭಯಾನಕ ದೃಶ್ಯ! ಆ ಕ್ಷಣದಲ್ಲಿ ನನ್ನಲ್ಲಿ ಮೂಡಿದಂಥ ಪ್ರಾಣಘಾತಕ ಭಯದ ಭಾವನೆ ಮನುಷ್ಯನ ಇತಿಹಾಸದಲ್ಲೆ ಮೂಡಿರಲಿಕ್ಕಿಲ್ಲ. ಕೆಳಗಡೆ ಆ ವಿರಾಟ್ ದೈತ್ಯಾಕಾರದ ವಿಷಪೂರಿತ ಹೊಗೆಯ ಮೋಡ ಮಿನಿಟಿಗೆ ಒಂದು ಮೈಲು ವೇಗದಲ್ಲಿ ಮೇಲಕ್ಕೇರುತ್ತ ನಮ್ಮನ್ನು ನುಂಗಲು ಧಾವಿಸುತ್ತಿತ್ತು. ಅದರ ಸುಳಿಯಲ್ಲಿ ಸಿಕ್ಕರೆ ನಮ್ಮ ಬೂದಿಯ ವಿನಾ ಮತ್ತೇನೂ ಉಳಿಯುವುದಿಲ್ಲವೆಂದು ನಮಗೆ ಗೊತ್ತಿತ್ತು. ನಾವು ಕಾಲು ಕಿತ್ತೆವು.

ಆದರೆ ತಡವಾಗಿ ಹೋಗಿತ್ತು. ನಾಲ್ಕು ಭೀಕರ ಆಘಾತಗಳು ನಮ್ಮನ್ನಪ್ಪಳಿಸಿದವು. ಪ್ರತಿಯೊಂದೂ ನಮ್ಮನ್ನು ನಿರ್ದಿಷ್ಟ ಪಥದಿಂದ ಬೇರೆಡೆ ನೂಕಿತು. ವಿಮಾನ ಗದಗದ ಅಲ್ಲಾಡುತ್ತಿತ್ತು. ಅದರ ಮೇಲೆ ನಮ್ಮ ನಿಯಂತ್ರಣ ತಪ್ಪಿಹೋಗಿತ್ತು. ಪ್ರತಿಯೊಂದು ಆಘಾತದ ನಂತರವೂ ನಾವು ಕೆಳಗಿನಿಂದ ಮೇಲೇರುತ್ತಿದ್ದ ವಿಷಪೂರಿತ ಮೋಡದಲ್ಲಿ ಮುಳುಗುತ್ತಿರುವುದು ನಮಗೆ ಕಾಣಿಸುತ್ತಿತ್ತು. ಒಂದು ಆಘಾತದಿಂದ ಚೇತರಿಸಿಕೊಳ್ಳುವಷ್ಟರಲ್ಲಿ ಇನ್ನೊಂದು ಆಘಾತವಾಗುತ್ತಿತ್ತು. ಅದು ಹೇಗೋ ಒಂದು ಸೆಕೆಂಡಿನಲ್ಲಿ ನಾನು, ನನ್ನ ಸಂಗಡಿಗರು ಮತ್ತು ಪೈಲಟ್-ಸ್ಪೀನಿ ಎಲ್ಲರೂ ನಮ್ಮ ಬಲವನ್ನೆಲ್ಲ ಪ್ರಯೋಗಿಸಿ ವಿಮಾನನ್ನು ತಿರುಗಿಸಿದೆವು. ಆ ಮೋಡದಿಂದ ಕೇವಲ ಮೂವತ್ತು ಗಜ ದೂರವಿರುವಾಗ ಪಾರಾದೆವು. ಮೃತ್ಯುವಿನ ಪಾಶ ಕೂದಲೆಳೆಯಷ್ಟು ಸಮೀಪ ಬಂದಿತ್ತು. ನಮ್ಮ ಸುದೈವದಿಂದ ಉಳಿದುಕೊಂಡೆವು.

ಹಾದಿಯಲ್ಲಿ ನಮ್ಮಲ್ಲೊಬ್ಬರೂ ಮಾತಾಡಲಿಲ್ಲ. ನಾವು ಬರೀ ಒಂದು ಬಾಂಬನ್ನು ಒಗೆದಿರದೆ ಜಗತ್ತಿನಲ್ಲಿಯ ಒಂದು ಭೀಕರ ಪೈಶಾಚಿಕ ಶಕ್ತಿಯನ್ನು ಶಾಶ್ವತವಾಗಿ ಮುಕ್ತಗೊಳಿಸಿದ್ದೆವು ಎಂದು ನಮಗೆಲ್ಲ ಅನಿಸುತ್ತಿತ್ತು. ಈಗೊಂದು ವರ್ಷದ ಹಿಂದೆ ನನಗೆ ಸ್ಪೀನಿಯ ಭೆಟ್ಟಿಯಾಗಿತ್ತು. ಆಗ ನಾಲ್ಕು ತಾಸುಗಳ ವರೆಗೆ ನಾವು ಒತ್ತಟ್ಟಿಗಿದ್ದು ಉಂಡು ತಿಂದು ಅಲೆದಾಡಿದೆವಾದರೂ ಅಂದಿನ ನಾಗಾಸಾಕಿ ಘಟನೆಯ ಬಗ್ಗೆ ಒಬ್ಬರಾದರೂ ಒಂದಕ್ಷರವನ್ನೆತ್ತಲಿಲ್ಲ.

ನಮ್ಮ ತಂಡದಲ್ಲಿಯ ಒಬ್ಬಾತ ಕಳೆದ ವರ್ಷ ಅನೇಕ ಸಲ ದರೋಡೆ ಹಾಕಿದ್ದಕ್ಕಾಗಿ ಜೇಲಿನಲ್ಲಿದ್ದಾನೆ. ಅವನನ್ನು ಪರೀಕ್ಷಿಸಿದ ಮಾನಸಶಾಸ್ತ್ರಜ್ಞರು "ಪರಮಾಣು ಬಾಂಬು ಹಾಕಿದ್ದ ತಾನು ಅಪರಾಧಿ ಎಂದು ಅವನ ಸುಪ್ತ ಮನಸ್ಸು ಹೇಳುತ್ತಿದೆಯಾದ್ದರಿಂದ ಆತ ತನ್ನನ್ನು ನಾಶಗೊಳಿಸಿಕೊಳ್ಳಲೆತ್ನಿಸುತ್ತಿದ್ದಾನೆ" ಎಂದಿದ್ದಾರೆ. ನನ್ನ ಈ ಕಾರ್ಯದಿಂದ ನನ್ನ ದಿವಂಗತ ತಾಯಿ ಕೂಡ ತುಂಬ ದುಃಖಿಯಾಗಿದ್ದಳು. ನಾನು ಯುದ್ಧದಿಂದ ಮರಳಿ ಬಂದಾಗ ಅವಳು, "ಫ್ರೆಡಿ, ನಿನ್ನ ಆತ್ಮಸಾಕ್ಷಿ ನಿನ್ನನ್ನು ಪೀಡಿಸುವುದಿಲ್ಲವೆ ?"

ಎಂದು ಕೇಳಿದಳು. ಅದಕ್ಕೆ ನಾನೇನು ಉತ್ತರ ಕೊಡಲಿ? ಸಾವಿರಾರು ನಿರಪರಾಧಿಗಳು ಸಾಯಲಿ ಎಂದು ನಾನು ಬಯಸಿದ್ದೆನೆ? ಆದರೆ ನಾನಾದರೂ ಏನು ಮಾಡಬಹುದಿತ್ತು? ನನ್ನ ತಾಯಿ ಆಮೇಲೆ ನನ್ನೊಡನೆ ಒಂದು ಶಬ್ದವನ್ನೂ ಆಡಲಿಲ್ಲ. ಆದರೆ ಒಂದು ರಾತ್ರಿ ನಾನು ಅವಳ ಕೋಣೆಯ ಸಮೀಪದಲ್ಲಿ ಹಾಯ್ದು ಹೋಗುತ್ತಿದ್ದಾಗ ಅವಳು, "ದೇವರೇ, ನನ್ನ ಮಗನನ್ನು ಕ್ಷಮಿಸು" ಎಂದು ಪ್ರಾರ್ಥನೆ ಮಾಡುತ್ತಿದ್ದುದನು ಕೇಳಿದೆ.

ರಾಜಕಾರಣ ನನ್ನ ವಿಷಯವಲ್ಲ. ನನಗೆ ಅದರ ಆಟ ಬೇಡ. ನಾನೊಬ್ಬ ಸಾಮಾನ್ಯ ಮನುಷ್ಯ. ೩೮ ವರ್ಷದ ಸಿವಿಲ್ ಇಂಜಿನಿಯರ್. ದೈವಯೋಗದಿಂದ ಈ ಬಾಂಬು ಹಾಕುವ ತಂಡದವನಾಗಿದ್ದೆ. ಪರಮಾಣು ಬಾಂಬು ಎಂದರೇನು ಎಂಬುದನ್ನು ಕಂಡಿರುವುದರಿಂದ ಇದನ್ನು ಬರೆಯುತ್ತಿದ್ದೇನೆ.

ಇಂದು ಕೂಡ ಕಣ್ಣು ಮುಚ್ಚಿಕೊಂಡಾಗ ನಾಗಾಸಾಕಿಯಲ್ಲಾದ ಸ್ಫೋಟವನ್ನು ಸಜೀವವಾಗಿ ಕಾಣುತ್ತಿದ್ದೇನೆ. ಆಕಾಶದಲ್ಲಿ ಭೂತದಂತೆ ಹಬ್ಬಿದ ನೀಲಿ ಬೆಳಕು-ಅದರೆದುರಿನಲ್ಲಿ ಉರಿಯುವ ಮೇಣಬತ್ತಿಯಂತೆ ಕಾಣಿಸುತ್ತಿದ್ದ ಸೂರ್ಯ-ನನ್ನ ಕಣ್ಮುಂದೆ ಕಟ್ಟುತ್ತವೆ.

ಮಾನವನ ಇತಿಹಾಸದಲ್ಲಿ ಇನ್ನೊಮ್ಮೆ ಆ ನೀಲಿ ಬೆಳಕು ಯಾರಿಗೂ ಕಾಣದಿರಲಿ ಎಂದು ದೇವರನ್ನು ಪ್ರಾರ್ಥಿಸುತ್ತೇನೆ. *

"ಧರ್ಮಯುಗ" ದಿಂದ

---

## ಸತ್ಯವೇ ದೇವರು

ಅಮೇರಿಕೆಯ ತತ್ವಜ್ಞಾನಿ ಥೋರೊ ಉಚ್ಚ ವಿಚಾರದವನಿದ್ದು ಅವನಿಗೆ ಸತ್ಯವಲ್ಲದೆ ಬೇರಾವ ಧರ್ಮಪೀಠಗಳಲ್ಲಿ ಹೆಚ್ಚಿನ ಆಸ್ಥೆ ಇಲ್ಲವಾಗಿತ್ತು. ಅವನು ಮರಣೋನ್ಮುಖನಾದಾಗ ಧಾರ್ಮಿಕ ಪದ್ಧತಿಯಂತೆ ಧರ್ಮಗುರುವನ್ನು ಕರೆಸಲಾಯಿತು. ಥೋರೋನನ್ನು ಬಗ್ಗಿಸುವ ಯೋಗ್ಯ ಸಮಯವಿದೆಂದು ಭಾವಿಸಿದ ಪಾದ್ರಿ ಉದ್ದಾಮ ವೃತ್ತಿಯಿಂದ, "ಥೋರೊ, ಈಗಲಾದರೂ ದೇವರನ್ನು ನೆನಸು. ಮರಣಾನಂತರವಾದರೂ ನಿನಗೆ ಸುಖ ಶಾಂತಿ ಲಭಿಸೀತು" ಎಂದು ಹೇಳಿದ. ಆಗ ಥೋರೊ "ನಾನು ನಿನಗೆ ವಿರೋಧ ಮಾಡಿದೆನಾದರೂ ದೇವರಿಗೆ ವಿರೋಧವನ್ನು ನಾನೆಂದೂ ಮಾಡಿರಲಿಲ್ಲ. ಅದ್ದರಿಂದ ದೇವರನ್ನು ನಾನು ಇನ್ನು ಮೇಲೇ ಸ್ಮರಿಸಬೇಕೆಂದೇನಿಲ್ಲ. ನಿನ್ನ ಕಲ್ಪನೆ ತಪ್ಪಾಗಿದೆ. ಇನ್ನೊಂದು ಸಂಗತಿ: — ನಾನು ಮರಣಾನಂತರವಾದರೂ ಸುಖಿಯಾದೇನೆಂದು ನೀನು ಹೇಳಿದೆಯಲ್ಲ? . . . . . . . . ಹುಚ್ಚಾ, ನಾನು ಜೀವನದ ತುಂಬ ಸುಖ ಸಮಾಧಾನ-ಶಾಂತಿಯನ್ನು ಅನಂತವಾಗಿ ಅನುಭವಿಸಿದ್ದೇನೆ. ಆ ಕೊರತೆ ನನಗನಿಸಿಲ್ಲ, ಹೋಗು. ನನ್ನ ಸತ್ಯ-ಪರಮೇಶ್ವರ ನಿಮ್ಮಂಥ ಡಾಂಭಿಕರನ್ನು ಕಂಡು ಗದಗದ ನಡುಗುತ್ತಿದ್ದಾನೆ," ಎಂದು ನುಡಿದ.

*

ಈಶಚಿಂತನೆಯಲ್ಲಿ ತೊಡಗಿದರೆ ನಿಮ್ಮ ಕಲ್ಯಾಣವಾಗಬಹುದು. ಆದರೆ ಸತ್ಕಾರ್ಯದಲ್ಲಿ ತೊಡಗಿದರೆ ನಿಮ್ಮ ಜೊತೆಗೆ ಇನ್ನೂ ಹಲವರ ಕಲ್ಯಾಣವಾಗಬಹುದು.

ರಾಬರ್ಟ್ ಬೆನ್ಸನ್

ಬಾಯಿಲೆಕ್ಕದಿಂದ ಹೇಳಿ— ೩೦೬೭೫೧೩೮೯೪೨೭೩೮೪೭
×೬೫೩೪೪೩ ಎಂದರೆ ಎಷ್ಟು?

# ಜ್ಞಾಪಕ ಶಕ್ತಿಯ ಅದ್ಭುತಗಳು

ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

ಜ್ಞಾಪಕಶಕ್ತಿಯೆಂದರೇನು? ಮನುಷ್ಯನ ಜೀವಮಾನದಲ್ಲಿ ಒದಗುವ ಬಗೆಬಗೆಯ ಅಸಂಖ್ಯಾತ ಅನುಭವಗಳನ್ನು ಮೆದುಳು ಸಂಗ್ರಹಿಸಿಡಲು ಹೇಗೆ ಸಾಧ್ಯ? ಈ ಪ್ರಶ್ನೆಗಳಿಗೆ ಸರಿಯಾದ ಉತ್ತರವಿಲ್ಲ— ಅವು ಸೃಷ್ಟಿಯ ಗೋಪ್ಯಗಳಾಗಿವೆ. ಆಶ್ಚರ್ಯಕರವಾದ ಜ್ಞಾಪಕಶಕ್ತಿಯುಳ್ಳ ಕೆಲವರು ಭಾರಿ ಭಾರಿ ಗ್ರಂಥಗಳನ್ನು ಅಖಂಡ ಬಾಯಿಪಾಠ ಮಾಡಿ, ಅವುಗಳಲ್ಲಿ ಬರೆದಿರುವುದನ್ನೆಲ್ಲಾ ಪದಾನುಪದವಾಗಿ ಬಾಯಲ್ಲಿ ಹೇಳಬಲ್ಲರು. ಅದ್ಭುತ ಜ್ಞಾಪಕಶಕ್ತಿಯ ಅಭಿವ್ಯಕ್ತಿಗೆ ತಾನು ನೆನೆಪಿಡತಕ್ಕ ವಿಷಯ ಆ ವ್ಯಕ್ತಿಗೆ ಅರ್ಥವಾಗಬೇಕೆಂದು ಕೂಡ ಇಲ್ಲ.

ಹತ್ತೊಂಭತ್ತನೆ ಶತಮಾನದಲ್ಲಿ ಶ್ರೇಷ್ಠವರ್ಗದ ಲೇಖಕನೂ, ವಿದ್ವತ್ತಿನಲ್ಲಿ ಮಹಾ ಅಗ್ರಗಣ್ಯನೂ ಆಗಿದ್ದ ಲಾರ್ಡ್ ಮೆಕಾಲೆಯ ಸ್ಮರಣಶಕ್ತಿ ಎಷ್ಟು ಆಶ್ಚರ್ಯಕರವಾಗಿತ್ತೆಂದರೆ ಅವನು ಅನೇಕ ಭಾರಿ ಇತಿಹಾಸ ಗ್ರಂಥಗಳನ್ನು ಮೂಲಾಧಾರ ಪುಸ್ತಕವಾವುದನ್ನೂ ಒಂದು ಸಾರಿಯಾದರೂ ತಿರುಗಿ ನೋಡದೆ ರಚಿಸಿದನು. ಅವನು ಎಂಥ ಪ್ರಚಂಡನಾಗಿದ್ದನೆಂದರೆ ಪುಸ್ತಕದ ಯಾವ ಪುಟವನ್ನಾದರೂ ಕ್ಷಣದರ್ಶನ ಮಾಡಿದರೆ ಆ ಪುಟದ ಸಂಗತಿಗಳೆಲ್ಲ ಅವನ ಮೆದುಳಿನಲ್ಲಿ ತತ್‌ಕ್ಷಣ ವಿಲೀನವಾಗುತ್ತಿದ್ದವು. ಒಂದು ಪಂದ್ಯವನ್ನು ಗೆಲ್ಲಲು ಅವನು ಮಿಲ್ಟನ್ನನ Paradise Lost ಎಂಬ ಕಾವ್ಯವನ್ನು ಒಂದು ರಾತ್ರಿಯಲ್ಲಿ ಕಲಿತನೆಂದು ಹೇಳುತ್ತಾರೆ. Paradise Lost ಮತ್ತು ಬನಿಯನ್ನನ Pilgrim's Progress ಎಂಬ ಗ್ರಂಥಗಳು ಪ್ರಪಂಚದಲ್ಲಿ ಒಂದು ನಕಲೂ ಇಲ್ಲದಂತೆ ನಾಶವಾಗಿಹೋದರೆ ತಾನು ಅವುಗಳನ್ನು ತನ್ನ ಜ್ಞಾಪಕ ಶಕ್ತಿಯಿಂದ ಪುನರುತ್ಪತ್ತಿ ಮಾಡಬಲ್ಲೆನೆಂಬ ಅವನ ಹೇಳಿಕೆ ಪ್ರಸಿದ್ಧವಾಗಿದೆ. ಲಿಯೋನ್ ಗ್ಯಾಂಬೆಟ್ಟಾ ಎಂಬ ಫ್ರಾನ್ಸ್ ದೇಶದ ರಾಜನೀತಿಜ್ಞನು ವಿಕ್ಟರ್ ಹ್ಯೂಗೊ ಎಂಬ ಜಗತ್ಪ್ರಸಿದ್ಧ ಕಾದಂಬರಿಕಾರನ ಗ್ರಂಥಮಾಲೆಗಳನ್ನು ಹಿಂದಿನಿಂದ ಮುಂದಕ್ಕೂ, ಮುಂದಿನಿಂದ ಹಿಂದಕ್ಕೂ ಬಾಯಿಪಾಠ ಹೇಳುತ್ತಿದ್ದನು.

ಡಾಕ್ಟರ್ ಬ್ರೂನೊ ಫರ್‌ಸ್ಟ್ ಎಂಬುವನು ಜ್ಞಾಪಕ ಶಕ್ತಿಯ ಭಾರಿ ವ್ಯಕ್ತಿಗಳಲ್ಲಿ ಅಗ್ರಗಣ್ಯನು. ಅವನ ನೆನಪು ಫೋಟೋ ಸದೃಶವಾಗಿದೆ. ಕಲಸಿದ ಇಸ್ಪೀಟು ಎಲೆಗಳ ಕಟ್ಟನ್ನು ಒಂದು ಕ್ಷಣ ನೋಡಿ ಮುಚ್ಚಿಟ್ಟು ಆ ಎಲೆಗಳು ಯಾವ ಕ್ರಮಾಗತಿದಲ್ಲಿವೆಯೆಂಬುದನ್ನು ಬಹು ಸುಲಭವಾಗಿ ಹೇಳಬಲ್ಲನು. ಯಾವುದಾದರೂ ವಾರ್ತಾಪತ್ರಿಕೆಯ ಅಥವಾ ಟೆಲಿಫೋನ್ ಪುಸ್ತಕದ ಒಂದು ಪುಟವನ್ನು ಅವನಿಗೆ ಕ್ಷಣಕಾಲ

ತೋರಿಸಿ ಅದನ್ನು ಮುಚ್ಚಿಟ್ಟರೆ, ಆ ಪುಟದಲ್ಲಿದ್ದುದನ್ನೆಲ್ಲಾ ಅವನು ಪೂರ್ತಿ ಪದಾನುಪದವಾಗಿ ಹೇಳಬಲ್ಲನು. ಅವನು ರೈಲಿನಲ್ಲಿ ಪ್ರಯಾಣ ಮಾಡುವಾಗ ಅನೇಕ ವೇಳೆ ಬಹು ವರ್ಷಗಳ ಹಿಂದೆ ಓದಿದ್ದ ಪೂರಾ ಪುಸ್ತಕಗಳನ್ನು ಸ್ಮೃತಿಗೆ ತಂದುಕೊಂಡು ತನ್ನ ಕಾಲವನ್ನು ಕಳೆಯುತ್ತಾನೆ.

ಇಲ್ಯಜಾ ಎಂಬ ಯಹೂದಿ ಅರ್ಚಕನು ತಾನು ಓದಿದ್ದ ಎರಡು ಸಾವಿರ ಗ್ರಂಥಗಳ ಪ್ರತಿಯೊಂದು ಶಬ್ದವನ್ನೂ ನೆನಪಿಗೆ ತರುತ್ತಿದ್ದನು. ಅವನಿಗೆ ಒಂದು ಕಷ್ಟವೇನಿತ್ತೆಂದರೆ, ತಾನು ಓದಿದ್ದರಲ್ಲಿ ಕೆಲವು ಭಾಗಗಳನ್ನು ಮರೆತುಬಿಡಬೇಕೆಂದು ಇಷ್ಟಪಟ್ಟರೂ ಅವುಗಳನ್ನು ಮರೆಯಲು ಆಗಲಿಲ್ಲ. ಅನೇಕ ಶತಮಾನಗಳು ನ್ಯಾಯಶಾಸ್ತ್ರವನ್ನು ಬೋಧಿಸುತ್ತಿದ್ದುದು ಬಿಹಾರ್ ಪ್ರಾಂತದ ಮಿಥಿಲಾ ವಿದ್ಯಾಲಯದಲ್ಲಿ ಮಾತ್ರ. ಅಂಥ ಶಾಲೆಯು ಮತ್ತೆಲ್ಲಿಯಾದರೂ ಎಲ್ಲಿ ಸ್ಥಾಪಿಸಲ್ಪಡುವುದೋ ಎಂಬ ಹೊಟ್ಟೆಕಿಚ್ಚಿನಿಂದ, ವಿದ್ಯಾರ್ಥಿಗಳು ಶಿಕ್ಷಣ ಮುಗಿಸಿ ಆ ಶಾಲೆಯನ್ನು ಬಿಟ್ಟು ಹೋಗುವ ವೇಳೆಯಲ್ಲಿ ಯಾವ ಪುಸ್ತಕವನ್ನೇ ಆಗಲಿ ಕಾಗದದ ಮೇಲೆ ಬರೆದುಕೊಂಡಿದ್ದ ಟಿಪ್ಪಣಿಗಳನ್ನೇ ಆಗಲಿ ತಮ್ಮ ಜೊತೆಯಲ್ಲಿ ಖಂಡಿತ ತೆಗೆದುಕೊಂಡು ಹೋಗಕೂಡದೆಂದು ಶಾಲೆಯ ಅಧಿಕಾರಿಗಳು ವಿಧಿಸಿದ್ದರು. ಬಂಗಾಲದ ನವದ್ವೀಪದ ರಘುನಾಥ ಎಂಬುವನು ೪೫೦ ವರ್ಷಗಳ ಹಿಂದೆ ಮಿಥಿಲೆಯ ಶಾಲೆಯಲ್ಲಿ ವಿದ್ಯಾರ್ಥಿಯಾಗಿದ್ದಾಗ ತನ್ನ ಜ್ಞಾಪಕ ಶಕ್ತಿಯಿಂದ ಅಲ್ಲಿ ಅಧ್ಯಯನ ಮಾಡಿದ್ದ ಪ್ರತಿಯೊಂದು ಶಬ್ದವನ್ನೂ ಸ್ಮೃತಿಯಲ್ಲಿಟ್ಟುಕೊಂಡು, ತನ್ನೂರಿಗೆ ಹಿಂತೆರಳಿದ ನಂತರ ಬೇಕಾದ ಗ್ರಂಥಗಳನ್ನೆಲ್ಲಾ ರಚಿಸಿ ಅಂಥ ಶಾಲೆಗಳನ್ನು ಸ್ಥಾಪಿಸಲು ಸಾಧ್ಯವಾಗುವಂತೆ ಮಾಡಿದನು.

ಸಂಖ್ಯೆಗಳನ್ನು ನೆನಪಿನಲ್ಲಿಡುವುದರಲ್ಲಿ ಕೆಲವರು ಅಗಾಧ ಶಕ್ತಿಯನ್ನು ತೋರಿಸುತ್ತಾರೆ. ಜರ್ಮನಿ ದೇಶದ ರಕಲ್ (Ruckle) ಎಂಬ ವಿದ್ಯಾರ್ಥಿಯು ಪ್ರಾಯೋಗಿಕ ಮನಶ್ಶಾಸ್ತ್ರದ ಒಂದು ಅಂತಾರಾಷ್ಟ್ರೀಯ ಮಹಾಸಭೆ (International Congress for Experimental Psychology) ಯಲ್ಲಿ ೨೦೪ ಬೇರೆ ಬೇರೆ ಸಂಖ್ಯೆಗಳನ್ನು ಹದಿಮೂರು ನಿಮಿಷಗಳಲ್ಲಿ ಮನದಟ್ಟು ಮಾಡಿ ಪ್ರೇಕ್ಷಕರೆಲ್ಲರನ್ನೂ ಬೆರಗುಗೊಳಿಸಿದನು. ಡಾ. ಸಾಲೊ ಫಿಂಕಲ್‌ಸ್ಟೈನ್ (Dr. Salo Finkelstein) ಎಂಬ ಪೋಲೆಂಡ್ ದೇಶದ ಗಣಿತ ಶಾಸ್ತ್ರಜ್ಞನು ೬೨೪೭೦೬೮೪೫೯೮೬೧೯೩೨೬೧೭೪೧ ಎಂಬ ಸಂಖ್ಯೆಯನ್ನು ನಾಲ್ಕುವರೆ ಸೆಕಂಡ್‌ಗಳಲ್ಲಿ ಬಾಯಿಪಾಠ ಮಾಡಿದನು. ಓಹಿಯೊ ಸ್ಟೇಟ್ ವಿಶ್ವವಿದ್ಯಾಲಯದ ಒಬ್ಬ ವಿದ್ಯಾರ್ಥಿಯು ಈ ಸಾಹಸವನ್ನೂ ಮೀರಿಸಿ ೨೧ ಅಂಕೆಗಳ ಸಂಖ್ಯೆಯನ್ನು ೪.೩೭ ಸೆಕೆಂಡ್‌ಗಳಲ್ಲಿ ಮನದಟ್ಟು ಮಾಡಿಕೊಂಡನು.

ಸಂಖ್ಯೆಗಳನ್ನು ಜ್ಞಾಪಕದಲ್ಲಿಡುವುದು ಒಂದು ಮಹಾ ಶಕ್ತಿಯಾದರೂ ಅದರಲ್ಲಿ ವಿಚಿತ್ರವಾದುದೇನೆಂದರೆ ಅನೇಕ ವೇಳೆ ಈ ಶಕ್ತಿಯು ಬಹು ಕಡಿಮೆ ವಿದ್ಯಾಭ್ಯಾಸವಿರುವವರಲ್ಲಿ ಕಂಡುಬಂದಿದೆ. ಟಾಂ ಫುಲ್ಲರ್ ಎಂಬ ನಿರಕ್ಷರ ಕುಕ್ಷಿಯಾದ ನೀಗ್ರೊ ಗುಲಾಮನು ವರ್ಜೀನಿಯಾದ ಒಂದು ತೋಟದ ವಸ್ತಿಯಲ್ಲಿ ಲೆಕ್ಕ ಮಾಡುವ ಯಂತ್ರದಂತೆ ಕೆಲಸ ಮಾಡಲು ನೇಮಿಸಲ್ಪಟ್ಟಿದ್ದನು. ಅವನ ಸಾಮರ್ಥ್ಯವನ್ನು ಪರೀಕ್ಷಿಸಲು, ೭೦ ವರ್ಷ, ೧೭ ದಿವಸ ಮತ್ತು ೧೨ ಗಂಟೆಗಳಲ್ಲಿ ಎಷ್ಟು ಸೆಕಂಡ್‌ಗಳಿವೆ ಎಂಬ ಪ್ರಶ್ನೆಯನ್ನು ಅವನಿಗೆ ಹಾಕಿದಾಗ, ಅವನು ಬಾಯಲ್ಲಿ ಲೆಕ್ಕ ಹಾಕಿ, ಫೆಬ್ರುವರಿ ತಿಂಗಳಲ್ಲಿ ೨೯ ದಿನಗಳಿರುವುದನ್ನೂ ಗಣಿಸಿ, ಒಂದೂವರೆ ನಿಮಿಷಗಳಲ್ಲಿ ಉತ್ತರ ಹೇಳಿದನು. ಓದು

ಬರಹವನ್ನೂ ಅರಿಯದ ಜೆಡೆದಿಯಾ ಬಕ್ಸ್ಟನ್ ( Jedediah Buxton ) ಎಂಬ ಇಂಗ್ಲೀಷ್‌ರವನಿಗೆ ಮಾನಸಿಕ ಗಣಿತದಲ್ಲಿ ಎಷ್ಟು ಪ್ರಚಂಡವಾದ ಸಾಮರ್ಥ್ಯವಿತ್ತೆಂದರೆ, ಅವನಿಗೆ "ನಿರಕ್ಷರ ಕುಕ್ಷಿಯಾದ ಲೆಕ್ಕಗಾರ" (illiterate Calculater) ನೆಂಬ ಅಡ್ಡ ಹೆಸರು ಬಂದಿತ್ತು. ಚಿಕ್ಕಂದಿನಿಂದಲೂ ಅವನಲ್ಲಿ ಒಂದು ವಿಶೇಷ ಗುಣವಿತ್ತು. ಅದೇನೆಂದರೆ ಅವನು ಯಾವ ಹೊಲ, ಗದ್ದೆ, ಆಟದ ಭೂಮಿಯ ಸುತ್ತ ಹೋದರೆ, ಆ ಕ್ಷೇತ್ರದಲ್ಲಿ ಎಷ್ಟು ಚದರಂಗುಲ (Square inches) ಗಳಿವೆ ಎಂಬುದನ್ನು ಅವನ ಮನಸ್ಸು ಸ್ವಯಂಪ್ರೇರಿತವಾಗಿ (automatic) ಗುಣಿಸುತ್ತಿತ್ತು. ಯಾರಾದರೂ ಉಪನ್ಯಾಸ ಮಾಡುವುದನ್ನು ಅವನು ಕೇಳುತ್ತಿದ್ದಾಗ, ಆ ಭಾಷಣದಲ್ಲಿ ಎಷ್ಟು ಶಬ್ದಗಳಿವೆ ಎಂಬುದನ್ನು ಹುಡುಕಲು ಅವನ ಮನಸ್ಸಿಗೆ ತಾನೇತಾನಾಗಿ ಪ್ರೇರಣೆ ಬರುತ್ತಿತ್ತು. ಯಾರಾದರೂ ಅವನೆದುರಿಗೆ ಕಾಲದ ಅವಧಿಯನ್ನು ಉಲ್ಲೇಖಿಸಿದರೆ, ಅದರಲ್ಲಿ ಎಷ್ಟು ಸೆಕಂಡ್‌ಗಳಿವೆ ಎಂಬುದನ್ನು ಅವನ ಮನಸ್ಸು ಕೂಡಲೇ ಅಂತಃಸ್ಫೂರ್ತಿಯಿಂದ ( instinctively) ಗುಣಿಸುತ್ತಿತ್ತು. ಒಮ್ಮೆ ಅವನು ಫಾರ್ದಿಂಗ್ ಎಂಬ ಇಂಗ್ಲೀಷ್ ನಾಣ್ಯದ ಬೆಲೆಯನ್ನು ಮನಸ್ಸಿನಲ್ಲೇ ೧೩೯ ಬಾರಿ ದ್ವಿಗುಣಮಾಡಿ ದಿಗ್ಭ್ರಮೆಗೊಳಿಸುವಷ್ಟು ದೊಡ್ಡ ಸಂಖ್ಯೆಗಳ ಸಾಲನ್ನು ಪಡೆದನು. ಅದನ್ನು ಪೌಂಡ್‌ಗಳಿಗೆ ರೂಪಾಂತರಿಸಲು ೩೯ ಅಂಕಿಗಳುಳ್ಳ ಒಂದು ಅಗಾಧ ಸಂಖ್ಯೆಯು ಬಂದಿತು. ಆ ಸಂಖ್ಯೆಯನ್ನು ಹತ್ತು ವಾರಗಳ ಕಾಲ ಆಗಿಂದಾಗ್ಗೆ ಮನಸ್ಸಿನಲ್ಲೇ ಗುಣಿಸಿ ಅದರ ದ್ವಿಘಾತ ( Square ) ವನ್ನು ಕಂಡುಹಿಡಿದನು. ಇದು ನಿಜವಾಗಿಯೂ ಅದ್ಭುತ ಸಾಹಸ ಕಾರ್ಯ.

ಸೋಮೇಶಚಂದ್ರ ಬಸು ಎಂಬ ಗಣಿತ ಶಾಸ್ತ್ರಜ್ಞನು ಭಾರಿ ಪ್ರಶ್ನೆಗಳಿಗೆ ಮಿಂಚಿನ ವೇಗದಲ್ಲಿ ಉತ್ತರ ಕೊಡುತ್ತಿದ್ದನು. ೧೯೨೨ ಮತ್ತು ೧೯೨೮ ನೇ ಇಸವಿಗಳಲ್ಲಿ ಅಮೇರಿಕಾ ಮತ್ತು ಯುರೋಪ್ ದೇಶಗಳಲ್ಲಿ ಅತಿರೇಕದ ಬಹು ದೊಡ್ಡ ಅಂಕೆಗಳ ಸಾಲಿನ ೧೦೯ ನೇ ಮೂಲವನ್ನು ( Root ) ಕೆಲವು ಸೆಕೆಂಡ್‌ಗಳಲ್ಲೇ ಬಾಯಲ್ಲಿ ಹೇಳುವ ಶಕ್ತಿಯನ್ನು ಪ್ರದರ್ಶಿಸಿದನು. ಪ್ರದರ್ಶನದಲ್ಲಿ ನೆರೆದಿದ್ದ ಪ್ರೇಕ್ಷಕರು ಅವನ ಲಕ್ಷ್ಯವನ್ನು ಭಂಗಪಡಿಸಲು ಉದ್ದೇಶಪೂರ್ವಕವಾಗಿ ಭಯಂಕರ ಗಲಭೆ ಮಾಡಿದರೂ ಅವನು ಅದಾವುದನ್ನೂ ಲಕ್ಷಿಸದೆ ಏಕಾಗ್ರಚಿತ್ತದಿಂದ ೧೦೦ ಅಂಕೆಗಳುಳ್ಳ ಎರಡು ಸಂಖ್ಯೆಗಳ ಗುಣಾಕಾರವನ್ನು ೫೨॥ ನಿಮಿಷಗಳಲ್ಲಿ ಮನಸ್ಸಿನಲ್ಲಿ ಮಾಡಿ ಮುಗಿಸುತ್ತಿದ್ದನು. ಈಚೀಚೆಗೆ ಬಂದ ವಿದ್ಯುಚ್ಛಕ್ತಿಯಿಂದ ಶೀಘ್ರವಾಗಿ ಲೆಕ್ಕ ಮಾಡುವ ಯಂತ್ರಗಳೂ ಕೂಡ ಅಷ್ಟು ಭಾರಿ ಭಾರಿ ಸಂಖ್ಯೆಗಳ ಕೆಲಸವನ್ನು ಒಂದು ಗಂಟೆಗಿಂತ ಮುಂಚೆ ಮಾಡಲಾರವು. ಬೆಂಗಳೂರಿನ ಶಕುಂತಲಾದೇವಿಯವರಿಗೆ ಲೆಕ್ಕಮಾಡುವ ಯಂತ್ರದಂಥ ಜ್ಞಾಪಕ ಶಕ್ತಿಯಿದೆ. ಸಾಧಾರಣ ಮನುಷ್ಯನು ಕೆಲವು ಗಂಟೆಗಳಲ್ಲಿ ಮಾಡತಕ್ಕ ಕಠಿನವಾದ ತೊಡಕಿನ ಲೆಕ್ಕಗಳಿಗೆ ಉತ್ತರಗಳನ್ನು ಅವರು ಕಣ್ಣುರೆಪ್ಪೆ ಮುಚ್ಚುವುದರೊಳಗಾಗಿ ಹೇಳಿ ಬಿಡುತ್ತಾರೆ. ಪ್ರೇಕ್ಷಕರಲ್ಲಿ ಯಾರಾದರೂ ಇಂಥಿಂಥ ತಾರೀಖುಗಳಲ್ಲಿ ಯಾವ ಯಾವ ದಿನಗಳು ಬೀಳುತ್ತವೆ ಎಂಬ ಪ್ರಶ್ನೆಯನ್ನು ಕರೀ ಹಲಗೆಯ ಮೇಲೆ ಬರೆದು ಮುಗಿಸುವುದಕ್ಕೆ ಮುಂಚೆಯೇ ಆಕೆಯು ಉತ್ತರವನ್ನು ಹೇಳುತ್ತಾಳೆ.

ಒಳ್ಳೆ ಜ್ಞಾಪಕಶಕ್ತಿಯಿದ್ದ ಮಾತ್ರಕ್ಕೆ ಆ ಮನುಷ್ಯನು ಮೇಧಾವಿಯೆಂದು ಹೇಳುವುದಕ್ಕಾಗುವುದಿಲ್ಲ. ೧೮ ನೆ ಶತಮಾನದಲ್ಲಿ 'ಮೆಮರಿ' ಥಾಂಪ್ಸನ್ ("Memory" Thompson) ಎಂಬ ಬ್ರಿಟಿಷ್ ವೈದ್ಯನು ಜ್ಞಾಪಕಶಕ್ತಿಯ ಬಹು ಚಮತ್ಕಾರ ಸಾಹಸ ಕೃತ್ಯಗಳನ್ನು ತೋರಿಸಿದರೂ, ಇತರ ವಿಷಯಗಳಲ್ಲಿ ಅವನು ಸಾಧಾರಣ ಮನುಷ್ಯನೇ ಆಗಿದ್ದನು. ಕೆಲವು

ವರ್ಷಗಳ ಕೆಳಗೆ ಸುಮಾರು ೩೦೦ ಮಂದಿ ಪ್ರತಿಭಾಶಾಲಿಗಳ ವಿಷಯವನ್ನು ವಿಚಾರ ಮಾಡಲು ಅವರ ಪೈಕಿ ಇಪ್ಪತ್ತಕ್ಕಿಂತಲೂ ಕಡಿಮೆ ಮಂದಿಗೆ ತೀಕ್ಷ್ಣವಾದ ಜ್ಞಾಪಕ ಶಕ್ತಿಯಿತ್ತೆಂದು ತಿಳಿಯಬಂದಿತು. ಕೆಲವು ಸಲ ಜ್ಞಾಪಕಶಕ್ತಿಯಲ್ಲಿ ಪ್ರವೀಣರಾದವರೂ ಪರಿಪೂರ್ಣರಾಗಿರುವುದಿಲ್ಲ. ಒಬ್ಬ ಅಮೇರಿಕದ ವಿದ್ಯಾರ್ಥಿಗೆ ಅವನ ಅಸಾಧಾರಣ ಜ್ಞಾಪಕ ಶಕ್ತಿಗಾಗಿ ಇಂಗ್ಲಂಡಿನಲ್ಲಿ ಎರಡು ವರ್ಷ ವ್ಯಾಸಂಗ ಮಾಡುವುದಕ್ಕಾಗಿ ವಿದ್ಯಾರ್ಥಿವೇತನವು ದೊರೆಯಿತು. ಅವನು ಸಮುದ್ರಯಾನಕ್ಕೆ ಹೊರಟು ಸೌಥಾಪ್ಟನ್‌ಗೆ ಬಂದು ತಲುಪಿದಾಗ ಪರವಾನೆ (Pass-port) ತರುವುದನ್ನು ಮರೆತು ಬಿಟ್ಟಿದ್ದನೆಂದು ಗೊತ್ತಾಗಿ, ಅಲ್ಲಿ ಇಳಿಯಲು ಅನುಮತಿ ಸಿಕ್ಕದೆ ಹಿಂತಿರುಗಿ ಹೋಗಬೇಕಾಯಿತು!

ಒಬ್ಬ ಯಹೂದಿ ಅರ್ಚಕನು ಹೀಬ್ರೂ (Hebrew) ಭಾಷೆಯ ತನ್ನ ಧಾರ್ಮಿಕ ಗ್ರಂಥಗಳನ್ನು ಗಟ್ಟಿಯಾಗಿ ಅಧ್ಯಯನ ಮಾಡುತ್ತಿದ್ದಾಗ, ಓದು ಬರಹ ಗೊತ್ತಿಲ್ಲದೆ ಅಜ್ಞಾನಿಯಾಗಿದ್ದ ಚಾಕರಳೊಬ್ಬಳು ಆ ಶಬ್ದಗಳನ್ನು ದೂರದಿಂದ ಕೇಳಿ ಅವುಗಳ ಅರ್ಥವೇ ಗೊತ್ತಿಲ್ಲದಿದ್ದರೂ ಗ್ರಂಥಗಳ ಯಾವ ವಚನವನ್ನೂ ಒಂದು ಶಬ್ದ ಬಿಡದಂತೆ ಅಕ್ಷರಶಃ ಪುನರುಚ್ಚರಿಸುತ್ತಿದ್ದಳು. ಇನ್ನೂರು ವರ್ಷಗಳ ಹಿಂದೆ ಜಗನ್ನಾಥ ತರ್ಕಪಂಚಾನನ ಎಂಬ ವೃದ್ಧನು ತ್ರಿವೇಣಿಯಲ್ಲಿ ಸ್ನಾನಮಾಡುತಿದ್ದಾಗ, ನದಿಯ ದಂಡೆಯ ಮೇಲೆ ನಿಂತಿದ್ದ ಇಬ್ಬರು ಇಂಗ್ಲೀಷ್ ರವರು ವ್ಯಾಜ್ಯವಾಡುತ್ತಾ, ಕಾದಾಟಕ್ಕೆತೊಡಗಿ ಮುಷ್ಟಿಯುದ್ಧ ಮಾಡಿದರು. ಈ ಮೊಕದ್ದಮೆ ನ್ಯಾಯಸ್ಥಾನಕ್ಕೆ ಹೋಗಿ ಅಲ್ಲಿ ಆ ವೃದ್ಧನು ಸಾಕ್ಷಿಗಾರನಾಗಿ ಬಂದು ನಿಲ್ಲಬೇಕಾಯಿತು. ಅವನ ಜ್ಞಾಪಕಶಕ್ತಿಯು ಎಷ್ಟು ಅದ್ಭುತವಾಗಿತ್ತೆಂದರೆ, ಅವನಿಗೆ ಒಂದು ಇಂಗ್ಲೀಷ್ ಶಬ್ದದ ಅರ್ಥವೂ ಗೊತ್ತಿಲ್ಲದಿದ್ದರೂ ಆ ಇಬ್ಬರು ಮನುಷ್ಯರ ಜಗಳಾಟದ ಮಾತುಗಳಲ್ಲಿ ತನ್ನ ಕಿವಿಗೆ ಬಿದ್ದಿದ್ದ ಪ್ರತಿಯೊಂದು ಶಬ್ದವನ್ನೂ ಪದಾನುಪದವಾಗಿ ತಿಳಿಯಪಡಿಸಿದನು. ಅದೇ ಕಾಲದಲ್ಲಿ ಜೀವಿಸಿದ್ದ ಪಂಡಿತ ಬಾಣೇಶ್ವರ ವಿದ್ಯಾಲಂಕಾರ ಎಂಬ ವಿದ್ವಾಂಸನಿಗೂ ಅಸಾಮಾನ್ಯ ಸ್ಮೃತಿ ಶಕ್ತಿಯಿತ್ತು. ಅವನು ಹನ್ನೆರಡು ವರ್ಷದ ಬಾಲಕನಾಗಿದ್ದಾಗ ೧೦೩ ಪದ್ಯಗಳಿದ್ದ ಒಂದು ಸಂಸ್ಕೃತ ಗೀತವನ್ನು ಯಾರೋ ಕಥನ ಮಾಡಿದ್ದನ್ನು ಒಂದೇ ಬಾರಿ ಕೇಳಿ, ಅವುಗಳನ್ನೆಲ್ಲಾ ಸಂಪೂರ್ಣವಾಗಿ ತನ್ನ ಬಾಯಿಂದ ಹೇಳತೊಡಗಿದನು.

ಅದ್ಭುತ ಅವಧಾನಶಕ್ತಿಯುಳ್ಳ ಕೆಲವರ ಸಾಹಸ ಕೃತ್ಯಗಳು ಬಹು ಮನೋರಂಜಕವಾಗಿವೆ. ಚದುರಂಗದಾಟದಲ್ಲಿ ನಿಪುಣನಾದ ಹ್ಯಾರಿ ನೆಲ್ಸನ್ ಪಿಲ್ಸ್‌ಬರಿ ಎಂಬ ಅಮೇರಿಕನ್ನನು ಕಣ್ಣು ಕಟ್ಟಿಕೊಂಡು ಇಪ್ಪತ್ತು ಮಂದಿ ಪ್ರತಿಕಕ್ಷಿಗಳೊಡನೆ ಒಂದೇ ಕಾಲದಲ್ಲಿ ಆಟವಾಡುತ್ತಾ ಬೇರೆ ಬೇರೆ ಚದುರಂಗದ ಹಲಗೆಗಳ ಮೇಲೆ ಮಾಡಿದ ಚಲನೆಗಳನ್ನೂ ಪ್ರತಿ ಚಲನೆಯ ನಂತರ ಚದುರಂಗದ ೩೨ ಕಾಯಿಗಳು ಯಾವ ಯಾವ ಸ್ಥಳಾಂತರಗಳನ್ನು ಹೊಂದಿವೆ ಎಂಬುದನ್ನೂ ನೆನಪಿನಲ್ಲಿಟ್ಟು, ೨೦ ಹಲಗೆಗಳ ಮೇಲಿರುವ ಸಂಪೂರ್ಣ ಪರಿಸ್ಥಿತಿಯ ಅಸಂದಿಗ್ಧ ಚಿತ್ರವನ್ನು ತನ್ನ ಮನಸ್ಸಿನಲ್ಲಿ ಸ್ಥಿರವಾಗಿ ನೆಟ್ಟಿರುತ್ತಿದ್ದನು. ನೆಪೋಲಿಯನ್ ಬೋನಾಪಾರ್ಟನು ತನ್ನ ಹನ್ನೆರಡು ಮಂದಿ ಕಾರ್ಯದರ್ಶಿಗಳಿಗೆ ಹನ್ನೆರಡು ಬೇರೆ ಬೇರೆ ಕಾಗದಗಳನ್ನು ಒಂದೇ ಕಾಲದಲ್ಲಿ ಹೇಳಿ ಬರೆಯಿಸುತ್ತಿದ್ದನು.

ಒಂದು ಪತ್ರಿಕಾ ಪರಿಷತ್ತಿನಲ್ಲಿ ಜನರಲ್ ಜಾರ್ಜ್ ಮಾರ್ಷಲ್ (General George Marshall) ಎಂಬುವರು ಅಲ್ಲಿ ನೆರೆದಿದ್ದ ಅರವತು ಮಂದಿ ಬಾತ್ಮಿದಾರರಿಗೆ ಪ್ರತಿಯೊಬ್ಬನೂ ತಮ್ಮನ್ನು ಒಂದು ಪ್ರಶ್ನೆ ಕೇಳ

ಬೇಕೆಂದು ಹೇಳಿದರು ಜನರಲ್‌ರವರು ಆ ಅರವತ್ತು ಪ್ರಶ್ನೆಗಳನ್ನೂ ಜ್ಞಾಪಕದಲ್ಲಿಟ್ಟು ಒಂದೊಂದಾಗಿ ಎಲ್ಲಕ್ಕೂ ಉತ್ತರ ಕೊಟ್ಟರು. ಕೆಲವು ಜ್ಞಾಪಕಶಕ್ತಿಯ ಪ್ರವೀಣರು "ಶತಾವಧಾನ" ವೆಂಬ ಆಶ್ಚರ್ಯಕರವಾದ ಸಾಹಸ ಕೃತ್ಯವನ್ನು ಪ್ರದರ್ಶಿಸುತ್ತಾರೆ. ಅಭಿನಯಗಾರನಿಗೆ "ಶತಾವಧಾನಿ" ಎಂದು ಹೆಸರು. ಶತಾವಧಾನಿಯು ಪ್ರೇಕ್ಷಕರಲ್ಲಿ ೧೦೦ ಜನಗಳಿಗೆ ಪ್ರತಿಯೊಬ್ಬನೂ ಒಂದೊಂದು ವಾಕ್ಯ ಅಥವಾ ಸಂಖ್ಯೆಗಳ ಸಾಲನ್ನು ಉಚ್ಚರಿಸಲು ಹೇಳುತ್ತಾನೆ. ಈ ವಾಕ್ಯಗಳು ಗ್ರೀಕ್, ಲ್ಯಾಟಿನ್, ಅಥವ ಅಭಿನಯಗಾರನಿಗೆ ತಿಳಿಯದ ಮತ್ತಾವ ಭಾಷೆಯಲ್ಲಾದರೂ ಇರಬಹುದು. ಮೊದಲನೇ ಸಲ ಪ್ರತಿಯೊಬ್ಬ ಪ್ರೇಕ್ಷಕನೂ ತನ್ನ ವಾಕ್ಯದ ಮೊದಲನೇ ಶಬ್ದವನ್ನು ಹೇಳುತ್ತಾನೆ. ಎರಡನೆ ಸಾರಿ ಎರಡನೆ ಶಬ್ದ; ಅದೇ ರೀತಿ ಅನೇಕ ಸಾರೆ ನಡೆಯುತ್ತದೆ. ಕೊನೆಯಲ್ಲಿ ಶತಾವಧಾನಿಯು ಪ್ರತಿಯೊಬ್ಬ ಪ್ರೇಕ್ಷಕನ ಶಬ್ದಗಳನ್ನೆಲ್ಲಾ ಒಟ್ಟು ಸೇರಿಸಿ ಅವರವರ ವಾಕ್ಯಗಳು ಅಥವಾ ಅಂಕೆಗಳು ಇಂಥಿಂಥಾದ್ದೆಂದು ಹೇಳುತ್ತಾನೆ.

ಈ ಕೆಳಗೆ ಬರೆದಿರುವುದು ಪ್ರಚಂಡ ಜ್ಞಾಪಕ ಶಕ್ತಿಯ ಒಂದು ದೃಷ್ಟಾಂತ. ಲಕ್ನೋ ಪಟ್ಟಣದ ವೃದ್ಧನೂ ಕುರುಡನೂ ಆದ ಧನರಾಜ ಶಾಸ್ತ್ರಿ ಎಂಬ ವಿದ್ವಾಂಸನಿಗೆ ಎಷ್ಟು ಅಪೂರ್ವ ಜ್ಞಾಪಕ ಶಕ್ತಿಯೂ ಅಸಂಖ್ಯಾತವಾದ ನಾನಾ ಜ್ಞಾನ ಶಾಖೆಗಳಲ್ಲಿ ಎಷ್ಟು ಅಗಾಧವಾದ ಪಾಂಡಿತ್ಯವೂ ಇವೆಯೆಂದರೆ, ಆತನು "ನಡೆಯುತ್ತಿರುವ ಸರ್ವವಿದ್ಯಾ ಸಂಗ್ರಹ ಪುಸ್ತಕ" (Walking Cyclopaedia) ವೆಂದು ಎಣಿಸಲ್ಪಟ್ಟಿದ್ದಾನೆ. ಸುಮಾರು-೮೦,೦೦೦ ಸಂಸ್ಕೃತ ಗ್ರಂಥಗಳಿಂದ ನಲವತ್ತು ಲಕ್ಷ ಶ್ಲೋಕಗಳನ್ನು ಬಾಯಿಪಾಠ ಮಾಡಿದಾನೆಂದು ಹೇಳುತ್ತಾರೆ. ಮಾಯಾ ನಿಬಂಧ ಎಂಬ ಪ್ರಾಚೀನ ಗ್ರಂಥದ ಐದು ಸಾವಿರ ಶ್ಲೋಕಗಳನ್ನು ಜ್ಞಾಪಕಶಕ್ತಿಯಿಂದ ಪುನರುತ್ಪತ್ತಿ ಮಾಡಲು ಅಖಿಲಭಾರತ ಸಂಸ್ಕೃತ ಪರಿಷತ್ತಿನವರು ಆತನನ್ನು ನೇಮಿಸಿದ್ದರು. ಕಳೆದು ಹೋಗಿರುವ ಇನ್ನೊಂದು ಪುರಾತನ ಗ್ರಂಥದಿಂದ ಅವನು ೧೬,೦೦೦ ಪದ್ಯಗಳನ್ನು ನಿರ್ಮಿಸಿದ್ದಾನೆ. ತನ್ನ ಚಿಕ್ಕ ವಯಸ್ಸಿನಲ್ಲಿ ಒಂದು ದಿನಕ್ಕೆ ೧೨೦೦-೧೩೦೦ ಶ್ಲೋಕಗಳನ್ನು ಬಾಯಿಪಾಠ ಮಾಡಲು ಶಕ್ತನಾಗಿದ್ದನು. ತನ್ನ ಒಂದೂವರೆ ವರ್ಷ ವಯಸ್ಸಿನಿಂದ ಕುರುಡನಾಗಿದ್ದರೂ ಆತನು ಬನಾರಸ್ ವಿಶ್ವವಿದ್ಯಾಲಯದಿಂದ ಮೂರು ಡಿಗ್ರಿಗಳನ್ನು ಪಡೆದಿದ್ದಾನೆ. ನ್ಯಾಫೆನ್ (Nafen) ಸುದ್ದಿಸಂಸ್ಥೆಯ ಸುದ್ದಿಗಾರನೆದುರಿನಲ್ಲಿ ತಾನು ಬಾಯಿಪಾಠ ಮಾಡಿರುವ ಗ್ರಂಥಗಳು, ನಕ್ಷತ್ರಶಾಸ್ತ್ರ, ವ್ಯವಸಾಯಶಾಸ್ತ್ರ, ಚಿತ್ರಕಲೆ, ನರ್ತನ, ಸಂಗೀತ, ಛಾಯಾಚಿತ್ರ, ಭೌತಿಕಶಾಸ್ತ್ರ, ವೈಮಾನಿಕ ಕಲೆ ಮತ್ತು ಇತರ ಅನೇಕ ವಿಷಯಗಳನ್ನು ಒಳಪಟ್ಟಿವೆಯೆಂದು ಗೊತ್ತಾಯಿತು. *



**ಪೋಲೀಸ-** ಈತ ಹಣ್ಣಿನಂಗಡಿಯಲ್ಲಿ ಎರಡು ಬಾಳೆ ಹಣ್ಣುಗಳನ್ನು ಕೈಹಾಕಿ ತೆಗೆದುಕೊಂಡು ತಿಂದಿದ್ದಾನೆ.

**ಮ್ಯಾಜಿಸ್ಟ್ರೇಟ-** ಪೋಲೀಸರಂತೆಯೆ ವರ್ತಿಸುವುದು ಮಹಾಪರಾಧವಾದ್ದರಿಂದ ಈತನಿಗೆ ಎರಡು ವರ್ಷ ಶಿಕ್ಷೆ ವಿಧಿಸಿದ್ದೇನೆ.




ಅಲ್ಲಿ ಪ್ರಪಂಚದ ಅತಿ ಪ್ರಾಚೀನ
ಪಾರ್ಲಿಮೆಂಟು ಇದೆ

# ಐಸ್‌ಲಂಡ್

ವಿವಿಧ ಮೂಲಗಳಿಂದ

ಐಸ್‌ಲಂಡ್ (ಹಿಮದ್ವೀಪ) ವೆಂಬ ಹೆದರಿಸುವ ಹೆಸರನ್ನಿಟ್ಟುಕೊಂಡ ದ್ವೀಪರಾಜ್ಯವು ನವಮೈಸೂರಿನ ಅರ್ಧದಷ್ಟು (೩೯,೭೬೮ ಚದುರ ಮೈಲು) ವಿಸ್ತಾರ, ಹುಬ್ಬಳ್ಳಿ ನಗರದಷ್ಟು (೧,೭೦,೦೦೦) ಜನಸಂಖ್ಯೆ, ಆದರೆ ತನ್ನದೇ ಸ್ವಂತ ಭಾಷೆ ಮತ್ತು ತನ್ನದೇ ಸ್ವಂತ ನೋಬೆಲ್ ಪಾರಿತೋಷಕಪಡೆದ ಸಾಹಿತಿಯನ್ನೊಡಗೊಂಡ ದೇಶವಾಗಿದೆ. ಅದರ ಪಾರ್ಲಿಮೆಂಟು (ಹೆಸರು "ಅಲ್ತಿಂಗ್") ಜಗತ್ತಿನ ಅತಿ ಪ್ರಾಚೀನ ಪಾರ್ಲಿಮೆಂಟಾಗಿದೆ. (ಅದು ಕ್ರಿ. ಶ. ೯೩೦ ನೇ ವರ್ಷದಲ್ಲಿ ಪ್ರಾರಂಭವಾಗಿ ಪ್ರತಿವರ್ಷ ಜುಲೈಯಲ್ಲಿ ಸೇರುತ್ತ ಬಂದಿದೆ). ಅಲ್ಲಿ ಸೈನ್ಯವಿಲ್ಲ— ಮತ್ತು ಅದು ಸೈನಿಕ ಸಮವಸ್ತ್ರವನ್ನು ನೋಡಿದರೆ ಮೆಚ್ಚುವುದಿಲ್ಲ.

ಐಸ್‌ಲಂಡಿನ ವಿಷಯ ಹೊರ ಜಗತ್ತಿಗೆ ತಿಳಿದಿರುವುದು ಅತ್ಯಲ್ಪ. ಅದರ ಹೆಸರು ಕೇಳಿಯೆ ಪ್ರವಾಸಿಕರು ಅಂಜಬೇಕು. ಅಲ್ಲಿ ಹಿಮ ಮತ್ತು ಬರ್ಫ್ ಸಾಕಷ್ಟಿರುವುದು ನಿಜ, ಆದರೆ ಐಸ್‌ಲಂಡ್ ಎಂಬ ಹೆಸರು ಅದಕ್ಕೆ, ಹಿಂದಿನ ಯುಗದಲ್ಲಿ, ಅದರ ಮೈ ಮೇಲೆ ಮೂರು ಫರ್ಲಾಂಗ್ ದಪ್ಪದ ಹಿಮದಹಾಳೆ ಹೊಚ್ಚಿದ್ದಾಗಷ್ಟೆ, ಸಾರ್ಥಕವಾಗುತ್ತಿತ್ತಲ್ಲದೆ ಇವೊತ್ತಿಗಲ್ಲ. ಇಂದು ಅದರ ಹವೆ ಅಷ್ಟು ಶೀತವಾಗಿಲ್ಲ. ಚಳಿಗಾಲ-ಬೇಸಗೆಗಳ ಶೀತೋಷ್ಣಗಳ ಅಂತರವೂ ಅಸಹನೀಯವಾಗಿಲ್ಲ. ನಿಜವಾಗಿ ಇಲ್ಲಿ ಮೊದಲು ನೆಲಸಿದವರು ಈ ದ್ವೀಪವನ್ನು ಎಷ್ಟು ಮೆಚ್ಚಿಕೊಂಡರೆಂದರೆ ಹೆಚ್ಚು ಜನ ವಸಾಹತುಗಾರರು ಬಂದು ತಮ್ಮ ಗುತ್ತಿಗೆ ಮುರಿದಾರೆಂಬ ಭಯದಿಂದ ಅದಕ್ಕೆ ಐಸ್‌ಲಂಡ್ ಎಂಬ ಹೆಸರು ಕೊಟ್ಟರೆಂದು ಹೇಳುವವರಿದ್ದಾರೆ!

ಐಸ್‌ಲಂಡಿನ ಇತಿಹಾಸವು ನಮ್ಮ ನೃಪತುಂಗ ತನ್ನ "ಕವಿರಾಜ ಮಾರ್ಗ"ವನ್ನು ಬರೆದು ಅರ್ಧ ಶತಕ ದಾಟಿದ ಮೇಲೆ ಪ್ರಾರಂಭವಾಯಿತಷ್ಟೇ. ಕ್ರಿ. ಶ. ೮೭೪ ರಲ್ಲಿ ನಾರ್ವೆಯಲ್ಲಿ ದೌರ್ಜನ್ಯ ನಡೆಸಿದ್ದಕ್ಕಾಗಿ ದೇಶಭ್ರಷ್ಟನಾದ ಇಂಗಲ್ಫ್‌ರ್ ಅರ್ನಾರ್ಸನ್ ಎಂಬ ಸರದಾರನು ತನ್ನ ಉದ್ದನ ನಾವೆಯಲ್ಲಿ ಹೆಂಡತಿ, ಮಕ್ಕಳು, ಪರಿವಾರದೊ-

ಡನೆ ನಾರ್ವೆಯ ಅರಸನ ಕ್ರೋಧಕ್ಕೆ ನಿಲುಕ ದಂತಿರಲು ಇಲ್ಲಿ ಬಂದು ನೆಲಸಿದನು. ಆತ ಬಂದಿಳಿದ ಸ್ಥಳದಲ್ಲೇ ಇಂದಿನ ರಾಜಧಾನಿ ರೈಕ್-ಯವಿಕ್ ಇದೆ. ಅಲ್ಲಿ ಆತನ ಉನ್ನತ ಮೂರ್ತಿಯೊಂದು ನಿಂತಿದೆ. ಪಶ್ಚಿಮ ಯುರೋಪಿನ ಬಂದರಗಳನ್ನು ಲೂಟಿಮಾಡಿ ಒಂದು ಶತಮಾನ ಕಾಲ ತ್ರಾಹಿ ತ್ರಾಹಿ ಎಬ್ಬಿಸಿಬಿಟ್ಟಿದ್ದ "ವೈಕಿಂಗ್"ರಲ್ಲನೇಕರು ಇಲ್ಲಿ ತಳವೂರಿದರು. ಅವರು ಶೂರರೂ ಕ್ರೂರರೂ ಸಾಹಸಿಗಳೂ ಆಗಿದ್ದರು. ಕೆಂಪು ತಲೆಯ ಎರಿಕ್ ಎಂಬಾತ ನಾರ್ವೆಯಲ್ಲಿ ಕೊಲೆ ಮಾಡಿ ಐಸ್‌ಲಂಡಿಗೆ ಬಂದು ಇಲ್ಲಿ ಕೊಲೆ ಮಾಡಿ ತಪ್ಪಿಸಿಕೊಂಡು ಹೋಗಿ ಗ್ರೀನ್-ಲಂಡನ್ನು ಕಂಡುಹಿಡಿದು ಅಲ್ಲಿ ನೆಲಸಿದನು.

ಐಸ್‌ಲಂಡಿನಲ್ಲಿ ನೆಲಸಿದ ಈ ಜನರ ಪ್ರಾರಂ-ಭಿಕ ರಾಜ್ಯಪದ್ಧತಿ ಸರದಾರಿಕೆಯ ಮಾದರಿಯದಾಗಿತ್ತು. ಭಾರಿ ಜಮೀನುದಾರಿಗಳ ಒಡೆಯರೇ "ಅಲ್ತಿಂಗಿ"ನಲ್ಲಿ ಪ್ರಮುಖರಾಗಿದ್ದರು. ಅವರಲ್ಲಿ ಅಧಿಕಾರಕ್ಕಾಗಿ ಕಚ್ಚಾಟವಾಗಿ ೧೩ ನೇ ಶತಕದ ಮೊದಲಲ್ಲಿ ಆರಂಭವಾದ ರಕ್ತರಂಜಿತ ಯಾದವಿ ಯುದ್ಧ ಅರ್ಧ ಶತಮಾನ ಕಾಲ ಮುಂದುವರಿದು ಕೊನೆಗೆ ಅವರು ನಾರ್ವೆಯ ಪ್ರಭು-ತ್ವಕ್ಕೆ- ಯಾವುದರಿಂದ ತಪ್ಪಿಸಿಕೊಳ್ಳಲು ಅವರ ಪೂರ್ವಜರು ಓಡಿಬಂದಿದ್ದರೊ ಅದಕ್ಕೆ- ತಲೆವಾಗಬೇಕಾಯಿತು. ನಾರ್ವೆಯು ಡೆನ್ಮಾರ್ಕಿನ ಪ್ರಭು-ತ್ವಕ್ಕೊಳಗಾದ ಮೇಲೆ ಐಸ್‌ಲಂಡೂ ಡೆನ್ಮಾರ್ಕಿಗೆ ಆಧೀನವಾಯಿತು. ಐಸ್‌ಲಂಡಿನವರು ಒಮ್ಮೆ ಪರರ ಅಧಿಕಾರಕ್ಕೆ ತಲೆಬಾಗಿದಮೇಲೆ ನಿರಂತರವಾಗಿ ಈ ಎರಡೂ ರಾಷ್ಟ್ರಗಳ ವಿರುದ್ಧ ತಮ್ಮ ಸ್ವಾಯತ್ತತೆಯನ್ನುಳಿಸಿಕೊಳ್ಳಲು ಹೋರಾಡಿದರು. ೧೯ ನೇ ಶತಮಾನದಲ್ಲಿ, ಸ್ವತಃ ಕಡಲುಗಳ್ಳರ ಸಂತತಿಯವರಾದ ಇವರಿಗೆ ಬ್ರಿಟಿಶ್ ಮತ್ತು ಫ್ರೆಂಚ್ ಕಡಲುಗಳ್ಳರ ಉಪಟಳವನ್ನು ಸಹಿಸುವ ಪ್ರಸಂಗ ಬಂತು ಎರಡನೇ ಮಹಾ ಯುದ್ಧದಲ್ಲಿ ಹಿಟ್ಲರನು ಡೆನ್ಮಾರ್ಕನ್ನಾಕ್ರ



ಮಿಸಿದ ನಂತರ ಅವನು ಐಸ್‌ಲಂಡಿಗೆ ಬಾರ ದಂತೆ ತಡೆಯಲು ಬ್ರಿಟಿಶರು ಸೈನ್ಯ ಕಳಿಸಿದರು. ಇದನ್ನು ಐಸ್‌ಲಂಡಿನವರು ಇಂದಿಗೂ "ಬ್ರಿಟಿಶ್ ಆಕ್ರಮಣ" ಎಂದು ಕರೆಯುತ್ತಾರೆ. ಡೆನ್ಮಾರ್ಕ್ ದುರ್ಬಲವಾಗಿದ್ದ ಸಂದರ್ಭ ಸಾಧಿಸಿ ಐಸ್‌ಲಂಡಿನ ಜನರು ನೂರಕ್ಕೆ ೯೭.೩೫ ಮತದಿಂದ ಡೆನ್ಮಾರ್ಕಿನ ಅಧೀನತೆಯನ್ನು ಕಿತ್ತೊಗೆದು ಸ್ವಾತಂತ್ರ್ಯವನ್ನು ಘೋಷಿಸಿದರು. ಇಂದು ಐಸ್‌ಲಂಡು ಅಮೇರಿಕಕ್ಕೆ ಸೈನಿಕ ನೆಲೆಯೊಂದನ್ನು ಅರೆಮನಸಿನಿಂದಲೇ ಕೊಟ್ಟಿದೆ. ಆದರೆ ರಶಿಯನ್ನ ರೊಡನೆಯೂ ಅದು ಸ್ನೇಹವನ್ನಿಟ್ಟುಕೊಂಡಿದೆ.

ಐಸ್‌ಲಂಡು ತನ್ನದೇ ರೀತಿಯ ಒಂದು ರುದ್ರ ಮನೋಹರ ಸೌಂದರ್ಯದ ನೆಲೆವೀಡಾಗಿದೆ. ಜ್ವಾಲಾಮುಖಿ ನಿರ್ಮಿತವಾದ ಈ ದ್ವೀಪದ ಬಹು ಭಾಗವೆಲ್ಲ ನಿಸ್ಸಸ್ಯವಾದ ಪೀಠಭೂಮಿ. ಕಡಲ ತಡಿಗಳಲ್ಲಷ್ಟೇ ಜನವಸತಿ. ಒಂದು ಕಾಲದಲ್ಲಿ ವೃಕ್ಷಗಳಿಂದ ಹಸುರಾಗಿದ್ದ ಐಸ್‌ಲಂಡ್ ನಿಸರ್ಗದ ಪ್ರಕೋಪದಿಂದ ಇಂದು ಬಹುಮಟ್ಟಿಗೆ ವೃಕ್ಷವಿಹೀನವಾಗಿದೆ. ಇಲ್ಲಿ ನೆಲಸಿದಂದಿನಿಂದಲೂ ಐಸ್‌ಲಂಡಿಗರು ಮೊದಲು ಮೀನುಗಾರಿಕೆ ಮತ್ತು ಅನಂತರ ಕರಾವಳಿಗಳಲ್ಲಿರುವ ಹುಲ್ಲುಗಾವಲುಗಳಲ್ಲಿ ಕುರುಬತನದಲ್ಲಿ ನಿರತರಾಗಿದ್ದಾರೆ.

ಬಸಾಲ್ಟ್ ಶಿಲೆಗಳು ರಭಸದ ನದಿಗಳ ಮತ್ತು ಉಗ್ರಸಾಗರ ತರಂಗಗಳ ಪೆಟ್ಟಿಗೆ ಕೊರೆದು ಸಮುದ್ರದಿಂದ ಒಳನಾಡಿನ ಪೀಠ ಭೂಮಿಯ ವರೆಗೂ ನಿರ್ಮಿಸಿದ ಫಿಯರ್ಡ್‌ಗಳನ್ನು ಸುತ್ತಲೂ ಉನ್ನತವಾದ ಕಲ್ಲುಗೋಡೆಗಳು ದಿಗ್ಬಂಧಿಸಿರುವುದರಿಂದ ಐಸ್‌ಲಂಡಿನ ಕರಾವಳಿ ಕೆಲ ಮಟ್ಟಿಗೆ ನಾರ್ವೆಯ ಕರಾವಳಿಯ ಎದೆಗೆಡಿಸುವ ಶೋಭೆಯನ್ನೇ ಪ್ರದರ್ಶಿಸುತ್ತದೆ. ನಿರ್ಜನ ನಿರ್ಜೀವವಾದ ಪೀಠಭೂಮಿಯಲ್ಲಿ ಭಾರಿ ಹಿಮ ಕ್ಷೇತ್ರಗಳೂ ಹಿಮದಿನ್ನೆಗಳೂ ೫,೦೦೦ ಚದರ ಮೈಲು ಪ್ರದೇಶವನ್ನಾಕ್ರಮಿಸಿದೆ. ವಾತ್ನಯೋಕುಲ್ ಎಂಬ ಹಿಮಕ್ಷೇತ್ರವೊಂದೇ ೩೮೮೫ ಚದರ ಮೈಲು— ಯುರೋಪಿನಲ್ಲೇ ಅತಿ ದೊಡ್ಡದು— ವಿಸ್ತಾರವಾಗಿದೆ. ಧಾರಾಳ ಮಳೆಯಿರುವ ಈ ನಾಡಿನಲ್ಲಿ ಹರಿಯುವ ಹಲವು ನದಿಗಳು ನಿಟ್ಟುನಿಟ್ಟಿಗೆ ಜಲಪಾತಗಳನ್ನು ನಿರ್ಮಿಸಿ ಸಮುದ್ರ ಸೇರುವಾಗ ತಾವು ಕೊರೆದು ತಂದ ಬಿಳಿ ಮತ್ತು ನಸುಹಳದಿ ಜೇಡಿ ಮಣ್ಣಿನ ಛಾಯೆಯಿಂದ ಧವಲಗಂಗೆಗಳಾಗಿರುತ್ತವೆ.

ತಣ್ಣನ್ನ ವಿಶಾಲ ಹಿಮಕ್ಷೇತ್ರಗಳಿಂದ ತುಂಬಿದ ಈ ನಾಡಿನ ಅಂತರಂಗ ಮಾತ್ರ ಯಾವಾಗಲೂ ಕುದಿಯುತ್ತಿರುವುದೊಂದು ವಿಶೇಷ. ಇಲ್ಲಿ ಕನಿಷ್ಠಪಕ್ಷ ೧೦೭ ಜ್ವಾಲಾಮುಖಿಗಳಿವೆ. ಉತ್ತರದ ಮೈವತನ್ ಸರೋವರದ ನಟ್ಟನಡುವೆಯೆ ಜ್ವಾಲಾಮುಖಿಶಿಖರವೊಂದು ತಲೆಯೆತ್ತಿ ನಿಂತು ನೀರಲ್ಲಿ ತನ್ನ ವಿಕಾರ ಮುಖವನ್ನು ನೋಡಿಕೊಳ್ಳುತ್ತಿದೆ. ಲಾಕಿ ಎಂಬ ೨೦ ಮೈಲುದ್ದದ ಶ್ರೇಣಿಯೊಂದರಲ್ಲೇ ೧೦೦ ಜ್ವಾಲಾಮುಖಿ ಬಾಯಿಗಳಿವೆ. ಅವುಗಳಲ್ಲಿ ಕೆಲವುಗಳ ಬಾಯಲ್ಲಿ ಮಳೆ ಹಿಮಗಳ ನೀರು ತುಂಬಿ ಸುಂದರ ಸರೋವರಗಳಾಗಿ ನಾನಾ ಜಲ ಪಕ್ಷಿಗಳ ವಸತಿಗಳಾಗಿವೆ.

ಐಸ್‌ಲಂಡಿನವರು ಈ ಜ್ವಾಲಾಮುಖಿಗಳ ಆಕಸ್ಮಿಕ ರೋಷವನ್ನೆದುರಿಸಿ ಬಾಳಬೇಕಾಗಿದೆ. ಅದು ಅವರ ಇತಿಹಾಸದ ಅಂಗವಾಗಿಬಿಟ್ಟಿದೆ. ೧೭೮೩ರಲ್ಲಿ ಲಾಕಿ ಶ್ರೇಣಿ ಸಿಡಿದೆದ್ದಾಗ ೧೧,೦೦೦ ದನಕರುಗಳೂ ೨೮,೦೦೦ ಕುದುರೆಗಳೂ ೨,೦೦,೦೦೦ ಕುರಿಗಳೂ ಸತ್ತವು. ಅದರ ಮರುವರ್ಷವೇ ದಕ್ಷಿಣ ಐಸ್‌ಲಂಡಿನಲ್ಲಿ ಸಂಭವಿಸಿದ ಭೂಕಂಪದಲ್ಲಿ ೯೨ ಹೊಲಮನೆಗಳು ಹೇಳ ಹೆಸರಿಲ್ಲದಾಗಿ ೩೭ ಹೊಲಮನೆಗಳಿಗೂ ೧೧ ಚರ್ಚುಗಳಿಗೂ ತುಂಬ ಧಕ್ಕೆಯಾಯಿತು. ೧೮೯೬ ರ ಇನ್ನೊಂದು ಭೂಕಂಪದಲ್ಲಿ ೧೬೧ ಹೊಲಮನೆಗಳು ನಿರ್ನಾಮವಾಗಿ ೧೫೫ಕ್ಕೆ ಧಕ್ಕೆಯಾಯಿತು.

ಇದಕ್ಕೂ ಭಯಾನಕವಾದುದೆಂದರೆ ಪ್ರಚಂಡ













ಬದಲಾಗುತ್ತಿರುವ
ಫ್ಯಾಶನ್

ಮಫತ್ ಲಾಲ್
ಗ್ರುಪ್

ಪ್ರಿಂಟೆಡ್
ಪಾಪ್ಲಿನ್‌ಗಳು




ನ್ಯೂ ಶೊರೊಕ್ (ಶೊರೊಕ್) ಅಹಮದಾಬಾದ್, ನ್ಯೂ ಶೊರೊಕ್, ನಡಿಯಾದ್. ಸ್ಟಾಂಡರ್ಡ್, ಬೊಂಬಾಯಿ. ಸ್ಟಾಂಡರ್ಡ್ (ನ್ಯೂ ಚೈನಾ), ಬೊಂಬಾಯಿ. ಸ್ಟಾಂಡರ್ಡ್, ದೇವಾಸ್. ಸಾಸೂನ್, ಬೊಂಬಾಯಿ. ಸಾಸೂನ್ (ನ್ಯೂ ಯೂನಿಯನ್) ಬೊಂಬಾಯಿ. ಸುರತ್ ಕಾಟನ್, ಸುರತ್. ಮಫತ್‌ಲಾಲ್ ಫೈನ್, ನವಸಾರಿ. ಗಗಲ್‌ಭಾಯ್ ಜೂಟ್, ಕಲ್ಕತ್ತ. ಇಂಡಿಯನ್ ಡೈಸ್ಟಫ್, ಬೊಂಬಾಯಿ.

MF 44

ಹಿಮಹಾಳಿಗಳ ಕೆಳಗೆ ಹುದುಗಿರುವ ಜ್ವಾಲಾಮುಖಿಗಳು. ೧೩೬೨ರಲ್ಲಿ ಐಸ್‌ಲಂಡಿನ ಅತ್ಯುನ್ನತ (೬೯೫೨ ಅಡಿ) ಪರ್ವತವಾದ ಓರೇಫ ಜೋಕುಲ್ ಹೇಳದೆ ಕೇಳದೆ ಸಿಡಿದೆದ್ದಾಗ ಉಕ್ಕೇರಿದ ಲಾವಾದೊಡನೆ ಪರ್ವತದ ನೆತ್ತಿಯನ್ನು ಕವಿದಿದ್ದ ಹಿಮ ಕರಗಿ ಭಾರಿ ಹಿಮಗಡ್ಡೆಗಳೊಡನೆ ಸುತ್ತಲೂ ಧಾವಿಸಿ ೪೦ ಹೊಲಮನೆಗಳೂ ಜನರೂ ದನ ಕುರಿ ಕುದುರೆಗಳೂ ಅಕ್ಷರಶಃ ಸಮುದ್ರಕ್ಕೆ ತೇಲಿಹೋದವು. ಹೆಲ್ಕಾ ಪರ್ವತ ಹೀಗೆ ಐಸ್‌ಲಂಡಿನ ಇತಿಹಾಸದಲ್ಲಿ ೨೩ ಸಲ ಸಿಡಿದೆದ್ದಿದೆ; ಕಾಟ್ಲಾ ೧೪ ಸಲ.

ಐಸ್‌ಲಂಡಿನ ಅತಿ ಮನೋಹರ ದೃಶ್ಯಗಳಲ್ಲಿ ಅದರ ಬಿಸಿ ನೀರಿನ ಬುಗ್ಗೆಗಳನ್ನು ಹೆಸರಿಸಬೇಕು. ವಿಪ್ಲವಕಾರಿ ಹೆಲ್ಕಾದ ಸಮೀಪದಲ್ಲೇ ಇರುವ ಗೆಯ್ಸರ್ ಎಂಬ ಬಿಸಿ ನೀರಿನ ಊಟೆ ಜಗತ್ಪ್ರಸಿದ್ಧವಾಗಿದೆ. ಅದು ಚಿಮ್ಮುವಾಗ ನೂರಾರಡಿ ಎತ್ತರಕ್ಕೆ ಹಬ್ಬುವ ಗಂಧಕಯುಕ್ತ ಹಬೆ ಐಸ್‌ಲಂಡಿನ ಸಸ್ಯಹೀನ ಆಕಾಶದಲ್ಲಿ ಭವ್ಯವಾದ ದೃಶ್ಯವನ್ನು ನಿರ್ಮಿಸುತ್ತದೆ.

ನೆಲದಡಿ ಐಸ್‌ಲಂಡಿನಲ್ಲಿ ಎಲ್ಲೆಲ್ಲಿಯೂ ಗಂಧಕಯುಕ್ತ ಆಲ್ಕಲಿಯುಕ್ತ ಆಮ್ಲಯುಕ್ತ ಬಿಸಿ ನೀರಿನ ಒರತೆಗಳಿರುವಂತೆ ಕಾಣುತ್ತದೆ. ರಾಜಧಾನಿಯ ಪ್ರತಿ ಮನೆಗೂ ಪೈಪುಗಳ ಮೂಲಕ ಈ ಬಿಸಿನೀರು ಪುಕ್ಕಟೆಯಾಗಿಯೆ ಲಭಿಸುತ್ತದೆ. ಅವರು ನೆಲದಲ್ಲಿ ತೂತು ಕೊರೆದು ರಾಸಾಯನಿಕ ದ್ರವ್ಯವನ್ನು ಸುರುವಿ ಬುಗ್ಗೆಗಳು ಪುಟಿಯುವಂತೆ ಮಾಡಿಕೊಳ್ಳುತ್ತಾರೆ. ನೆಲದಡಿಯಿಂದ ಬಿಸಿ ನೀರಿನ ಉಗಿಯನ್ನು ಉಕ್ಕೇರಿಸಿ ಕೃಷಿ ಸಂಶೋಧನ ಕೇಂದ್ರವೊಂದರಲ್ಲಿ ಹವಾಮಾನವನ್ನು ಉಷ್ಣವಲಯದಲ್ಲಿರುವಂತೆ ಮಾರ್ಪಡಿಸಿ ತೆಂಗಿನ ಮರಗಳನ್ನು ಕೂಡ ಬೆಳೆಸುತ್ತಿದ್ದಾರೆ.

ಐಸ್‌ಲಂಡಿನ ಜನ ತಮ್ಮೀ ನಾಡನ್ನು ಅದರ ಉಗ್ರತೆ ಮನೋಹರತೆಗಳೆರಡಕ್ಕಾಗಿಯೂ ಪ್ರೀತಿಸುತ್ತಾರೆ. ಅವರ ದೇಶಾಭಿಮಾನ ಭಾಷಾಭಿಮಾನಗಳು ಅಪ್ರತಿಮವಾಗಿವೆ. ತಮ್ಮ ನಾಡಿನ ಇತಿಹಾಸವನ್ನೂ ಸೃಷ್ಟಿ ವೈಶಿಷ್ಟ್ಯಗಳನ್ನೂ ಬಣ್ಣಿಸುವಾಗ ಅವರ ಕಣ್ಣುಗಳು ಮಿಂಚುತ್ತವೆ. ಪ್ರತಿಯೊಬ್ಬ ಐಸ್‌ಲಂಡಿಗನಿಗೂ ತನ್ನ ದೇಶದ ಇತಿಹಾಸ ಬಾಯಿಪಾಠವಾದಂತಿದೆ. ಒಂಭತ್ತನೇ ಶತಮಾನದಲ್ಲಿ ವೈಕಿಂಗ್ ಕಡಲುಗಳ್ಳರು ಇಲ್ಲಿ ನೆಲೆಯೂರಿದಂದಿನಿಂದ ಇಂದಿನವರೆಗಿನ ಇತಿಹಾಸ ಅವರ "ಸಾಗಾ" (ಕಥಾನಕ) ಗಳಲ್ಲಿ ಸುರಕ್ಷಿತವಾಗಿದೆ. ಈ ಸಾಗಾ ಪುಸ್ತಕಗಳು ಇಲ್ಲದ ಮನೆಯೇ ಇಲ್ಲವೆನ್ನಬಹುದು.

ಅವರ ಭಾಷಾಭಿಮಾನವೂ ಅಸದೃಶವಾದುದು. ಹೆಚ್ಚು ಕಡಿಮೆ ಪ್ರತಿಯೊಬ್ಬ ಐಸ್‌ಲಂಡಿಗನಿಗೂ ಡೇನಿಶ್, ನಾರ್ವೇಜಿಯನ್, ಜರ್ಮನ್, ಇಂಗ್ಲೀಷ್ ಭಾಷೆಗಳು ಬರುತ್ತಿದ್ದರೂ ನಾರ್ವೆಜಿಯನ್ನಿನಿಂದ ಕವಲೊಡೆದು ರೂಪುಗೊಂಡ ತಮ್ಮ ಸ್ವಂತ ಐಸ್‌ಲಂಡಿಕ್ ಭಾಷೆಯನ್ನು ಅವರು ಅಮಿತ ಪ್ರಯತ್ನ ಮೂಲಕ ಪರಭಾಷೆಗಳ ಪ್ರಭಾವದಿಂದ ಅಲಿಪ್ತವಾಗಿಟ್ಟಿದ್ದಾರೆ. ಅವರ ಅಭಿಮಾನವೂ ನ್ಯಾಯವಾದದ್ದೇ. ಒಂಭತ್ತನೇ ಶತಮಾನದಿಂದಲೂ ಬೆಳೆದು ಬಂದ ವಿಪುಲ ಮತ್ತು ಶ್ರೇಷ್ಠ ಸಾಹಿತ್ಯರಾಶಿ ಅದರಲ್ಲಿದೆ.

ಅವರ ಸಾಂಸ್ಕೃತಿಕ ಮಟ್ಟ ತತ್ಸಮಾನವಾದ ಯಾವ ರಾಷ್ಟ್ರಕ್ಕಿಂತಲೂ ಉನ್ನತವಾಗಿದೆ. ಪ್ರಾಥಮಿಕ ವಿದ್ಯಾಭ್ಯಾಸ ಅಲ್ಲಿ ಪುಕ್ಕಟೆ ಮತ್ತು ಕಡ್ಡಾಯದ್ದು. ಅನೇಕ ಹೈಸ್ಕೂಲುಗಳಲ್ಲದೆ ಒಂದು ವಿಶ್ವವಿದ್ಯಾಲಯವೂ ಇದೆ. ರೇಡಿಯೊ ಕೇಂದ್ರವೊಂದು ಐಸ್‌ಲಂಡಿಕ್ ಭಾಷೆಯಲ್ಲಿ ದಿನವೂ ಪ್ರಸಾರಗಳನ್ನೇರ್ಪಡಿಸುತ್ತಿದೆ. ರಾಜಧಾನಿ ರೈಕ್‌ಯವಿಕ್‌ನ ಜನಸಂಖ್ಯೆ ೭೦,೦೦೦ ಕ್ಕಿಂತ ಹೆಚ್ಚಿಲ್ಲ; ಇತರ ನಾಲ್ಕು "ದೊಡ್ಡ" ಪಟ್ಟಣಗಳ ಜನಸಂಖ್ಯೆ ಎರಡು ಸಾವಿರದಿಂದ ಹತ್ತು ಸಾವಿರದೊಳಗೆ; ಆದರೂ ಇಲ್ಲಿ ವರ್ಷಕ್ಕೆ ೪೫೦ ಪುಸ್ತಕಗಳು ಪ್ರಕಟವಾಗುತ್ತವೆ. ಪುಸ್ತಕದಂಗಡಿ ಇಲ್ಲದ ಊರೇ ಇಲ್ಲಿಲ್ಲ.

ಎರಡು ಲಕ್ಷ ಜನ ಕೂಡ ಇಲ್ಲದ ಈ ಭಾಷೆಯ ಇಂದಿನ ಸಾಹಿತ್ಯದ ಮಟ್ಟವನ್ನು ೧೯೫೫ ರ ನೋಬೆಲ್ ಸಾಹಿತ್ಯ ಪಾರಿತೋಷಕವು ಐಸ್‌ಲಂಡಿಕ್ ಕಾದಂಬರಿಕಾರ ಹಾಲ್ಡಲ್ ಲ್ಯಾಕ್ಸ್‌ನೆಸ್ ಅವರಿಗೆ ದೊರೆತಿತೆಂಬುದರಿಂದ ತರ್ಕಿಸಬಹುದು.

ಐಸ್‌ಲಂಡಿನಲ್ಲಿ ರೇಲ್ವೆಗಳಿಲ್ಲ. ಮೀನುಗಾರಿಕೆ, ಕೃಷಿ, ಕುರುಬತನ ಇವನ್ನು ಬಿಟ್ಟರೆ ಉದ್ಯಮಗಳಿಲ್ಲ. ಈಚೆಗೆ ಅದರ ಧುಮ್ಮಿಕ್ಕುವ ನದಿಗಳಿಂದ ವಿದ್ಯುತ್ತನ್ನು ತೆಗೆಯಲು ಪ್ರಾರಂಭವಾಗಿದೆಯಷ್ಟೇ. ಈಚೆಗಿನವರೆಗೆ ಕುದುರೆಯೇ ಮುಖ್ಯ ವಾಹನವಾಗಿದ್ದರೂ ಈಗ ಮೋಟಾರುಗಳು ಬಂದಿವೆ. ಅಲ್ಲಿ ಸಂಗೀತ ಮಂದಿರಗಳಿವೆ, ನೃತ್ಯ ಮಂದಿರಗಳಿವೆ, ನಾಟಕ ಮಂದಿರಗಳಿವೆ; ಆದರೆ ಟೆಲಿವಿಜನ್ ಇಲ್ಲ. ಅದು ಸುಸಂಸ್ಕೃತ ಮನೋರಂಜನೆಯಲ್ಲೆಂದು ಅವರೆಣಿಸುತ್ತಾರೆ. ಅಮೇರಿಕನ್ ಸೈನ್ಯ ಅಲ್ಲಿನೆಲೆಯಾಗಿದ್ದರೂ ಅದಕ್ಕೆತನ್ನನಿರ್ದಿಷ್ಟಪ್ರದೇಶದಿಂದ ಹೊರ ಬರಲು ಅಪ್ಪಣೆಯಿಲ್ಲ. ಅಮೇರಿಕದ ಅಸಂಸ್ಕೃತ ಪ್ರವೃತ್ತಿ ತಮ್ಮವರಿಗೂ ಅಂಟೀತೆಂದು ಐಸ್‌ಲಂಡಿನವರು ಭಾವಿಸುತ್ತಾರೆ. ಈ ಬಗೆಯ ಸಂಕರಭಯದಿಂದಲೇ ಅವರು ವಿದೇಶಿ ಪ್ರವಾಸಿಕರಿಗೆ ಕೂಡ ಇಲ್ಲಿ ಬರಲು ವಿಶೇಷ ಪ್ರೋತ್ಸಾಹ ನೀಡುವುದಿಲ್ಲ. ಹನ್ನೊಂದು ಶತಮಾನ ಕಾಲ ಹೊರ ಜಗತ್ತಿನ ಸಂಪರ್ಕದಿಂದ ದೂರವಿದ್ದು ಒಂದು ಬಗೆಯ ಪ್ರತ್ಯೇಕ ಮನೋಭಾವವನ್ನು ಬೆಳಸಿಕೊಂಡ ಈ ಜನ ಇದ್ದುದರಲ್ಲೇ ತೃಪ್ತರು. *



ಬಿಸಿನೀರಿನ ಲೂಟಿ



## ನುಡಿಮುತ್ತು

ಪ್ರಾಮಾಣಿಕ ಮನುಷ್ಯನೆಂದರೆ ದೇವರ ಕೃತಿಗಳಲ್ಲಿ ಅತ್ಯಂತ ಘನವಾದದ್ದು.

—ಪೋಪ್

*

ಜೀವನದ ಪ್ರಾರಂಭದ ನಾಲ್ವತ್ತು ವರ್ಷಗಳಲ್ಲಿ ಅಭ್ಯಾಸ ಮಾಡಬೇಕು. ಮುಂದಿನ ಮೂವತ್ತು ವರ್ಷಗಳಲ್ಲಿ ಅಭ್ಯಸಿಸಿದ್ದರ ಭಾಷ್ಯ ಮಾಡಬೇಕು.

—ಶೋಪನ್ ಹಾವರ್



ಪೈಲಟ್ ಗಣೇಶನ್ನನ ವೀರ ಕಥೆ

# ತನ್ನ ಜೀವ ಕೊಟ್ಟು ಒಂದು ಹಳ್ಳಿ ಉಳಿಸಿದ

ಆರ್. ನಾರಾಯಣ ಅಯ್ಯರ್

ಮಾರ್ಚ್ ಹನ್ನೆರಡನೆಯ ತಾರೀಖು, ಭಾನುವಾರ. ಮದರಾಸಿನ ತಾಂಬರಂನಿಂದ ನಲವತ್ತು ಮೈಲಿ ದೂರದಲ್ಲಿದ್ದ ಕಾರಣೈ ಎಂಬ ಹಳ್ಳಿಯೊಂದರ ಮುಗ್ಧ ಬಾಲಕರು ಆಕಾಶದಲ್ಲಿ ಬಹು ಎತ್ತರದಲ್ಲಿ ಹಾರಾಡುತ್ತಿದ್ದ ವಿಮಾನವನ್ನು ನೋಡುತ್ತಾ ಚಪ್ಪಾಳೆ ತಟ್ಟಿ ಆನಂದದಿಂದ ಕೇಕೆ ಹಾಕುತ್ತಿದ್ದರು.

ಅದೊಂದು ಐ. ಎ. ಎಫ್. ಹಾರ್ವರ್ಡ್ ವಿಮಾನ. ಅಂದಿನ ವಾತಾವರಣವು ವಿಮಾನದ ಹಾರಾಟಕ್ಕೆ ಬಹು ಅನುಕೂಲವಾಗಿದ್ದಿತು. ಮದರಾಸಿನ ಆಕ್ಸಿಲರಿ ಏರ್ ಫೋರ್ಸ್ ಸ್ಕ್ವಾಡ್ರನ್ನಿನ ಫ್ಲೈಯಿಂಗ್ ಆಫೀಸರ್, ಇಪ್ಪತ್ತೈದು ವರ್ಷ ವಯಸ್ಸಿನ ತರುಣರಾದ ಶ್ರೀ ಗಣೇಶನ್ ರವರು ವಿಮಾನವನ್ನು ನಡೆಸುತ್ತಿದ್ದರು. ಅದೇ ಸ್ಕ್ವಾಡ್ರನ್ನಿನ ಶ್ರೀ ರಾಮ ಮೋಹನರು ಸಹ-ಚಾಲಕರಾಗಿ ಅವರ ಜತೆಯಲ್ಲಿದ್ದರು.

ವಿಮಾನವು ಬಿಳಿಯ ಮೋಡವೊಂದರ ಹಿಂದೆ ಮರೆಯಾಯಿತು. ಗಣೇಶನ್‌ರವರು ವಿಮಾನವನ್ನು ಹೆಚ್ಚು ಹೆಚ್ಚು ಎತ್ತರಕ್ಕೆ ಕೊಂಡೊಯ್ಯುತ್ತಿದ್ದರು. ಮೊದಲು ಹತ್ತು ಸಾವಿರ ಅಡಿ ಎತ್ತರವನ್ನು ಸೂಚಿಸುತ್ತಿದ್ದ ಆಲ್ಟಿಮೀಟರ್, ಈಗ ಹದಿನಾರು ಸಾವಿರ ಅಡಿ ಎತ್ತರವನ್ನು ಸೂಚಿಸಿತು.

ಭೂಮಿಯ ಮೇಲೆ ನಿಂತು, ಮೋಡದ ಹಿಂದಿನಿಂದ ವಿಮಾನವು ಹೊರ ಬರುವುದನ್ನೇ ಕುತೂಹಲದಿಂದ ಕಾದು ನೋಡುತ್ತಿದ್ದ ಹಳ್ಳಿಯ ಆ ಮುಗ್ಧ ಬಾಲಕರಿಗೆ ಅದೇ ಸಮಯದಲ್ಲಿ ಕಾಲಪುರುಷನು ಆ ವಿಮಾನವನ್ನು ಅರಸಿ, ಧಾವಿಸಿ ಬರುತ್ತಿದ್ದ ರುದ್ರ ನಾಟಕದ ಅರಿವು ಎಳ್ಳಷ್ಟೂ ಆಗಲಿಲ್ಲ.

ಇದ್ದಕ್ಕಿದಂತೆಯೇ ಸಾವಿರ ರಣ ಹದ್ದುಗಳು ಏಕಕಾಲದಲ್ಲಿ ಕಿರಿಚಿದರೆ ಆಗುವಂತಹ ಭಯಂಕರ ಶಬ್ದವೊಂದು ಚಾಲಕರಿಗೆ ಕೇಳಿ ಬಂದಿತು. ಅವರಿಬ್ಬರೂ ದಿಗ್ಭ್ರಾಂತರಾದರು. ಆ ಭಯಂಕರ ಶಬ್ದ ಯಾವುದು? ಅದು ಎಲ್ಲಿಂದ ಬಂದಿತು? ಪೆಟ್ರೋಲ್ ಟ್ಯಾಂಕ್ ಸಿಡಿಯಿತೆ? ಅದಕ್ಕೆ ಬೆಂಕಿ ಹತ್ತಿಕೊಂಡಿತೆ? ವಿಮಾನದ ರೆಕ್ಕೆ ಮುರಿದು ಬಿದ್ದಿತೆ? ಪ್ರೊಪೆಲರಿನ ಬ್ಲೇಡ್ ಕಳಚಿ ಬಿದ್ದಿತೆ? ಏನಾಗಿರಬಹುದು?

ವಿಮಾನವು ಇದ್ದಕ್ಕಿದ್ದಂತೆಯೇ ಒಂದು ಪಕ್ಕಕ್ಕೆ ತಿರುಗಿತು. ಗಣೇಶನ್‌ರು ಥ್ರಾಟಲ್‌ನ್ನು ಹಿಂದಕ್ಕೆಳೆದು, ರಾಮ ಮೋಹನರನ್ನು ಕುರಿತು ಕೂಗಿ ಹೇಳಿದರು: "ವಿಮಾನವು ಪಕ್ಕಕ್ಕೆ ವಾಲುತ್ತಿದೆ. ಬಲ ರಡ್ಡರ್ ಪೆಡಲನ್ನು ಒತ್ತಿ ಹಿಡಿಯಿರಿ."

ವಿಮಾನವು ಕೆಳಕ್ಕಿಳಿಯುತ್ತಿದ್ದಿತು. ಆಲ್ಟಿ-ಮೀಟರ್ ಆರು ಸಾವಿರ ಅಡಿ ಎತ್ತರವನ್ನು ಸೂಚಿಸಿತು. ಹಾಗಾದರೆ ಎಂಜಿನ್ ಕೆಟ್ಟಿರಬೇಕು. ಗಣೇಶನ್‌ರ ಮುಖವು ಕಳೆಗುಂದಿತು. ಇಡೀ ದೇಹವು ಬೆವತು ಹೋಯಿತು. ಕಂಟ್ರೋಲ್ ಚಕ್ರದ ಮೇಲಿನ ಅವರ ಹಿಡಿತವು ಮತ್ತಷ್ಟು ಬಿಗಿಯಾಯಿತು. ಕೈಯ ಮಾಂಸಖಂಡಗಳು ಸೆಟೆದು ನಿಂತುವು.

ವಿಮಾನವು ಕೆಳಕ್ಕಿಳಿಯುತ್ತಲೇ ಇದ್ದಿತು. ಆಲ್ಟಿಮೀಟರ್ ಎರಡು ಸಾವಿರದ ಐನೂರು ಅಡಿ ಎತ್ತರವನ್ನು ಸೂಚಿಸಿತು. ವಿಮಾನವು ನೆಲಕ್ಕುರುಳುವುದು ಖಂಡಿತ. ಪೆಟ್ರೋಲ್ ಟ್ಯಾಂಕ್ ಭರ್ತಿಯಾಗಿತ್ತು. ಒಂದು ಲಕ್ಷ ಪೌಂಡ ತೂಕ ವಿದ್ದ ಆ ವಿಮಾನವು ನೆಲಕ್ಕುರುಳಿದ ಕೂಡಲೆ ಚೂರು ಚೂರಾಗುವುದಂತಿರಲಿ, ಪೆಟ್ರೋಲ್ ಹತ್ತಿಕೊಂಡು ಉರಿದು ಇಡೀ ವಿಮಾನವೇ ಭಸ್ಮವಾಗದೆ ಉಳಿಯುವುದೆ?

ಚಾಲಕರಿಬ್ಬರ ಮನಃಪಟಲಗಳ ಮುಂದೆ ತಮ್ಮ ಮನೆಮಠ, ದೇವರು, ಮಡದಿಮಕ್ಕಳು, ಬಂಧು ಬಾಂಧವರು, ಜೀವನದಲ್ಲಿ ತಾವು ಮಾಡಿದ್ದ ಅನೇಕಾನೇಕ ತಪ್ಪು ಒಪ್ಪುಗಳು ಇವೆಲ್ಲವುಗಳ ಚಿತ್ರಗಳೂ ಮಿಂಚಿನ ವೇಗದಲ್ಲಿ ಸುಳಿದುಹೋದವು.

ವಿಮಾನವು ಮತ್ತೂ ಕೆಳಕ್ಕಿಳಿಯಿತು. ಹೇಗಾದರೂ ನಾಶವಾಗಲೆಂದು ವಿಮಾನವನ್ನು ಅದರ ಪಾಡಿಗೆ ಬಿಟ್ಟು, ಪ್ಯಾರಾಚೂಟಿನಿಂದ ಕೆಳಕ್ಕೆ ಧುಮುಕುವುದೇ ಪ್ರಾಣರಕ್ಷಣೆ ಮಾಡಿಕೊಳ್ಳಲು ಚಾಲಕರಿಗೆ ಈಗ ಉಳಿದಿದ್ದ ಏಕಮಾತ್ರ ಉಪಾಯವಾಗಿದ್ದಿತು. ಗಣೇಶನ್‌ರು ಕೆಳಗೆ ನೋಡಿದರು. ಕೆಳಗೊಂದು ಗ್ರಾಮವು ಕಾಣಿಸಿತು ಹುಲ್ಲು ಮತ್ತು ಗರಿಗಳಿಂದ ನಿರ್ಮಿತವಾದ ಹಳ್ಳಿಗರ ಹಲವಾರು ಜೋಪಡಿಗಳು ಕಾಣಿಸಿದುವು. ಆತ್ಮರಕ್ಷಣೆಗಾಗಿ ವಿಮಾನವನ್ನು ಬಿಟ್ಟು ಹೊರಬಂದರೆ, ಆ ಹುಲ್ಲು ಜೋಪಡಿಗಳ ಮೇಲೆ ವಿಮಾನವು ಬಿದ್ದು, ಟ್ಯಾಂಕಿನಲ್ಲಿದ್ದ ಪೆಟ್ರೋಲ್ ಸಿಡಿದು, ಆ ಜೋಪಡಿಗಳೆಲ್ಲವೂ ಉರಿದು ಭಸ್ಮವಾಗಿ, ಅನೇಕ ನಿರಪರಾಧಿ ಗ್ರಾಮಸ್ಥರು ಸಾವಿಗೀಡಾಗುವುದು ಖಂಡಿತ.

ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಮಾಡುವುದೇನು? ಕ್ಷಣಮಾತ್ರವೂ ವಿಳಂಬ ಮಾಡದೆ ತೀರ್ಮಾನವನ್ನು ಕೈಕೊಳ್ಳಬೇಕಾಗಿದ್ದಿತು. ಆತ್ಮರಕ್ಷಣೆ ಮಾಡಿಕೊಳ್ಳುವ ಪ್ರಯತ್ನದಲ್ಲಿ ನಿರಪರಾಧಿ ಗ್ರಾಮಸ್ಥರ ವಿನಾಶಕ್ಕೆ ಅವಕಾಶ ಮಾಡಿಕೊಡುವುದೆ? ಅಥವಾ ಗ್ರಾಮಸ್ಥರನ್ನು ಅಪಾಯದಿಂದ ಪಾರುಮಾಡುವ ಪ್ರಯತ್ನದಲ್ಲಿ ತಮ್ಮ ಪ್ರಾಣಗಳನ್ನೇ ಅಪಾಯಕ್ಕೊಳಪಡಿಸುವುದೆ?

ಗಣೇಶನ್ ಅನುಮಾನಿಸಲಿಲ್ಲ. ಅವರು ತೀರ್ಮಾನವನ್ನು ಕೈಕೊಂಡಿದ್ದರು. ಅವರೆಂದರು, "ಮೋಹನ್, ನೀವು ಪ್ಯಾರಾಚೂಟಿನಿಂದ ಕೂಡಲೆ ಕೆಳಕ್ಕೆ ಧುಮುಕಿ."

"ನೀವೂ ಧುಮುಕುವಿರಲ್ಲವೆ?" ರಾಮ ಮೋಹನ್ ಅನುಮಾನಿಸುತ ಲೇ ಕೇಳಿದರು.


LIFEBUOY
SOAP

"ನಾನು ವಿಮಾನವನ್ನು ಗ್ರಾಮದಿಂದಾಚೆಗೆ ಕೊಂಡೊಯ್ಯಬೇಕಾಗಿದೆ. ನಂತರವೇ ನನ್ನ ರಕ್ಷಣೆಯ ಯೋಚನೆ. ಬೇಗ ಧುಮುಕಿ. ಈಗ ಮಾತಿಗೆ ವೇಳೆಯೇ ಇಲ್ಲ."

"ಇಲ್ಲ, ಇಲ್ಲ. ಉಳಿಯುವುದಾದರೆ ಇಬ್ಬರೂ ಒಟ್ಟಿಗೆ ಉಳಿಯುವ. ಅಳಿಯುವುದಾದರೆ ಇಬ್ಬರೂ ಒಟ್ಟಿಗೆ ಅಳಿಯುವ."

ಗಣೇಶನ್ ಕರ್ಕಶ ಧ್ವನಿಯಿಂದ ಗುಡುಗಿದರು: "ನಾನು ಅಧಿಕಾರ ವಾಣಿಯಿಂದ ಆಜ್ಞೆ ಮಾಡುತ್ತಿದ್ದೇನೆ. ಈ ಕೂಡಲೆ ಕೆಳಕ್ಕೆ ಧುಮುಕಿರಿ!" ಮರುಕ್ಷಣದಲ್ಲಿಯೇ ಬಲವಂತದ ಮುಗುಳ್ನಗೆಯನ್ನು ಸೂಸುತ್ತಾ ಅವರು ಮೃದುವಾಗಿ ನುಡಿದರು, "ಗೆಳೆಯಾ, ನನ್ನ ಬಗ್ಗೆ ಚಿಂತಿಸಬೇಡಿ. ನನ್ನ ಕರ್ತವ್ಯವನ್ನು ಮಾಡುವುದರ ಜತೆಗೆ ನನ್ನ ರಕ್ಷಣೆಯನ್ನೂ ಸಹ ಮಾಡಿಕೊಳ್ಳುತ್ತೇನೆ. ಬೇಗ ಧುಮುಕಿ. ಗುಡ್ ಬೈ!"

ರಾಮ ಮೋಹನ್‌ರು ಪ್ಯಾರಾಚ್ಯೂಟಿನ ಸಹಾಯದಿಂದ ಕೆಳಕ್ಕೆ ಧುಮುಕಿದರು. ಬಹು ಕೆಳಮಟ್ಟದಲ್ಲಿ ಈಗ ಹಾರಾಡುತ್ತಿದ್ದ ವಿಮಾನದಿಂದ ಪ್ಯಾರಾಚ್ಯೂಟ್ ಹೊರಬಿದ್ದ ಅದ್ಭುತವನ್ನು ಹಳ್ಳಿಗರು ತೆರೆದ ಬಾಯಿ, ಬೆರಗುಗಣ್ಣುಗಳಿಂದ ನೋಡುತ್ತ ನಿಂತಿದ್ದರು.

ಹಳ್ಳಿಯ ಪಕ್ಕದಲ್ಲೇ ಇದ್ದ ಗೋಡಂಬಿ ತೋಟದ ಕಡೆಗೆ ವಿಮಾನವನ್ನು ಗಣೇಶನ್‌ರು ತಿರುಗಿಸಿದರು. ತೋಟವನ್ನು ದಾಟಿದರೆ ಬಯಲು. ಆ ಬಯಲಿನ ವರೆಗೂ ವಿಮಾನವನ್ನು ಕೊಂಡೊಯ್ಯುವುದೇ ಅವರ ಗುರಿಯಾಗಿದ್ದಿತು.

ಆದರೆ ದೈವ ಸಂಕೇತವು ಬೇರೆಯಾಗಿದ್ದಿತು. ವಿಮಾನವು ಗೋಡಂಬಿ ತೋಟವನ್ನು ದಾಟಲಿಲ್ಲ. ತೋಟದ ಮರಗಳಿಗೆ ತಗುಲಿ ನೆಲ ಮುಟ್ಟಿತು. ತಲೆಗೆ ಮಾರಕವಾದ ಪೆಟ್ಟು ತಗುಲಿ ಗಣೇಶನ್ ಮೂರ್ಛಿತರಾದರು. ಹಳ್ಳಿಗರು ಅನಾಹುತವಾದ ಜಾಗಕ್ಕೆ ಓಡಿ ಬಂದರು. ಗಣೇಶನ್‌ರನ್ನು ವಿಮಾನದಿಂದ ಹೊರ ತೆಗೆದು ಹಣೆಗೆ ನೀರು ತಟ್ಟಿದರು.

ಗಣೇಶನ್ ಕಣ್ಣು ತೆರೆದರು. "ಹಳ್ಳಿಗರೆಲ್ಲರೂ ಸುರಕ್ಷಿತರಾಗಿರುವರೆ? ಯಾರಿಗೂ ಅಪಾಯವಾಗಲಿಲ್ಲವೆ?" ಇವೇ ಅವರು ಮೊದಲು ಕೇಳಿದ ಪ್ರಶ್ನೆಗಳು.

"ಯಾರಿಗೂ ಅಪಾಯವಾಗಲಿಲ್ಲ," ಎಂದು ಗ್ರಾಮಸ್ಥರು ಮರುನುಡಿದರು.

"ಪ್ಯಾರಾಚ್ಯೂಟಿನಿಂದ ಇಳಿದ ಗೆಳೆಯರ ಗತಿಯೇನಾಯಿತು?"

"ಅವರು ಸುರಕ್ಷಿತವಾಗಿ ನೆಲ ಮುಟ್ಟಿದುದನ್ನು ನಾವೆಲ್ಲರೂ ನೋಡಿದೆವು. ಅದೋ ನೋಡಿ, ಅಲ್ಲಿ! ಅವರು ಈ ಕಡೆಯೇ ಓಡಿ ಬರುತ್ತಿದ್ದಾರೆ."

"ಸರಿ ಹಾಗಾದರೆ" ಗಣೇಶನ್‌ರ ಮುಖದ ಮೇಲೆ ಸಮಾಧಾನದ ನಸುನಗೆಯು ಸುಳಿಯಿತು. "ದೇವರು ದೊಡ್ಡವನು," ಎಂದು ಹೇಳಿ ಕೈ ಜೋಡಿಸುತ್ತಿದ್ದಂತೆಯೇ ಅವರ ಪ್ರಾಣಪಕ್ಷಿಯು ಹಾರಿಹೋಯಿತು. ತಮ್ಮ ಕಲ್ಯಾಣವನ್ನು ಬಯಸಿ ಪ್ರಾಣವನ್ನೇ ಬಲಿದಾನಮಾಡಿದ ಈ ವೀರನಿಗಾಗಿ ಗ್ರಾಮಸ್ಥರೆಲ್ಲರೂ ಕಣ್ಣೀರು ಸುರಿಸುತ್ತ ನಿಂತರು.

ರಕ್ಷಣಾ ಸಚಿವರಾದ ವಿ. ಕೆ. ಕೃಷ್ಣಮೆನನ್‌ರು "ಭಾರತ ವಿಮಾನ ದಳದ ಅತ್ಯುತ್ಕೃಷ್ಟ ಸಂಪ್ರದಾಯಕ್ಕೆ ಚ್ಯುತಿ ತಾರದಂತೆ ಧೀರ ಗಣೇಶನ್‌ರು ತಮ್ಮ ಜೀವವನ್ನೇ ಬಲಿದಾನ ಮಾಡಿದ್ದಾರೆ," ಎಂದು ಲೋಕಸಭೆಯಲ್ಲಿ ಮೆಚ್ಚುಗೆಯ ಮಾತುಗಳನ್ನಾಡಿ ಶ್ರದ್ಧಾಂಜಲಿಯನ್ನು ಅರ್ಪಿಸಿದ್ದಾರೆ. *



ಇಂದಿನ ನಾಗರಿಕತೆಯಲ್ಲಿ ಎದ್ದು ಕಾಣುವ ಒಂದು ಸಂಗತಿಯೆಂದರೆ ಲೈಂಗಿಕ ವಿಚಾರಗಳಿಗೆ ದೊರೆಯುತ್ತಿರುವ ಅಗ್ರತಾಂಬೂಲ. ಸಾಹಿತ್ಯದಲ್ಲಿ, ಕಲೆಯಲ್ಲಿ ಮತ್ತು ಚಲಚ್ಚಿತ್ರಗಳಲ್ಲಿ ಸ್ತ್ರೀಯ ಲೈಂಗಿಕ ಆಕರ್ಷಣೆಯನ್ನು ಮುಚ್ಚುಮರೆಯಿಲ್ಲದೆ ಉಪಯೋಗಿಸಲಾಗುತ್ತಿದೆ. ಸಂಗಡವೇ ಲೈಂಗಿಕ ಸ್ವಾತಂತ್ರ್ಯದ ಪ್ರತಿಪಾದನೆಯೂ ಹೆಚ್ಚುತ್ತಿದೆ. ಇದು ವ್ಯಾಪಾರದೃಷ್ಟಿಯಿಂದ ಲಾಭದಾಯಕವಾಗಿರಬಹುದು. ಆದರೆ ಸಮಾಜಕ್ಕೆ ಲೈಂಗಿಕ ಅತಿ ಸ್ವಾತಂತ್ರ್ಯ ಎಷ್ಟು ಅಪಾಯಕರವಾದದ್ದೆಂದು ಪ್ರಸಿದ್ಧ ಅಮೇರಿಕನ್ ಸಮಾಜಶಾಸ್ತ್ರಿ ಡಾ. ಪಿ. ಎ. ಸೊರೊಕಿನ್ನರು ಇಲ್ಲಿ ಇತಿಹಾಸದ ಹಿನ್ನೆಲೆಯಲ್ಲಿ ಎಚ್ಚರವಿತ್ತಿದ್ದಾರೆ.

# ಲೈಂಗಿಕ ಸ್ವಾತಂತ್ರ್ಯದ ಭೀಕರ ಫಲಗಳು

ಪಿ. ಎ. ಸೊರೊಕಿನ್

ಲೈಂಗಿಕ ಸ್ವಾತಂತ್ರ್ಯವನ್ನು ಬಿಗಿಯಾಗಿ ಮಿತಗೊಳಿಸಿದ ನಾಗರಿಕ ಸಮಾಜಗಳೇ ಅತ್ಯುಚ್ಚ ಸಂಸ್ಕೃತಿಯನ್ನು ರೂಪಿಸಿಕೊಂಡಿವೆ. ತನ್ನ ಹೆಂಗಸರನ್ನು ಹುಟ್ಟಾ ಪಾತಿವ್ರತ್ಯದ ಕಠೋರ ಬಂಧನದಲ್ಲಿ ಬೆಳಸದ ಯಾವ ಸಮಾಜವೂ ಶ್ರೇಷ್ಠಮಟ್ಟದ ವಿಚಾರಶೀಲ ಸಂಸ್ಕೃತಿಯ ವಿಕಾಸ ಮಾಡಿಕೊಂಡ ಒಂದೇ ಒಂದು ಉದಾಹರಣೆ ಇತಿಹಾಸದಲ್ಲಿ ಸಿಗುವುದಿಲ್ಲ. ಜೆ. ಡಿ. ಅನ್ವಿನ್ನರು ೮೯ ಸಾಕ್ಷರತಾಪೂರ್ವ ಸಮಾಜಗಳ ಇತಿವೃತ್ತಗಳನ್ನು ಅಭ್ಯಸಿಸಿದ್ದರಲ್ಲಿ ಅವುಗಳ ಸಾಂಸ್ಕೃತಿಕ ಬೆಳವಣಿಗೆ ಅವುಗಳಲ್ಲಿದ್ದ ಲೈಂಗಿಕ ನಿರ್ಬಂಧದ ಮಟ್ಟವನ್ನು ಅನುಸರಿಸಿದ್ದುದು ಕಂಡುಬಂತು. ವಿವಾಹಪೂರ್ವ ಲೈಂಗಿಕ ಸ್ವಾತಂತ್ರ್ಯ ಅತಿ ಹೆಚ್ಚಾಗಿರುವ ಸಮಾಜಗಳು ಪಶುಸದೃಶ ಸಂಸ್ಕೃತಿಯಿಂದ ಮೇಲೆ ಬರಲು ಶಕ್ತರಾಗುವುದಿಲ್ಲ; ವಿವಾಹಪೂರ್ವ ಮತ್ತು ವಿವಾಹಬಾಹ್ಯ ಲೈಂಗಿಕ ಸ್ವಾತಂತ್ರ್ಯಕ್ಕೆ ಸ್ವಲ್ಪವಾದರೂ ಮಿತಿ ಹಾಕಿದ ಸಮಾಜಗಳು ಆದಿಮಾನವ ಸಂಸ್ಕೃತಿಯ ಮಟ್ಟಕೇರಿವೆ; ಅದಕ್ಕೂ ಮೇಲಿನ ದೈವಪ್ರಧಾನ ಸಂಸ್ಕೃತಿಗಳಲ್ಲಿ ವಿವಾಹ ಬಾಹ್ಯ ಸಂಬಂಧದ ಮೇಲೆ ಇನ್ನೂ ಹೆಚ್ಚು ನಿಯಂತ್ರಣವಿದೆ; ವಿಚಾರ ಪ್ರಧಾನವಾಗಿ ಉಚ್ಚಮಟ್ಟಕ್ಕೇರಿದ ಇಜಿಪ್ತ್, ಸುಮೇರಿಯ, ಬೆಬಿಲಾನ್, ಗ್ರೀಸ್ ಮೊದಲಾದ ದೇಶಗಳ ಪ್ರಾಚೀನ ಸಮಾಜಗಳಲ್ಲೆಲ್ಲ ವಿವಾಹಪೂರ್ವ ಬ್ರಹ್ಮಚರ್ಯೆ ಮತ್ತು ವಿವಾಹೋತ್ತರ ಪಾತಿವ್ರತ್ಯ ಬಲವಾಗಿ ಜಾರಿಯಲ್ಲಿದ್ದವು.

ಇಷ್ಟೇ ಅಲ್ಲ. ಲೈಂಗಿಕ ವಿಚಾರದಲ್ಲಿ ಮೊದಲಿದ್ದ ಬಿಗುವನ್ನು ಕಡಿಮೆಯಾಗಗೊಟ್ಟ ಯಾವ ಸಮಾಜವೂ ತನ್ನ ಉನ್ನತ ಸಾಂಸ್ಕೃತಿಕ ಮಟ್ಟವನ್ನು ಕಾಪಾಡಿಕೊಂಡ ಉದಾಹರಣೆ ಇಲ್ಲ. ಯುರೋಪಿನ ಟ್ಯೂಟಾನಿಕ್ ಜನಾಂಗಗಳು ಕ್ರೈಸ್ತ ಧರ್ಮದ ಪ್ರಭಾವದಿಂದ ಲೈಂಗಿಕ ಸ್ವಾತಂತ್ರ್ಯದ ನಿರ್ಬಂಧಗಳಿಗೊಳಪಟ್ಟದ್ದೆ ಅನಂತರದ ಅವುಗಳ ಸುಸಂಸ್ಕೃತ ಪ್ರಗತಿಗೆ ನಾಂದಿ

"ಭಾರತಿ" ಯಿಂದ

ಯಾಯಿತು. ಬಹುಪತ್ನೀ ಸಂಪ್ರದಾಯದ ಮೂರ್ ಜನಾಂಗವು ಸ್ಪೇನಿಗೆ ಬಂದು ಏಕಪತ್ನೀ ಸಂಪ್ರದಾಯದ ಕ್ರೈಸ್ತ ಮತ್ತು ಯಹೂದ್ಯ ಹೆಂಗಸರನ್ನು ಮದುವೆಯಾದ ನಂತರ ಮೂ-ರರು ದೈವಪ್ರಧಾನ ಸಂಸ್ಕೃತಿಯಿಂದ ವಿಚಾರ ಪ್ರಧಾನ ಸಂಸ್ಕೃತಿಯತ್ತ ಕೆಲ ಮಟ್ಟಿಗೆ ಪ್ರಗತಿ ಹೊಂದಿದರು.

ಬಹುಪತ್ನೀ ಸಂಪ್ರದಾಯವಿದ್ದ ಸಮಾಜಗಳಲ್ಲಿ ಸೃಜನಾತ್ಮಕ ಪ್ರತಿಭೆ ಒಮ್ಮೆಲೇ ಹೊರ ಹೊಮ್ಮಿದ ಉದಾಹರಣೆಗಳಿದ್ದರೂ ಅದಕ್ಕೆ ಎರಡು ಕಾರಣಗಳು ಕಾಣಿಸುತ್ತವೆ: ಹಿಂದಿನ ಹಲವು ತಲೆಮಾರುಗಳಿಂದ ನಡೆದುಬಂದಿದ್ದ ನಿಷ್ಠುರವಾದ ವಿವಾಹೋತ್ತರ ಏಕಪತ್ನೀವ್ರತ (ಉದಾ.— ಆದಿ ಪರ್ಶಿಯನ್ನರು, ಹೂಣರು, ಮಂಗೋಲರು ಮತ್ತು ಮೆಸೆಡೋನಿಯನ್ನರು); ಮತ್ತು ಬಹುಪತ್ನೀ ಸಂಪ್ರದಾಯವಿದ್ದರೂ ಆ ಸಮಾಜಗಳ ಹೆಂಗಸರು ಬಿಗಿಯಾದ ವಿವಾಹೋತ್ತರ ಪಾತಿವ್ರತ್ಯವನ್ನು ಪಾಲಿಸುತ್ತಿದ್ದುದು.

ಸಮಾಜವು ತನ್ನ ಲೈಂಗಿಕ ನಿಯಮಗಳನ್ನು ಸಡಿಲುಗೊಳಿಸಿದಾಗೆಲ್ಲ ಮೂರು ತಲೆಮಾರು ದಾಟುವುದರೊಳಗೆ ಸಾಮಾನ್ಯವಾಗಿ ಅದರ ಸಾಂಸ್ಕೃತಿಕ ಅವನತಿಯಾಗಿದೆ. ಬೇಬಿಲೋನಿಯ, ಪರ್ಶಿಯ, ಮೆಸೆಡೋನಿಯ, ಮಂಗೋಲಿಯ, ಗ್ರೀಸ್ ಮತ್ತು ರೋಂನ ಉತ್ತರ ಕಾಲಗಳಲ್ಲಿಯೂ ಇಜಿಪ್ಟಿನ ಮಧ್ಯ ಮತ್ತು ಕೊನೆಯ ಅವಸ್ಥೆಗಳಲ್ಲಿಯೂ ಇದಕ್ಕೆ ಉದಾಹರಣೆ ಸಿಗುತ್ತದೆ. ವಿವಾಹಪೂರ್ವ ಬ್ರಹ್ಮಚರ್ಯ, ವಿವಾಹಾನಂತರ ಏಕನಿಷ್ಠೆ—ಕನಿಷ್ಠ ಹೆಂಗಸರ ಮಟ್ಟಿಗೆ-ಇವು ಅವಶ್ಯಕತೆಯಾಗಿರುವುದರಿಂದ ಈ ನಿಯಮವನ್ನು ಅತಿ ದೀರ್ಘ ಕಾಲ ಪಾಲಿಸಿದ ಸಮಾಜಗಳು ಅತಿ ಹೆಚ್ಚಿನ ಮಟ್ಟಕ್ಕೆ ಮುಟ್ಟಿದ್ದನ್ನು ನಾವು ಕಾಣಬಹುದು.

ಅನ್ವಿನ್ನರ ಸಂಶೋಧನೆಗಳಿಂದ ಬೇಬಿಲೋನಿಯನ್, ಇಜಿಪ್ಶನ್, ಅಥೇನಿಯನ್, ರೋಮನ್, ಆದಿ ಅರಬ ಮತ್ತು ಆಂಗ್ಲೊ ಸ್ಯಾಕ್ಸನ್ ಜನಾಂಗಗಳು ತಮ್ಮ ಸಾಮಾಜಿಕ ವಿಸ್ತರಣೆ ಮತ್ತು ಸಾಂಸ್ಕೃತಿಕ ಮತ್ತು ಬೌದ್ಧಿಕ ವಿಕಾಸದ ಪ್ರಾರಂಭಾವಸ್ಥೆಯಲ್ಲಿ ಏಕಪತ್ನೀವ್ರತಸ್ಥವಾಗಿದ್ದವೆಂದು ಗೊತ್ತಾಗಿದೆ. ಕುಟುಂಬದ ಮೇಲೆ ತಂದೆಯ ಅಧಿಕಾರ, ಹೆಂಡತಿಯ ಮೇಲೆ ಗಂಡನ ಸ್ವಾಮಿತ್ವ ಅಪರಿಮಿತವಾಗಿತ್ತು. ಲೈಂಗಿಕ ಸಂಬಂಧ ಗಂಡಹೆಂಡಿರೊಳಗೇ ನಡೆಯುತ್ತಿತ್ತು. ಒಮ್ಮೊಮ್ಮೆ ನಿಯಮಭಂಗವಾದರೂ ಅವುಗಳ ಸಂಖ್ಯೆ ಕಡಿಮೆಯಾಗಿದ್ದು ಸಮಾಜವು ಅದನ್ನು ಸಹಿಸದೆ ಕಠೋರ ಶಿಕ್ಷೆ ವಿಧಿಸುತ್ತಿತ್ತು. ಲೈಂಗಿಕ ಚಟುವಟಿಕೆಗಳನ್ನು ಮಿತಿಗೊಳಿಸಿದ್ದರಿಂದ ಆ ಸಮಾಜಗಳಲ್ಲಿ ಅಪಾರವಾದ ಸಾಮಾಜಿಕ ಸತ್ವ ಶೇಖರವಾಗಿ, ಬೌದ್ಧಿಕ, ಕಲಾತ್ಮಕ, ಧಾರ್ಮಿಕ ಮತ್ತು ಸಾಮಾಜಿಕ ಪ್ರತಿಭೆಯ ರೂಪದಲ್ಲಿ ಅದು ಹೊರಹೊಮ್ಮಿತು. ಆದ್ದರಿಂದ ಈ ಸಮಾಜಗಳು ಹುರುಪಿನಿಂದ ವಿಸ್ತಾರಗೊಂಡವಲ್ಲದೆ ತಮ್ಮ ಶತ್ರುಗಳ ವಿರುದ್ಧ ಅದ್ಭುತ ಪರಾಕ್ರಮದಿಂದ ಆತ್ಮರಕ್ಷಣೆ ಮಾಡಿಕೊಂಡವು.

ಆದರೆ ಈ ಸಮಾಜಗಳ ವಿಸ್ತರಣೆ ಮತ್ತು ಬೆಳವಣಿಗೆಯೊಡನೆ ನಿಷ್ಠುರವಾದ ಲೈಂಗಿಕ ನಿರ್ಬಂಧಗಳು ಸಡಿಲಾಗುತ್ತ ಹೋದವು. ಲೈಂಗಿಕ ಸ್ವಾತಂತ್ರ್ಯ ವಿಸ್ತರಿಸುತ್ತ ಇಡೀ ಸಮಾಜವನ್ನೇ ವ್ಯಾಪಿಸಿ ಕೊನೆಗೆ ಲೈಂಗಿಕ ಅರಾಜಕತೆಯಲ್ಲಿ ಪರ್ಯವಸಾನ ಹೊಂದಿತು. ಕುಟುಂಬದ ಯಜಮಾನರ ಅಧಿಕಾರದಿಂದ ಹೆಂಡಂದಿರೂ ಮಕ್ಕಳೂ ಬಿಡುಗಡೆ ಹೊಂದಿದರು. ಲೈಂಗಿಕ ಸ್ವಾತಂತ್ರ್ಯ ಗಮನಾರ್ಹವಾಗುವಷ್ಟು ಹೆಚ್ಚಿದ ಮೂರೇ ತಲೆಮಾರುಗಳ ನಂತರ ಈ ಸಮಾಜಗಳ ಸಾಂಸ್ಕೃತಿಕ ಸಾಮಾಜಿಕ ಪ್ರತಿಭೆ ಇಳಿಮುಖವಾಗತೊಡಗಿತು.

ಲೈಂಗಿಕ ಸ್ವಾತಂತ್ರ್ಯ ಹೆಚ್ಚಿದ್ದಕ್ಕೂ ಅವನತಿಯ ಆರಂಭಕ್ಕೂ ನಡುವೆ ಕೆಲ ಕಾಲ ಬೇಕಾಗುತ್ತಿದ್ದರೆ ಹೊಸ ಸಂಪ್ರದಾಯವನ್ನು "ಅರ

ಗಿಸಿ"ಕೊಳ್ಳಲು ಕಿರಿಯ ತಲೆಮಾರುಗಳಿಗೆ ಸ್ವಲ್ಪ ಸಮಯ ಬೇಕಾಗುವುದೇ ಅದಕ್ಕೆ ಕಾರಣ. ಮುಂದೆ ಲೈಂಗಿಕ ಸ್ವಾತಂತ್ರ್ಯದ ವಿಸ್ತರಣೆಯ ಸಂಗ-ಸಂಗಡವೇ ಅವನತಿಯೂ ಸಾಗುತ್ತದೆ. ಆದರೂ ಲೈಂಗಿಕ ಅರಾಜಕತೆಗೆ ತಡೆ ಹಾಕಿ, ನಿರ್ಬಂಧಗಳನ್ನು ಹೇರಿದರೆ ಅವನ-ತಿಗೂ ತಡೆ ಬಿದ್ದು ಒಂದು ಶತಮಾನದೊಳಗೆ ಸಾಂಸ್ಕೃತಿಕ ಸಾಮಾಜಿಕ ಪುನರುತ್ಥಾನ ಪ್ರಾ-ರಂಭವಾಗುತ್ತದೆ. ತಡೆ ಹಾಕದೆ ಹೋದರೆ ಸಮಾಜಗಳ ಅವನತಿ ಬೇಗನೆ ಉದ್ಧರಿಸಲ-ಸಾಧ್ಯವಾಗುವಷ್ಟು ಅಳತೆ ಮೀರಿ ಐತಿಹಾಸಿಕ ಅವಸಾನದಲ್ಲಿ ಪರಿಣಮಿಸುತ್ತದೆ.

ಅನ್ವಿನ್ನರ ಅಧ್ಯಯನದಿಂದ ಹೊರಪಟ್ಟ ಅಂಶ-ಗಳು ಇವು. ಅದರ ಕೆಲ ಕ್ಷುಲ್ಲಕ ವಿವರಗಳು ವಿವಾದಾಸ್ಪದವಾಗಿದ್ದರೂ ಒಟ್ಟಿನಲ್ಲಿ ಈ ತೀರ್ಮಾನವು ಇತರ ವಿದ್ವಾಂಸರಿಂದ ದೃಢಪಡಿ ಸಲ್ಪಟ್ಟಿದೆ.

ಸೋವಿಯಟ್ ರಶಿಯದಲ್ಲಿ ೧೯೨೦-೩೦ ರ ನಡುವೆ ನಡೆಸಿದ ಪ್ರಯೋಗಗಳೂ ಅನೇಕ ನಿರ-ಕ್ಷರಿ ವಸಾಹತು ಜನಾಂಗಗಳ ಅವನತಿಯ ಉದಾಹರಣೆಗಳೂ ಇದಕ್ಕೆ ಹೆಚ್ಚಿನ ಪ್ರಮಾಣ ಗಳನ್ನೊದಗಿಸಿವೆ.

ಸೋವಿಯಟ್ ರಶಿಯವು ಏಕಪತ್ನಿತ್ವ ಮತ್ತು ಪಾತಿವ್ರತ್ಯ ಎಂಬವು ಬರಿ ಬಂಡವಳ ಗಾರ ಸಂಪ್ರದಾಯಗಳೆಂದು ಅವುಗಳನ್ನು ಧಿಕ್ಕ ರಿಸಿ, ಲೈಂಗಿಕ ಸ್ವಾತಂತ್ರ್ಯವನ್ನು ಕಮ್ಯುನಿಸ್ಟ್ ಆರ್ಥಿಕ- ಸಾಮಾಜಿಕ ಸಂಘಟನೆಯ ತಳಹದಿ ಯಾಗಿ ಮಾಡಲು ಯತ್ನಿಸಿದ್ದರ ಪರಿಣಾಮ ಬೋಧಪ್ರದವಾಗಿದೆ.

ಕ್ರಾಂತಿಯ ಮೊದಲ ಹಂತದಲ್ಲಿ ರಶಿಯದ ನಾಯಕರು ವಿವಾಹ ಮತ್ತು ಕುಟುಂಬವನ್ನು ಬುದ್ಧಿಪೂರ್ವಕವಾಗಿ ಧ್ವಂಸ ಮಾಡಲೆಳಸಿದರು. ಅನಿರ್ಬಂಧ ಪ್ರೇಮವನ್ನು ಪ್ರೋತ್ಸಾಹಿಸಲು "ನೀರಿನ ಲೋಟದ ಸಿದ್ಧಾಂತ" ವನ್ನು ಪ್ರಚುರ ಪಡಿಸಲಾಯಿತು. ಒಬ್ಬನಿಗೆ ನೀರಡಿಕೆಯಾಗಿದ್ದರೆ ಅದನ್ನು ಹಿಂಗಿಸಿಕೊಳ್ಳಲು ಯಾವ ಲೋಟ ಉಪ ಯೋಗಿಸಿದರೇನು? ಹಾಗೆಯೆ ಲೈಂಗಿಕ ಆತುರ ವನ್ನು ಒಬ್ಬಾತ ಹೇಗೆ ಹಿಂಗಿಸಿಕೊಂಡರೂ ಬಾಧಕವಿಲ್ಲ- ಇದು ಕಮ್ಯುನಿಸ್ಟ್ ಪಕ್ಷದ ವಾದ ವಾಗಿತ್ತು. ಮದುವೆಗೂ ಆಕಸ್ಮಿಕ ಕಾಮಸಂ-ಬಂಧಕ್ಕೂ ಇದ್ದ ಭೇದವನ್ನು ಕಾಯದೆಯಿಂದ ಕಿತ್ತು ಹಾಕಲಾಯಿತು. ಗಂಡೂ ಹೆಣ್ಣೂ ಸೇರಿ ತಮ್ಮ ಕಾಮವನ್ನು ತೃಪ್ತಿಪಡಿಸಿಕೊಳ್ಳಲು ಅನಿ-ಯಮಿತ ಅಥವಾ ನಿಯಮಿತ ಅವಧಿಯವರೆಗೆ-- ಒಂದು ವರ್ಷ, ಒಂದು ತಿಂಗಳು, ಒಂದು ವಾರ ಅಥವಾ ಕೇವಲ ಒಂದು ರಾತ್ರಿಯ ಮಟ್ಟಿಗೆ— ಮಾಡಿಕೊಂಡ "ಒಪ್ಪಂದ" ವನ್ನಷ್ಟೆ ಕಾಯದೆ ಯಲ್ಲಿ ಉಲ್ಲೇಖಿಸಲಾಗಿತ್ತು. "ವಿವಾಹ"ಗಳನ್ನು ರಿಜಿಸ್ಟ್ರ ಮಾಡುವುದು ಕೂಡ ಅಗತ್ಯವಿರಲಿಲ್ಲ. ದ್ವಿಪತ್ನಿ ಮತ್ತು ಬಹುಪತ್ನೀ ಸಂಗಕ್ಕೆ ಕೂಡ ಹೊಸ ಕಾಯದೆಗಳು ಮನ್ನಣೆ ಕೊಟ್ಟವು. ಸರ ಕಾರಿ ಸಂಸ್ಥೆಗಳಲ್ಲಿ ಗರ್ಭಪಾತಕ್ಕೂ ಸೌಕರ್ಯ ಒದಗಿಸಲಾಯಿತು. ವಿವಾಹಪೂರ್ವ ಸಂಬಂಧ ವನ್ನು ಹೊಗಳಿದರು; ಪರಸ್ತ್ರೀ - ಪರಪುರುಷ ಸಂಬಂಧವನ್ನು ಸ್ವಾಭಾವಿಕವೆಂದು ಗಣಿಸಿದರು.

ಪರಿಣಾಮ "ಮಾಡಿದ್ದುಣ್ಣೋ ಮಹಾರಾಯ" ಎಂಬಂತಾಯಿತು. ಕೆಲವೇ ವರ್ಷಗಳಲ್ಲಿ ಲೆಕ್ಕ ವಿಲ್ಲದಷ್ಟು ದಿಕ್ಕುಗೇಡಿಗಳಾದ ಮಕ್ಕಳು ಸೋವಿ ಯಟ್ ರಶಿಯಕ್ಕೇ ವಿಪತ್ಕಾರಕವಾಗಿಬಿಟ್ಟವು. ಲಕ್ಷಾಂತರ ಜನರ, ವಿಶೇಷವಾಗಿ ಎಳೆಯ ತರುಣಿಯರ, ಬಾಳು ಹಾಳಾಯಿತು. ವಿವಾಹ ವಿಚ್ಛೇದಗಳ ಸಂಖ್ಯೆ ಗಗನಸ್ಪರ್ಶಿಯಾಯಿತು. ಅಸಂಖ್ಯ ಗರ್ಭಪಾತಗಳಾದವು. ಬಹುಪತ್ನಿ ಮತ್ತು ಬಹುಪತಿಗಳುಳ್ಳ ತರುಣ-ತರುಣಿಯರಲ್ಲಿ ದ್ವೇಷ ಮತ್ತು ಘರ್ಷಣೆ ಮಿತಿಮೀರಿತು. ಸಂಗ ಡಲೇ ಮನೋವಿಕಾರಗಳು ಕೂಡ. ರಾಷ್ಟ್ರೀಕೃತ ಕಾರಖಾನೆಗಳಲ್ಲಿ ಕೆಲಸದ ಗತಿ ಮಂದವಾ ಯಿತು.

ಯಾಯಿತು. ಬಹುಪತ್ನೀ ಸಂಪ್ರದಾಯದ ಮೂರ್ ಜನಾಂಗವು ಸ್ಪೇನಿಗೆ ಬಂದು ಏಕಪತ್ನೀ ಸಂಪ್ರದಾಯದ ಕ್ರೈಸ್ತ ಮತ್ತು ಯಹೂದ್ಯ ಹೆಂಗಸರನ್ನು ಮದುವೆಯಾದ ನಂತರ ಮೂರರು ದೈವಪ್ರಧಾನ ಸಂಸ್ಕೃತಿಯಿಂದ ವಿಚಾರ ಪ್ರಧಾನ ಸಂಸ್ಕೃತಿಯತ್ತ ಕೆಲ ಮಟ್ಟಿಗೆ ಪ್ರಗತಿ ಹೊಂದಿದರು.

ಬಹುಪತ್ನೀ ಸಂಪ್ರದಾಯವಿದ್ದ ಸಮಾಜಗಳಲ್ಲಿ ಸೃಜನಾತ್ಮಕ ಪ್ರತಿಭೆ ಒಮ್ಮೆಲೇ ಹೊರ ಹೊಮ್ಮಿದ ಉದಾಹರಣೆಗಳಿದ್ದರೂ ಅದಕ್ಕೆ ಎರಡು ಕಾರಣಗಳು ಕಾಣಿಸುತ್ತವೆ: ಹಿಂದಿನ ಹಲವು ತಲೆಮಾರುಗಳಿಂದ ನಡೆದುಬಂದಿದ್ದ ನಿಷ್ಠುರವಾದ ವಿವಾಹೋತ್ತರ ಏಕಪತ್ನೀವ್ರತ (ಉದಾ.— ಆದಿ ಪರ್ಶಿಯನ್ನರು, ಹೂಣರು, ಮಂಗೋಲರು ಮತ್ತು ಮೆಸೆಡೋನಿಯನ್ನರು); ಮತ್ತು ಬಹುಪತ್ನೀ ಸಂಪ್ರದಾಯವಿದ್ದರೂ ಆ ಸಮಾಜಗಳ ಹೆಂಗಸರು ಬಿಗಿಯಾದ ವಿವಾಹೋತ್ತರ ಪಾತಿವ್ರತ್ಯವನ್ನು ಪಾಲಿಸುತ್ತಿದ್ದುದು.

ಸಮಾಜವು ತನ್ನ ಲೈಂಗಿಕ ನಿಯಮಗಳನ್ನು ಸಡಿಲುಗೊಳಿಸಿದಾಗೆಲ್ಲ ಮೂರು ತಲೆಮಾರು ದಾಟುವುದರೊಳಗೆ ಸಾಮಾನ್ಯವಾಗಿ ಅದರ ಸಾಂಸ್ಕೃತಿಕ ಅವನತಿಯಾಗಿದೆ. ಬೇಬಿಲೋನಿಯ, ಪರ್ಶಿಯ, ಮೆಸೆಡೋನಿಯ, ಮಂಗೋಲಿಯ, ಗ್ರೀಸ್ ಮತ್ತು ರೋಂನ ಉತ್ತರ ಕಾಲಗಳಲ್ಲಿಯೂ ಇಜಿಪ್ಟಿನ ಮಧ್ಯ ಮತ್ತು ಕೊನೆಯ ಅವಸ್ಥೆಗಳಲ್ಲಿಯೂ ಇದಕ್ಕೆ ಉದಾಹರಣೆ ಸಿಗುತ್ತದೆ. ವಿವಾಹಪೂರ್ವ ಬ್ರಹ್ಮಚರ್ಯೆ, ವಿವಾಹಾನಂತರ ಏಕನಿಷ್ಠೆ—ಕನಿಷ್ಠ ಹೆಂಗಸರ ಮಟ್ಟಿಗೆ-ಇವು ಅವಶ್ಯಕತೆಯಾಗಿರುವುದರಿಂದ ಈ ನಿಯಮವನ್ನು ಅತಿ ದೀರ್ಘ ಕಾಲ ಪಾಲಿಸಿದ ಸಮಾಜಗಳು ಅತಿ ಹೆಚ್ಚಿನ ಮಟ್ಟಕ್ಕೆ ಮುಟ್ಟಿದ್ದನ್ನು ನಾವು ಕಾಣಬಹುದು.

ಅನ್ವಿನ್ನರ ಸಂಶೋಧನೆಗಳಿಂದ ಬೇಬಿಲೋನಿಯನ್, ಇಜಿಪ್ಶನ್, ಅಥೇನಿಯನ್, ರೋಮನ್, ಆದಿ ಅರಬ ಮತ್ತು ಆಂಗ್ಲೊ ಸ್ಯಾಕ್ಸನ್ ಜನಾಂಗಗಳು ತಮ್ಮ ಸಾಮಾಜಿಕ ವಿಸ್ತರಣೆ ಮತ್ತು ಸಾಂಸ್ಕೃತಿಕ ಮತ್ತು ಬೌದ್ಧಿಕ ವಿಕಾಸದ ಪ್ರಾರಂಭಾವಸ್ಥೆಯಲ್ಲಿ ಏಕಪತ್ನೀವ್ರತಸ್ಥವಾಗಿದ್ದವೆಂದು ಗೊತ್ತಾಗಿದೆ. ಕುಟುಂಬದ ಮೇಲೆ ತಂದೆಯ ಅಧಿಕಾರ, ಹೆಂಡತಿಯ ಮೇಲೆ ಗಂಡನ ಸ್ವಾಮಿತ್ವ ಅಪರಿಮಿತವಾಗಿತ್ತು. ಲೈಂಗಿಕ ಸಂಬಂಧ ಗಂಡಹೆಂಡಿರೊಳಗೇ ನಡೆಯುತ್ತಿತ್ತು. ಒಮ್ಮೊಮ್ಮೆ ನಿಯಮಭಂಗವಾದರೂ ಅವುಗಳ ಸಂಖ್ಯೆ ಕಡಿಮೆಯಾಗಿದ್ದು ಸಮಾಜವು ಅದನ್ನು ಸಹಿಸದೆ ಕಠೋರ ಶಿಕ್ಷೆ ವಿಧಿಸುತ್ತಿತ್ತು. ಲೈಂಗಿಕ ಚಟುವಟಿಕೆಗಳನ್ನು ಮಿತಿಗೊಳಿಸಿದ್ದರಿಂದ ಆ ಸಮಾಜಗಳಲ್ಲಿ ಅಪಾರವಾದ ಸಾಮಾಜಿಕ ಸತ್ವ ಶೇಖರವಾಗಿ, ಬೌದ್ಧಿಕ, ಕಲಾತ್ಮಕ, ಧಾರ್ಮಿಕ ಮತ್ತು ಸಾಮಾಜಿಕ ಪ್ರತಿಭೆಯ ರೂಪದಲ್ಲಿ ಅದು ಹೊರಹೊಮ್ಮಿತು. ಆದ್ದರಿಂದ ಈ ಸಮಾಜಗಳು ಹುರುಪಿನಿಂದ ವಿಸ್ತಾರಗೊಂಡವಲ್ಲದೆ ತಮ್ಮ ಶತ್ರುಗಳ ವಿರುದ್ಧ ಅದ್ಭುತ ಪರಾಕ್ರಮದಿಂದ ಆತ್ಮರಕ್ಷಣೆ ಮಾಡಿಕೊಂಡವು.

ಆದರೆ ಈ ಸಮಾಜಗಳ ವಿಸ್ತರಣೆ ಮತ್ತು ಬೆಳವಣಿಗೆಯೊಡನೆ ನಿಷ್ಠುರವಾದ ಲೈಂಗಿಕ ನಿರ್ಬಂಧಗಳು ಸಡಿಲಾಗುತ್ತ ಹೋದವು. ಲೈಂಗಿಕ ಸ್ವಾತಂತ್ರ್ಯ ವಿಸ್ತರಿಸುತ್ತ ಇಡೀ ಸಮಾಜವನ್ನೇ ವ್ಯಾಪಿಸಿ ಕೊನೆಗೆ ಲೈಂಗಿಕ ಅರಾಜಕತೆಯಲ್ಲಿ ಪರ್ಯವಸಾನ ಹೊಂದಿತು. ಕುಟುಂಬದ ಯಜಮಾನರ ಅಧಿಕಾರದಿಂದ ಹೆಂಡಂದಿರೂ ಮಕ್ಕಳೂ ಬಿಡುಗಡೆ ಹೊಂದಿದರು. ಲೈಂಗಿಕ ಸ್ವಾತಂತ್ರ್ಯ ಗಮನಾರ್ಹವಾಗುವಷ್ಟು ಹೆಚ್ಚಿದ ಮೂರೇ ತಲೆಮಾರುಗಳ ನಂತರ ಈ ಸಮಾಜಗಳ ಸಾಂಸ್ಕೃತಿಕ ಸಾಮಾಜಿಕ ಪ್ರತಿಭೆ ಇಳಿಮುಖವಾಗತೊಡಗಿತು.

ಲೈಂಗಿಕ ಸ್ವಾತಂತ್ರ್ಯ ಹೆಚ್ಚಿದ್ದಕ್ಕೂ ಅವನತಿಯ ಆರಂಭಕ್ಕೂ ನಡುವೆ ಕೆಲ ಕಾಲ ಬೇಕಾಗುತ್ತಿದ್ದರೆ ಹೊಸ ಸಂಪ್ರದಾಯವನ್ನು "ಅರ

ಗಿಸಿ"ಕೊಳ್ಳಲು ಕಿರಿಯ ತಲೆಮಾರುಗಳಿಗೆ ಸ್ವಲ್ಪ ಸಮಯ ಬೇಕಾಗುವುದೇ ಅದಕ್ಕೆ ಕಾರಣ. ಮುಂದೆ ಲೈಂಗಿಕ ಸ್ವಾತಂತ್ರ್ಯದ ವಿಸ್ತರಣೆಯ ಸಂಗ-ಸಂಗಡವೇ ಅವನತಿಯೂ ಸಾಗುತ್ತದೆ. ಆದರೂ ಲೈಂಗಿಕ ಅರಾಜಕತೆಗೆ ತಡೆ ಹಾಕಿ, ನಿರ್ಬಂಧಗಳನ್ನು ಹೇರಿದರೆ ಅವನ-ತಿಗೂ ತಡೆ ಬಿದ್ದು ಒಂದು ಶತಮಾನದೊಳಗೆ ಸಾಂಸ್ಕೃತಿಕ ಸಾಮಾಜಿಕ ಪುನರುತ್ಥಾನ ಪ್ರಾ-ರಂಭವಾಗುತ್ತದೆ. ತಡೆ ಹಾಕದೆ ಹೋದರೆ ಸಮಾಜಗಳ ಅವನತಿ ಬೇಗನೆ ಉದ್ಧರಿಸಲ-ಸಾಧ್ಯವಾಗುವಷ್ಟು ಅಳತೆ ಮೀರಿ ಐತಿಹಾಸಿಕ ಅವಸಾನದಲ್ಲಿ ಪರಿಣಮಿಸುತ್ತದೆ.

ಅನ್ವಿನ್ನರ ಅಧ್ಯಯನದಿಂದ ಹೊರಪಟ್ಟ ಅಂಶ-ಗಳು ಇವು. ಅದರ ಕೆಲ ಕ್ಷುಲ್ಲಕ ವಿವರಗಳು ವಿವಾದಾಸ್ಪದವಾಗಿದ್ದರೂ ಒಟ್ಟಿನಲ್ಲಿ ಈ ತೀರ್ಮಾನವು ಇತರ ವಿದ್ವಾಂಸರಿಂದ ದೃಢಪಡಿ ಸಲ್ಪಟ್ಟಿದೆ.

ಸೋವಿಯಟ್ ರಶಿಯದಲ್ಲಿ ೧೯೨೦-೩೦ ರ ನಡುವೆ ನಡೆಸಿದ ಪ್ರಯೋಗಗಳೂ ಅನೇಕ ನಿರ-ಕ್ಷರಿ ವಸಾಹತು ಜನಾಂಗಗಳ ಅವನತಿಯ ಉದಾಹರಣೆಗಳೂ ಇದಕ್ಕೆ ಹೆಚ್ಚಿನ ಪ್ರಮಾಣ ಗಳನ್ನೊದಗಿಸಿವೆ.

ಸೋವಿಯಟ್ ರಶಿಯವು ಏಕಪತ್ನಿತ್ವ ಮತ್ತು ಪಾತಿವ್ರತ್ಯ ಎಂಬವು ಬರಿ ಬಂಡವಳ ಗಾರ ಸಂಪ್ರದಾಯಗಳೆಂದು ಅವುಗಳನ್ನು ಧಿಕ್ಕ ರಿಸಿ, ಲೈಂಗಿಕ ಸ್ವಾತಂತ್ರ್ಯವನ್ನು ಕಮ್ಯುನಿಸ್ಟ್ ಆರ್ಥಿಕ- ಸಾಮಾಜಿಕ ಸಂಘಟನೆಯ ತಳಹದಿ ಯಾಗಿ ಮಾಡಲು ಯತ್ನಿಸಿದ್ದರ ಪರಿಣಾಮ ಬೋಧಪ್ರದವಾಗಿದೆ.

ಕ್ರಾಂತಿಯ ಮೊದಲ ಹಂತದಲ್ಲಿ ರಶಿಯದ ನಾಯಕರು ವಿವಾಹ ಮತ್ತು ಕುಟುಂಬವನ್ನು ಬುದ್ಧಿಪೂರ್ವಕವಾಗಿ ಧ್ವಂಸ ಮಾಡಲೆಳಸಿದರು. ಅನಿರ್ಬಂಧ ಪ್ರೇಮವನ್ನು ಪ್ರೋತ್ಸಾಹಿಸಲು "ನೀರಿನ ಲೋಟದ ಸಿದ್ಧಾಂತ" ವನ್ನು ಪ್ರಚುರ ಪಡಿಸಲಾಯಿತು. ಒಬ್ಬನಿಗೆ ನೀರಡಿಕೆಯಾಗಿದ್ದರೆ ಅದನ್ನು ಹಿಂಗಿಸಿಕೊಳ್ಳಲು ಯಾವ ಲೋಟ ಉಪ ಯೋಗಿಸಿದರೇನು? ಹಾಗೆಯೆ ಲೈಂಗಿಕ ಆತುರ ವನ್ನು ಒಬ್ಬಾತ ಹೇಗೆ ಹಿಂಗಿಸಿಕೊಂಡರೂ ಬಾಧಕವಿಲ್ಲ- ಇದು ಕಮ್ಯುನಿಸ್ಟ್ ಪಕ್ಷದ ವಾದ ವಾಗಿತ್ತು. ಮದುವೆಗೂ ಆಕಸ್ಮಿಕ ಕಾಮಸಂ-ಬಂಧಕ್ಕೂ ಇದ್ದ ಭೇದವನ್ನು ಕಾಯದೆಯಿಂದ ಕಿತ್ತು ಹಾಕಲಾಯಿತು. ಗಂಡೂ ಹೆಣ್ಣೂ ಸೇರಿ ತಮ್ಮ ಕಾಮವನ್ನು ತೃಪ್ತಿಪಡಿಸಿಕೊಳ್ಳಲು ಅನಿ-ಯಮಿತ ಅಥವಾ ನಿಯಮಿತ ಅವಧಿಯವರೆಗೆ-- ಒಂದು ವರ್ಷ, ಒಂದು ತಿಂಗಳು, ಒಂದು ವಾರ ಅಥವಾ ಕೇವಲ ಒಂದು ರಾತ್ರಿಯ ಮಟ್ಟಿಗೆ— ಮಾಡಿಕೊಂಡ "ಒಪ್ಪಂದ" ವನ್ನಷ್ಟೆ ಕಾಯದೆ ಯಲ್ಲಿ ಉಲ್ಲೇಖಿಸಲಾಗಿತ್ತು. "ವಿವಾಹ"ಗಳನ್ನು ರಿಜಿಸ್ತ್ರಿ ಮಾಡುವುದು ಕೂಡ ಅಗತ್ಯವಿರಲಿಲ್ಲ. ದ್ವಿಪತ್ನಿ ಮತ್ತು ಬಹುಪತ್ನೀ ಸಂಗಕ್ಕೆ ಕೂಡ ಹೊಸ ಕಾಯದೆಗಳು ಮನ್ನಣೆ ಕೊಟ್ಟವು. ಸರ ಕಾರಿ ಸಂಸ್ಥೆಗಳಲ್ಲಿ ಗರ್ಭಪಾತಕ್ಕೂ ಸೌಕರ್ಯ ಒದಗಿಸಲಾಯಿತು. ವಿವಾಹಪೂರ್ವ ಸಂಬಂಧ ವನ್ನು ಹೊಗಳಿದರು; ಪರಸ್ತ್ರೀ - ಪರಪುರುಷ ಸಂಬಂಧವನ್ನು ಸ್ವಾಭಾವಿಕವೆಂದು ಗಣಿಸಿದರು.

ಪರಿಣಾಮ "ಮಾಡಿದ್ದುಣ್ಣೋ ಮಹಾರಾಯ" ಎಂಬಂತಾಯಿತು. ಕೆಲವೇ ವರ್ಷಗಳಲ್ಲಿ ಲೆಕ್ಕ ವಿಲ್ಲದಷ್ಟು ದಿಕ್ಕುಗೇಡಿಗಳಾದ ಮಕ್ಕಳು ಸೋವಿ ಯಟ್ ರಶಿಯಕ್ಕೇ ವಿಪತ್ಕಾರಕವಾಗಿಬಿಟ್ಟವು. ಲಕ್ಷಾಂತರ ಜನರ, ವಿಶೇಷವಾಗಿ ಎಳೆಯ ತರುಣಿಯರ, ಬಾಳು ಹಾಳಾಯಿತು. ವಿವಾಹ ವಿಚ್ಛೇದಗಳ ಸಂಖ್ಯೆ ಗಗನಸ್ಪರ್ಶಿಯಾಯಿತು. ಅಸಂಖ್ಯ ಗರ್ಭಪಾತಗಳಾದವು. ಬಹುಪತ್ನಿ ಮತ್ತು ಬಹುಪತಿಗಳುಳ್ಳ ತರುಣ-ತರುಣಿಯರಲ್ಲಿ ದ್ವೇಷ ಮತ್ತು ಘರ್ಷಣೆ ಮಿತಿಮೀರಿತು. ಸಂಗ ಡಲೇ ಮನೋವಿಕಾರಗಳು ಕೂಡ. ರಾಷ್ಟ್ರೀಕೃತ ಕಾರಖಾನೆಗಳಲ್ಲಿ ಕೆಲಸದ ಗತಿ ಮಂದವಾ ಯಿತು.

ಇದೀ ಪರಿಣಾಮ ಎಷ್ಟು ಭಯಾವಹವಾಗಿತ್ತೆಂದರೆ ಸರಕಾರ ತನ್ನ ನೀತಿಯನ್ನು ತಿರುಗುಮುರುಗು ಮಾಡಬೇಕಾಯಿತು. ಮುಂಚಿನ ಸಿದ್ಧಾಂತವನ್ನು ಕ್ರಾಂತಿ ವಿರೋಧಿಯೆಂದು ಸಾರಿ ಅದರ ಬದಲು ವಿವಾಹಪೂರ್ವ ಬ್ರಹ್ಮಚರ್ಯವನ್ನು ಪ್ರಶಂಸಿಸಿ ವಿವಾಹದ ಪಾವಿತ್ರ್ಯಕ್ಕೆ ಮಹತ್ವ ಕೊಟ್ಟರು. ಗರ್ಭಪಾತವನ್ನು ಪ್ರತಿಬಂಧಿಸಲಾಯಿತು. (೧೯೪೫ ರಿಂದೀಚೆಗಷ್ಟೇ ಇದನ್ನು ತುಸು ಸಡಿಲಿಸಿ, ಅದೂ ತಾಯಿಯ ಆರೋಗ್ಯ ಮತ್ತು ಅಂಥ ಮಹತ್ವದ ಕಾರಣಗಳಿಗಾಗಿ ಗರ್ಭಪಾತ ಮಾಡಲು ಅನುಮತಿ ನೀಡಲಾಗಿದೆ.) ವಿವಾಹ ವಿಚ್ಛೇದದ ಸ್ವಾತಂತ್ರ್ಯವನ್ನು ಬಿಗಿಯಾಗಿ ನಿರ್ಬಂಧಿಸಲಾಯಿತು; ೧೯೪೪ ಜುಲೈ ೪ ರ ಘೋಷಣೆಯಿಂದ ಹೆಚ್ಚಿನ ಜನರಿಗೆ ಅದು ಅಲಭ್ಯವೇ ಆಗಿದೆ. ಈಗಾಗಲೇ ಲೈಂಗಿಕ ನಿರ್ಬಂಧಗಳು ಪರಮಾವಧಿ ಕಠೋರವಾಗಿಬಿಟ್ಟಿವೆಯಾದ್ದರಿಂದ ಈಗ ಅವುಗಳನ್ನು ಸ್ವಲ್ಪ ಸಡಿಲಿಸಿ ಸಾಧಾರಣ ಸ್ಥಿತಿಗೆ ತರುತ್ತಿದ್ದಾರೆ. ಇಂದು ರಶಿಯದಲ್ಲಿರುವಷ್ಟು ಏಕಪತ್ನೀವ್ರತಸ್ಥ, ಸುಸ್ಥಿರ ಸಮಾಜ ಯಾವ ಪಾಶ್ಚಾತ್ಯ ರಾಷ್ಟ್ರದಲ್ಲೂ ಇಲ್ಲ.

ಒಂದೇ ಒಂದು ಆಳಿಕೆಯಲ್ಲಿ ಆದ ಈ ಬದಲಾವಣೆ ಮತ್ತು ಮರುಬದಲಾವಣೆ ಅರ್ಥಪೂರ್ಣವಾಗಿದೆ. ಅಪರಿಮಿತ ಲೈಂಗಿಕ ಸ್ವಾತಂತ್ರ್ಯವು ವಿಶೇಷವಾಗಿ ಸೃಜನಾತ್ಮಕ ವಿಕಾಸದ ಮೇಲೆ ಮಾಡುವ ಘಾತಕ ದುಷ್ಪರಿಣಾಮವನ್ನು ಅದು ಸ್ಪಷ್ಟವಾಗಿ ತೋರಿಸುತ್ತದೆ. *



ಲೋಕವನ್ನೆಲ್ಲಾ ಗೆದ್ದು
ತಾವೆಣಿಸಿದಂತೆ ಅದನು ಮಾಡುವೆವೆಂಬವರಿದ್ದಾರೆ.
ನಾನೆಂಬೆ, ಅವರಿಗಿದು ಸಾಧಿಸದು.
ಲೋಕವೆಂಬುದು ದೇವರ ಪಾತ್ರ;
ಅದನ್ನು ಮಾಡುವೆನೆಂಬ ಮನುಜ ಮೂರ್ಖ.
ಅದನ್ನು ಮಾಡುವಾತ ಕೆಡಿಸುವನು,
ಅದನ್ನು ಕೊಂಬಾತ ಕಳೆಯುವನು.

ಏಕೆನೆ,
ಕೆಲವು ಮುನ್ನುಗ್ಗೀತು,
ಕೆಲವು ಹಿಂದುಳಿದೀತು;
ಕೆಲವು ಬಿಸಿಯಾದೀತು,
ಕೆಲವು ತಂಪಾದೀತು;
ಕೆಲವು ಸಬಲ,
ಕೆಲವು ನಿರ್ಬಲ;
ಕೆಲವು ಮುರಿದೀತು,
ಕೆಲವು ಬಿದ್ದೀತು;
ಬಲ್ಲವರು ತೊರೆಯುವರು ಅತಿಯನ್ನು,
ತೊರೆಯುವರು ಹೆಮ್ಮೆಯನ್ನು.

—ಲಾವೊ ತ್ಸೆ (ಚೀನಿ ತತ್ವಜ್ಞಾನಿ)

ಇದು ಮಕ್ಕಳನ್ನು
ಪೀಡಿಸಿ, ಕಾಡಿಸಿ
ಹೈರಾಣಗೊಳಿಸುತ್ತದೆ



# ಕೋಡಗಗೆಮ್ಮು ಅಜಿಂಕ್ಯವಲ್ಲ

ಚಿಕ್ಕ ಮಕ್ಕಳಿಗೆ ಬರುವ ಸಾಂಸರ್ಗಿಕ ರೋಗಗಳಲ್ಲಿ ನಾಯಿಕೆಮ್ಮಿನಷ್ಟು ಭೀಕರವಾದದ್ದು ಮತ್ತೊಂದಿಲ್ಲ. ಕೋಡಗಗೆಮ್ಮು ಎಂದೂ ಈ ರೋಗಕ್ಕೆ ಹೆಸರಿದೆ. (ಇಂಗ್ಲೀಷಿನಲ್ಲಿ ವ್ಹೂಪಿಂಗ್ ಕಫ್ ಎನ್ನುತ್ತಾರೆ). ಈ ರೋಗವಾದ ಮಗು ಕೆಮ್ಮಲು ತೊಡಗಿತೆಂದರೆ ಹಲವಾರು ಸೆಕಂಡುಗಳ ವರೆಗೆ, ಕೆಲ ಸಲ ಅರ್ಧ ಮಿನಿಟಿನ ವರೆಗೂ ಕೆಮ್ಮುತ್ತಲೇ ಇರುವುದು. ಅದರ ಮುಖ ನೀಲಿಯಾಗಿ ಕಣ್ಣುಗಳು ಕೆಂಪಾಗುವವು. ಕಣ್ಣಿನಲ್ಲಿ ನೀರು ತುಂಬಿಕೊಳ್ಳುವುದು. ಮುಖ ಬಾತಂತಾಗುವುದು. ಕೆಮ್ಮು ನಿಂತ ಬಳಿಕ ಒಂದು ವಿಶಿಷ್ಟ ಬಗೆಯ ಧ್ವನಿ ಹೊರಡುವುದು. ಆ ಧ್ವನಿ ಅನೇಕ ಮಂಗಗಳು ಒತ್ತಟ್ಟಿಗೆ ಕಲೆತು ಪರಸ್ಪರ ಸಂಭಾಷಿಸುತ್ತಿರುವಾಗ ಹೊರಡಿಸುವ ಧ್ವನಿಯಂತಿರುತ್ತದೆ. ಆದ್ದರಿಂದಲೇ ಇದಕ್ಕೆ ಕೋಡಗಗೆಮ್ಮು ಎಂಬ ಹೆಸರು ಬಂದಿರಲಿಕ್ಕೂ ಸಾಕು.

ನಾಯಿಕೆಮ್ಮಿನ ಕಾರಣವನ್ನು ಪ್ರಥಮತಃ ೧೯೦೬ ರಲ್ಲಿ ಬುಸೆಲ್ಸಿನ ಪ್ಯಾಶ್ಚರ್ ಇನ್‌ಸ್ಟಿಟ್ಯೂಟಿನಲ್ಲಿ ಬಾರ್ಡೆ ಮತ್ತು ಗೆಂಗೋ ಎಂಬ ಸಂಶೋಧಕರು ಕಂಡುಹಿಡಿದರು.

ಹಿಮೊಫಾಯಲಸ್ ಪರಟೂಸಿಸ್ ಎಂಬ ಅತಿ ಸೂಕ್ಷ್ಮ ರೋಗಾಣುವಿನಿಂದ ಈ ಕೆಮ್ಮಿನ ರೋಗ ಬರುತ್ತದೆ. ಮೊದಲಿಗೆ 'ವಾಯರಸ್' ಮತ್ತು ಆ ಮೇಲೆ 'ಹಿಮೊಫಾಯಲಸ್ ಪರಟೂಸಿಸ್' ಹೀಗೆ ಎರಡರಿಂದ ಈ ರೋಗ ಬರುತ್ತದೆ ಎಂದು ಕೆಲ ವಿಜ್ಞಾನಿಗಳ ಮತವಿದೆ. 'ವಾಯರಸ್' ಸರ್ವಸಾಮಾನ್ಯ ರೋಗಾಣುವಿಗಿಂತ ಅತಿ ಸೂಕ್ಷ್ಮವಾಗಿರುತ್ತದೆ. ಒಂದು ನೊಣವನ್ನು ಒಂದು ದೊಡ್ಡ ಮೋಟರಿನಷ್ಟು ದೊಡ್ಡದನ್ನಾಗಿ ಮಾಡಿತೋರಿಸುವ 'ಇಲೆಕ್ಟ್ರಾನ್ ಮೈಕ್ರೋಸ್ಕೋಪಿ'ನಲ್ಲಿ ನೋಡಿದಾಗ ಕೂಡ ಈ 'ವಾಯರಸ್' ಒಂದು ಬಿಂದುವಿನಷ್ಟಾಗಿ ಮಾತ್ರ ಕಾಣಿಸುವುದು. ಈ ಜಂತುಗಳು ಮೂಗಿನ ಮೂಲಕ ಪುಪ್ಪುಸವನ್ನು ಸೇರಿಕೊಳ್ಳುವವು. ಹೆಚ್ಚಾಗಿ ಕೋಡಗಗೆಮ್ಮಿನ ಪ್ರಾರಂಭಿಕ ಅವಸ್ಥೆಯಲ್ಲಿರುವ ಮಕ್ಕಳು ಕೆಮ್ಮುವಾಗ ಅವರ ಬಾಯಿ ಮೂಗುಗಳಿಂದ ಹೊರಬೀಳುವ ಸೂಕ್ಷ್ಮತಮ ದ್ರವ ಕಣಗಳಲ್ಲಿ ಇವು ಅಸಂಖ್ಯಾತವಾಗಿ ತೇಲುತ್ತಿರುತ್ತವೆ. ನಿರೋಗಿಯಾದ ಮಕ್ಕಳಿಗೆ ಇವುಗಳ ಸಂಸರ್ಗವಾದರೆ ಅವರ ಪುಪ್ಪುಸ

ಗಳನ್ನು ಸೇರಿ ಇವು ಅಲ್ಲಿ ಬಿಡಾರ ಹೂಡುವವು.

ಜಂತುಗಳು ಪುಪ್ಪುಸವನ್ನು ಸೇರಿ ಅಲ್ಲಿ ಬೆಳೆದು ರೋಗದ ಲಕ್ಷಣ ಕಾಣಿಸಿಕೊಳ್ಳಲು ಒಂದೆರಡು ವಾರಗಳು ಬೇಕಾಗುವವು. ಈ ಅವಧಿಯಲ್ಲಿ ಮಗುವಿಗೆ ತುಂಬ ನೆಗಡಿಯಾಗಿ ಮೂಗಿನಿಂದ ನೀರು ಸೋರುವುದು. ಸಾಮಾನ್ಯ ನೆಗಡಿಗೂ ಇದಕ್ಕೂ ಯಾವ ಅಂತರವೂ ಕಾಣಿಸುವುದಿಲ್ಲವಾದ್ದರಿಂದ ಪಾಲಕರು ಇದರತ್ತ ಅಷ್ಟೊಂದು ಲಕ್ಷ್ಯ ಕೊಡುವುದಿಲ್ಲ. ಕೆಮ್ಮು ಆರಂಭವಾದಾಗ ಸಾಮಾನ್ಯ ಕೆಮ್ಮಿನಂತೆಯೆ ಕಾಣಿಸಿದರೂ ಬರಬರುತ್ತ ಅದರ ಸ್ವರೂಪ ಬದಲಾಯಿಸುತ್ತ ಹೋಗುವುದು. ಕೆಮ್ಮಿನ ಆವೇಗ ಹೆಚ್ಚು ಹೊತ್ತು ಇರುವುದು. ಕೆಮ್ಮಿ ಕೆಮ್ಮಿ ಮಗುವಿನ ಮುಖ ನೀಲಿಗಟ್ಟಿ ಕಣ್ಣಿನಲ್ಲಿ ನೀರು ಬರುವುದು. ಕೆಮ್ಮು ನಿಂತೊಡನೆ ಕೋಡಗಗೆಮ್ಮಿನ ವಿಚಿತ್ರ ಧ್ವನಿ ಹೊರಬೀಳುವುದು. ಧೂಳು, ಹೊಗೆ ಮುಂತಾದವುಗಳ ಸಮ್ಮುಖದಲ್ಲಿ ಕೆಮ್ಮಿನ ಪ್ರಾಬಲ್ಯ ಹೆಚ್ಚುವುದು.

ಜಂತುಗಳು ಶರೀರದಲ್ಲಿ ಸೇರಿ ಮೂರು ವಾರಗಳಾಗುವಷ್ಟು ಹೊತ್ತಿಗೆ ಕೆಮ್ಮು ಈ ಪ್ರಬಲಾವಸ್ಥೆಯನ್ನು ಮುಟ್ಟಿರುತ್ತದೆ. ಮಗುವಿಗೆ ಆಹಾರ ಕೊಟ್ಟಾಗ, ಮಗು ದಣಿದಾಗ, ಸಿಟ್ಟಿಗೆದ್ದಾಗ ಇಲ್ಲವೆ ಗಾಬರಿಗೊಂಡಾಗ ಕೆಮ್ಮು ಒಮ್ಮೆಲೆ ಪುಟಿದೇಳುವುದು. ಕೆಮ್ಮಿ ಕೆಮ್ಮಿ ಮಗು ನಿತ್ರಾಣವಾಗುವುದು. ಅನೇಕ ಸಲ ಕೆಮ್ಮು ನಿಂತೊಡನೆ ವಾಂತಿಯಾಗಿ ಹೊಟ್ಟೆಯೊಳಗಿನ ಅನ್ನ ನೀರು ಹೊರಬೀಳುವುದು. ದಣಿದ ಮಗುವಿಗೆ ಆ ಮೇಲೆ ಜಂಪು ಹತ್ತುವುದು.

ಕೆಮ್ಮು ಬರುವ ಸೂಚನೆ ಕಂಡೊಡನೆ ಮಗು ಗಾಬರಿಯಾಗುತ್ತದೆ. ಮೇಲೆ ಮೇಲೆ ವಾಂತಿಯಾಗಿ ಅದು ಅಶಕ್ತವಾಗತೊಡಗುತ್ತದೆ. ಸರಿಯಾಗಿ ಆಹಾರ, ನಿದ್ರೆಗಳಿಲ್ಲದೆ, ಪುನಃ ಪುನಃ ಕೆಮ್ಮಿನ ಉಪದ್ರವದಿಂದ ಮಗು ಹೈರಾಣಾಗಿ ಹೋಗುತ್ತದೆ.

ಕೆಮ್ಮಿನ ಪ್ರಾಬಲ್ಯ ಮೂರು ನಾಲ್ಕು ವಾರಗಳ ವರೆಗೆ ಇರುತ್ತದೆ. ಆ ಮೇಲೆ ಕೆಮ್ಮಿನ ಎರಡು ಆಘಾತಗಳ ನಡುವಿನ ಅಂತರ ಹೆಚ್ಚಾಗುತ್ತ ಹೋಗುತ್ತದೆ. ಆಘಾತದ ತೀವ್ರತೆಯೂ ಕಡಿಮೆಯಾಗತೊಡಗುವುದು. ಹೀಗೆ ಬೇನೆ ಇಳಿಮುಖವಾಗುತ್ತ ಮತ್ತೆ ನಾಲ್ಕಾರು ವಾರಗಳಲ್ಲಿ ಇಲ್ಲದಂತಾಗುವುದು. ಕೋಡಗಗೆಮ್ಮು ಶುರುವಾಗಿ ಪೂರ್ತಿ ಕಡಿಮೆಯಾಗಲು ಎರಡು-ಮೂರು ತಿಂಗಳು ಹಿಡಿಯುವುದರಿಂದಲೇ ಇದಕ್ಕೆ 'ಎಪ್ಪತ್ತರ ಕೆಮ್ಮು' ಎಂದು ಇನ್ನೊಂದು ಹೆಸರೂ ಬಂದಿದೆ.

ಬೇನೆಯ ಅವಧಿಯಲ್ಲಿ ಮಗುವಿಗೆ ಮತ್ತಾವ ಬೇನೆಯೂ ಅಂಟಿಕೊಳ್ಳದಿದ್ದರೆ ಮೇಲೆ ಹೇಳಿದಂತೆ ಕೋಡಗಗೆಮ್ಮಿನ ಪ್ರಾರಂಭ ಮತ್ತು ಕೊನೆ ಇರುವುದು. ಆದರೆ ಇದು ಪ್ರಾಮುಖ್ಯವಾಗಿ ಪುಪ್ಪುಸದ ಬೇನೆ. ಮಗುವಿನ ರೋಗ ಪ್ರತೀಕಾರಕ ಶಕ್ತಿ ಈ ಸಮಯದಲ್ಲಿ ಕಡಿಮೆಯಾಗಿರುವುದರಿಂದ ಸಹಜವಾಗಿ ಇತರ ರೋಗ ಜಂತುಗಳ ಆಕ್ರಮಣ ಸುಲಭವಾಗಿರುತ್ತದೆ.

ಬೇನೆ ಸುರುವಾಗಿ ಎರಡು ಮೂರು ವಾರಗಳಲ್ಲಿ ದುರ್ಬಲವಾದ ಮಗುವಿಗೆ ಬ್ರಾಂಕ್ಯಾಟಿಸ್, ಬ್ರಾಂಕೊನ್ಯುಮೊನಿಯಾ, ಮಿದುಳಿನ ರಕ್ತಸ್ರಾವ ಅಥವಾ ಅದಕ್ಕೆ ಬಾವು ಬರುವುದೇ ಮುಂತಾದ ರೋಗಗಳು ಅಂಟಿಕೊಳ್ಳುವ ಸಂಭವವಿರುತ್ತದೆ. ಕೆಲ ಸಲ ಕಿವಿ ಮೂಗುಗಳಲ್ಲಿ ರಕ್ತಸ್ರಾವವುಂಟಾಗುವುದೂ ಉಂಟು ಮೂಲ ಬೇನೆಯ ಜೊತೆಗೆ ಇಂಥ ಬೇನೆ ಯಾವುದಾದರೂ ಅಂಟಿಕೊಂಡರೆ ಮಗುವಿನ ಸ್ಥಿತಿ ಇನ್ನಷ್ಟು ಶೋಚನೀಯವಾಗಿ ಅದು ಪ್ರಾಣಕ್ಕೆರವಾಗುವಂಥ ಕಠಿಣ ಸಂಭವ ತಲೆದೋರುತ್ತದೆ.

ಕೋಡಗಗೆಮ್ಮು ಸಾಂಸರ್ಗಿಕ ರೋಗ. ಆದ್ದರಿಂದ ಇದರ ಪ್ರತಿಬಂಧಕ ಉಪಾಯಗಳಲ್ಲಿ ಮೊದಲನೆಯದೆಂದರೆ ಕೋಡಗಗೆಮ್ಮು ಆಗಿರುವ ಮಗುವಿನ ಸಂಪರ್ಕ ಇತರರಿಗಾಗದಂತೆ ನೋಡಿ

ಕೊಳ್ಳುವುದು. ಇಂದಿನ ದಿನಗಳಲ್ಲಿ ಇದು ಸ್ವಲ್ಪ ಕಠಿನಸಾಧ್ಯವೇ ಸೈ. ಕೋಡಗಗೆಮ್ಮಿನ ಪ್ರಾಥಮಿಕ ಅವಸ್ಥೆಯಲ್ಲಿ, ಅದು ಕೋಡಗಗೆಮ್ಮೆಂದು ಗೊತ್ತಾಗುವ ಮೊದಲೇ, ಅದರ ಸಾಂಸರ್ಗಿಕತೆ ಹೆಚ್ಚಾಗಿರುವುದರಿಂದ ಅದು ಅಂಟದಂತೆ ನೋಡಿಕೊಳ್ಳುವುದು ಇನ್ನಷ್ಟು ಕಷ್ಟವಾಗುತ್ತದೆ.

ಆದರೆ ಸುದೈವದಿಂದ ಇಂದು ಮಕ್ಕಳು ಈ ಅಪಾ ಕರ ಬೇನೆಯಿಂದ ತಪ್ಪಿಸಿಕೊಳ್ಳಲು ಅವಶ್ಯ ಎದ ಪ್ರತಿಬಂಧಕ ಔಷಧ ತಯಾರಾಗಿದೆ. ಪ್ಯಲಿಬೇನೆಗೆ ಪ್ರತಿಬಂಧಕ ಚುಚ್ಚುಮದ್ದು ಇರುವಂತೆ ಇದಕ್ಕೂ ಆಂಟಿಜೆನ್ ಇಂಜೆಕ್ಶನ್‌ಗಳಿವೆ—ಒಂದೊಂದು ತಿಂಗಳ ಅಂತರವಿಟ್ಟು ಮೂರು ಇಂಜಕ್ಶನ್ ಮಾಡಿಸಬೇಕಾಗುವುದು. ನಾಲ್ಕೈದು ತಿಂಗಳಿನ ಮಗುವಿಗೂ ಈ ಇಂಜೆಕ್ಶನ್ ಮಾಡಿಸಬಹುದು. ಮಗು ಎರಡು ವರ್ಷದ್ದಾದಾಗ ಒಂದು ಮತ್ತು ಐದು ವರ್ಷದ್ದಾದಾಗ ಒಂದು, ಹೀಗೆ ಒಟ್ಟು ಐದು ಇಂಜೆಕ್ಶನ್ ಮಾಡಿಸಿದರೆ ಕೋಡಗಗೆಮ್ಮಿನಿಂದ ಮಕ್ಕಳನ್ನು ಬಹುಮಟ್ಟಿಗೆ ರಕ್ಷಿಸಿಕೊಳ್ಳಬಹುದು. ಹೀಗೆ ಪ್ರತಿಬಂಧಕ ಇಂಜೆಕ್ಶನ್ ಕೊಡಿಸಿದ ಮಕ್ಕಳಿಗೆ ಒಂದು ವೇಳೆ ರೋಗ ಅಂಟಿಕೊಂಡರೂ ಮತ್ತೊಮ್ಮೆ ಆ ಇಂಜೆಕ್ಶನ್ ಕೊಡಿಸಿದರೆ ಅಂಕೆಗೆ ಬರುತ್ತದೆ. ಆದರೆ ಮೊದಲೇ ಪ್ರತಿಬಂಧಕ ಇಂಜೆಕ್ಶನ್ ಕೊಡಿಸದಿದ್ದ ಮಕ್ಕಳಿಗೆ ರೋಗ ಅಂಟಿದ ಮೇಲೆ ಅದು ವಿಶೇಷ ಪ್ರಯೋಜನಕಾರಿಯಾಗದು.

ಪುಪ್ಪುಸದ ಪ್ರತೀಕಾರಶಕ್ತಿಯನ್ನು ಹೆಚ್ಚಿಸಲು ವಿಟ್ಯಾಮಿನ್ 'ಎ' ತುಂಬ ಉಪಯುಕ್ತವಾಗಿದೆ. ಎಂಟಿಜೆನ್ ಇಂಜೆಕ್ಶನ್ ಕೊಟ್ಟ ನಂತರ ಮಕ್ಕಳ ಆಹಾರದಲ್ಲಿ ಹಾಲು, ಟೊಮ್ಯಾಟೊ, ಗಜ್ಜರಿ, ಬೀಟ್, ತತ್ತಿ, ಕಾಡ್ ಲಿವರ್ ಆಯಿಲ್ ಇವುಗಳಲ್ಲಿ ಕೆಲವನ್ನು ನಿಯಮಿತ ರೂಪದಲ್ಲಿ ಕೊಡಬೇಕು. ವಿಟ್ಯಾಮಿನ್ ' ' ಗುಳಿಗೆಗಳು ಉಪಯುಕ್ತವಾಗುವವಾದರೂ ಆಹಾರದಲ್ಲಿ ತಾಜಾ ಪದಾರ್ಥಗಳನ್ನು ಉಪಯೋಗಿಸುವುದು ಹೆಚ್ಚು ಪರಿಣಾಮಕಾರಿಯೂ ಕಡಿಮೆ ವೆಚ್ಚದ್ದೂ ಆಗಿರುತ್ತದೆ.

ಮಕ್ಕಳಿಗೆ ಸ್ವಚ್ಛ ಬಯಲು ಹವೆ ದಿನದಲ್ಲಿ ಎರಡು ಮೂರು ತಾಸಾದರೂ ಸಿಗುವಂತೆ ನೋಡಿಕೊಳ್ಳಬೇಕು. ಅವುಗಳಿಗೆ ನೆಗಡಿಯಾಗದಂತೆ ಜಾಗ್ರತೆ ವಹಿಸಬೇಕು.

ಪ್ರತ್ಯಕ್ಷ ಕೋಡಗಗೆಮ್ಮು ಆದಾಗ ಮಗು ಮನೆಯ ಹಾಗೂ ನೆರೆಹೊರೆಯ ಮಕ್ಕಳೊಂದಿಗೆ ಬೆರೆಯದಂತೆ ನೋಡಿಕೊಳ್ಳಬೇಕು. ಕನಿಷ್ಠ ಪಕ್ಷಕ್ಕೆ ಅದಕ್ಕೆ ಕೆಮ್ಮು ಬಂದಾಗ ಅದನು ಕೂಡಲೆ ಇತರ ಮಕ್ಕಳಿಂದ ದೂರ ಒಯ್ಯಬೇಕು. ಮಗುವನ್ನು ಹಾಸಿಗೆ ಅಥವಾ ಲೋಡಿಗೆ ಆನಿಸಿ ಕೂಡ್ರಿಸಬೇಕು. ಮಲಗಿಸಬಾರದು. ಮಲಗಿಸಿದರೆ ಕೆಮ್ಮಿನ ಬಲ ಹೆಚ್ಚುವುದು. ಮಗುವನ್ನು ತೆರೆದ ಕಿಡಿಕಿಯ ಬಳಿ ಅವನ ಮೈಗೆ ಗಾಳಿ ಹತ್ತದಂತೆ ಕೂಡ್ರಿಸಬೇಕು. ಎದೆಯ ಮೇಲೆ ಬಿಸಿನೀರಿನ ಬಾಟ್ಲಿ ಅಥವಾ ಚೀಲವನ್ನಿಡುವುದರಿಂದ, ಎದೆ-ಬೆನ್ನುಗಳ ಮೇಲೆ ನೀಲಗಿರಿಯ ನಾಲ್ಕೈದು ಹನಿಗಳನ್ನು ಹಾಕಿ ಮೆಲ್ಲಗೆ ತಿಕ್ಕುವುದರಿಂದ ಕೆಮ್ಮಿನ ತೀವ್ರತೆ ಕಡಿಮೆಯಾಗುವುದು. ರೋಗಿ ಮಗುವನ್ನು ಆದಷ್ಟು ಹೆಚ್ಚು ಸ್ವಚ್ಛ ಬೆಳಕು, ಗಾಳಿ ಇರುವ ಕೋಣೆಯಲ್ಲಿ ಮಲಗಿಸಿಯೆ ಇರಬೇಕು.

ಕೋಡಗಗೆಮ್ಮಿಗೆ ಔಷಧಿಯೆ ಇಲ್ಲ ಎನ್ನುವುದು ಸರಿಯಲ್ಲ. ಕೋಡಗಗೆಮ್ಮನ್ನು ಕೂಡಲೆ ವಾಸಿ ಮಾಡುವ ಔಷಧಿ ಇಲ್ಲವೆನ್ನುವುದು ನಿಜವಾದರೂ ಅದರ ತೀವ್ರತೆಯನ್ನೂ ಕಷ್ಟವನ್ನೂ ನಿವಾರಿಸುವ ಔಷಧಿಗಳಿವೆ. ಶ್ವಾಸನಲಿಕೆಗಳ ಮೇಲಿನ ಸ್ನಾಯುಗಳನ್ನು ಸಡಿಲು ಮಾಡುವ 'ಎಂಟಿ ಸ್ಪೆಸ್ಮಾಡಿಕ್' ಔಷಧಿಗಳು, ಕಫವನ್ನು ಕರಗಿಸುವ 'ಸ್ಟಿಮುಲಂಟ್ ಎಕ್ಸ್‌ಪೆಕ್ಟೊರಂಟ್ಸ್", ರೋಗಿಗೆ ಆರಾಮೆನಿಸಲು ನಿದ್ದೆ ಬರುವುದಕ್ಕಾಗಿ "ಸಿಡೇಟಿವ್ಸ್" ಔಷಧಿಗಳು— ಇವು ಕೋಡಗಗೆಮ್ಮಿ

ನಲ್ಲಿ ಉಪಯುಕ್ತವೆನಿಸುವವು. ಕೋಡಗಗೆಮ್ಮಿನ ಪೇಟೆಂಟ್ ಔಷಧಿಗಳಲ್ಲೆಲ್ಲ ಮೇಲೆ ಹೇಳಿದ ಮೂರು ಬಗೆಯ ಔಷಧಿಗಳಿರುತ್ತವೆ. ಆಂಟಿ ಬಾಯೊಟಿಕ್ಸ್ (ಪೆನಿಸಿಲಿನ್ ಇತ್ಯಾದಿ) ಔಷಧಿಗಳು ಹಿತಕಾರಕವಾದರೂ ಅವುಗಳ ತಪ್ಪು ಉಪಯೋಗದಿಂದ ತುಂಬ ಅಪಾಯ ಬರುವುದರಿಂದ ಡಾಕ್ಟರರ ಸಲಹೆಯಿಲ್ಲದೆ ಅವನ್ನೆಂದೂ ಉಪಯೋಗಿಸಬಾರದು.

ಇಂದು ಚಿಕ್ಕ ಹಸುಳೆಗಳನ್ನು ಡಿಟಿಪಿ ಎಂಬ ಪ್ರತಿಬಂಧಕ ವ್ಯಾಕ್ಸಿನ್ ಇಂಜಕ್ಶನ್ನಿನ ಮೂಲಕ ಮಕ್ಕಳ ಮೂರು ಅಪಾಯಕಾರಿ ರೋಗಗಳಿಂದ ರಕ್ಷಿಸುವ ಪರಿಪಾಠ ಬೆಳೆಯುತ್ತಿದೆ. ಈ ಮೂರು ರೋಗಳೆಂದರೆ ಡಿಫ್ತೀರಿಯ, ಧನುರ್ವಾತ (ಟಿಟಾನಸ್) ಮತ್ತು ಕೋಡಗಗೆಮ್ಮು. ಸಶಕ್ತವಾಗಿದ್ದರೆ ಮೂರು ತಿಂಗಳ ಮಗುವಿಗೂ ಇದನ್ನು ಚುಚ್ಚಬಹುದು. ಒಂದೊಂದು ತಿಂಗಳ ಅಂತರದಲ್ಲೇ ಇದನ್ನೂ ಕೊಡಿಸುವುದು. ಮೂರು ರೋಗಗಳಿಂದ ಏಕಕಾಲದಲ್ಲಿ ರಕ್ಷಣೆ ಕೊಡುವ ಈ ಚುಚ್ಚುಮದ್ದು ಹಣವನ್ನೂ ಸಮಯವನ್ನೂ ಉಳಿಸುತ್ತದೆ. *

—ವಿವಿಧ ಮೂಲಗಳಿಂದ.

## ಸೌಜನ್ಯ

ನಾನೇನೊ ಬಲು ಚಿಕ್ಕ ಮೂರ್ತಿ. ಪುಕ್ಕಟೆಯಾಗಿ ನನ್ನನ್ನು ಹೊಂದಬಹುದು. ಆದರೂ ನನ್ನ ಬೆಲೆ ಚಿನ್ನಕ್ಕಿಂತಲೂ ಹೆಚ್ಚಾಗಿದೆ. ನಾನು ಬಾಗಿಲುಗಳ ಬೀಗ ತೆಗೆಯಬಲ್ಲೆ, ಹೃದಯಗಳನ್ನು ಅರಳಿಸಬಲ್ಲೆ. ಸದ್ಭಾವನೆಯನ್ನು ನಿರ್ಮಿಸಬಲ್ಲೆ, ಯಾವ ಕಾಯಿದೆಯನ್ನೂ ಮುರಿಯುವುದಿಲ್ಲ. ನನ್ನನ್ನಾರೂ ತಿರಸ್ಕರಿಸುವುದಿಲ್ಲ. ಎಲ್ಲೆಲ್ಲಿಯೂ ನನಗೆ ಸ್ವಾಗತವಿದೆ.—ನನ್ನ ಹೆಸರು ಸೌಜನ್ಯ.

## ಘನತೆ

ಜನ್ಮತಃ ಸಭ್ಯಗೃಹಸ್ಥನಾಗಿರುವುದು ಒಂದು ಯೋಗಾಯೋಗ. ಆದರೆ ಸಾಯುವಾಗ ಸಭ್ಯಗೃಹಸ್ಥನಾಗಿರುವುದರಲ್ಲಿ ನಿಜವಾದ ಘನತೆಯಿದೆ.

ಅವರು ಸಾಲು ಮರಗಳನ್ನು ನಟ್ಟು
ಮರುಭೂಮಿಯನ್ನು
ಹುಲುಸುಗೊಳಿಸಿದರು

# ಪಶ್ಚಿಮ ಅಮೇರಿಕವನ್ನುಳಿಸಿದ ವನಮಹೋತ್ಸವ



ಮೆಗಜೀನ್ ಡೈಜೆಸ್ಟಿನ ಆಧಾರದಿಂದ

೧೯೩೨ ರಲ್ಲಿ ಅಮೇರಿಕದ ಅಧ್ಯಕ್ಷಪದಕ್ಕಾಗಿ ಚುನಾವಣೆಯ ಸತ್ರ ನಡೆಸುತ್ತಿದ್ದ ಫ್ರಾಂಕ್ಲಿನ್ ರೂಜವೆಲ್ಟರು ಒಂದು ರೈಲು ಅಘಘಾತದ ದೆಸೆಯಿಂದ ಬುಟ್ಟೀ ಎಂಬ ಊರಲ್ಲಿ ನಿಲ್ಲಬೇಕಾಯಿತು. ತಮ್ಮ ಗಾಡಿಯಿಂದ ಹೊರಗೆ ಹಣಕಿ ನೋಡುತ್ತ ಕುಳಿತ ಅವರಿಗೆ ಕಣ್ಣು ನಿಲುಕುವವರೆಗೂ ಕಾಣಿಸಿದ್ದು ಬಟ್ಟಂಬಯಲೇ ಬಯಲು. ಬರಗಾಲದ ಆ ವರ್ಷ ನೀರಿನ ಆಶ್ರಯವಿಲ್ಲದೆ ಭೂಮಿ ಒಣಗಿ ಹೋಗಿತ್ತು. ಬೀಸುವ ಗಾಳಿಯಲ್ಲಿ ಮೇಲಿನ ಮಣ್ಣು ಧೂಳಾಗಿ ಹಾರಿ ಇಡೀ ನಾಡು ಮರುಭೂಮಿಯಾಗಿ ಹೋಗಿತ್ತು. ಧೂಳು ಮರುಭೂಮಿಯ ಉಸುಬಿನ ಹಾಗೆ ದಂಡೆದಂಡೆಯಾಗಿ ಶೇಖರಿಸಿತ್ತು.

ಅದು ಪಶ್ಚಿಮ ಅಮೇರಿಕದ "ಧೂಳಿನ ಬುಟ್ಟಿ" ಎಂದು ಪ್ರಸಿದ್ಧವಾಗಿದ್ದ ಮರುಭೂಮಿಯಾಗಿತ್ತು. ಸಂಯುಕ್ತ ಸಂಸ್ಥಾನ ಅಮೇರಿಕದ ೪೮ ರಾಜ್ಯಗಳ ಪೈಕಿ ಅದು ಆರು ರಾಜ್ಯಗಳಲ್ಲಿ ವ್ಯಾಪಿಸಿತ್ತು. ೫ ಕೋಟಿ ಎಕರೆ ಕೃಷಿ ಭೂಮಿಯನ್ನು ಅದು ಬಂಜರು ಕೆಡಹಿತ್ತು.

ಈ ಮರುಭೂಮಿ ದೈವನಿರ್ಮಿತವಾಗಿರಲಿಲ್ಲ, ಮಾನವ ನಿರ್ಮಿತವಾಗಿತ್ತು. ಒಂದು ಕಾಲದಲ್ಲಿ ಇದು ಹುಲುಸಾದ ಪ್ರದೇಶವಾಗಿತ್ತು. ಬಿಳಿಯ ರೈತರು ಮಿತಿಮೀರಿದ ಲಾಭದಾಶೆಯಿಂದ ಅಸಂಖ್ಯವಾಗಿ ಮರಮಟ್ಟುಗಳನ್ನು ಕಡಿದು ನೆಲವನ್ನು ಬಿತ್ತಿದರು. ದಶಕಾನುದಶಕಗಳ ವರೆಗೆ ನಡೆದ ಈ ಕ್ರಮ ಮತ್ತು ಭೂಮಿಯಲ್ಲಿ ಪರಮಾವಧಿ ಬೆಳೆ ತೆಗೆಯುವ ಹವ್ಯಾಸದಿಂದ ಸಾವಿರಾರು ಚದರ ಮೈಲು ಪ್ರದೇಶದಲ್ಲಿ ಮಳೆ ಕಡಿಮೆಯಾಗಿ ಹೋಯಿತು, ನೆಲ ನಿಸ್ಸಾರವಾಗಿಹೋಯಿತು. ಮೇಲ್ಮಣ್ಣು ಗಾಳಿಯಲ್ಲಿ ಹಾರಿ ಒಂದು ಕಾಲದಲ್ಲಿ ಸಮೃದ್ಧವಾಗಿದ್ದ ಭೂಮಿಯು ಕಣಜ ಹಾಳು

ಬಿದ್ದು ಹೋಯಿತು. ರೈತರು ಕಂಗಾಲಾದರು. ಆದರೆ ೧,೦೦೦ ಮೈಲುದ್ದ ೧೦೦ ಮೈಲಗಲದ ಪ್ರದೇಶದಲ್ಲಿ ಹಿಂದಿನ "ಧೂಳಿನ ಬುಟ್ಟಿ" ಇಂದು ನಳನಳಿಸುವ ಉದ್ಯಾನಗಳಿಂದ ಶೋಭಿಸುತ್ತಿದೆ. ಹಿಂದೆಂದೂ ಹಣ್ಣಿನ ಗಿಡಗಳು ಬೆಳೆಯದಿದ್ದಲ್ಲಿ ಇಂದು ಬೆಳೆಯುತ್ತಿವೆ. ಗೋದಿ, ಹತ್ತಿಗಳ ಬೆಳೆ ಮೊದಲಿಗಿಂತ ಸೇಕಡಾ ೨೫-೩೦ ರಷ್ಟು ಹೆಚ್ಚಿದೆ. ಈ ಪವಾಡಸದೃಶ ಪರಿವರ್ತನೆಯಲ್ಲದಿದ್ದರೆ ಇಷ್ಟರೊಳಗೆ ಇಲ್ಲಿನ ರೈತರು ಎಂದೋ ತಮ್ಮ ಭೂಮಿಯನ್ನು ತೊರೆದು ಹೊರಟು ಹೋಗಬೇಕಾಗುತ್ತಿತ್ತು.

ಈ ಪವಾಡವನ್ನು ಯಾರು ಸಾಧಿಸಿದರು? ಮರಗಳು—ಮರಗಳ ಸಾಲುಗಳು. ರೈಲು ಅಪಘಾತದ ದೆಸೆಯಿಂದ ತಮ್ಮ ಲಕ್ಷ್ಯವನ್ನು ಸೆಳೆದ ಈ ಪ್ರದೇಶವನ್ನು ರೂಜವೆಲ್ಟರು ಮರೆಯಲಿಲ್ಲ. ಆರಿಸಿ ಬಂದೊಡನೆ ಅವರು ಇಲ್ಲಿ ಮರ ನೆಡುವ ಯೋಜನೆ ಮಾಡಿದರು.

ಒಂದು ಲಕ್ಷ ಚದರ ಮೈಲು ವಿಸ್ತಾರವಾದ ಈ ವೃಕ್ಷಾರೋಪಣ ಪ್ರದೇಶವು ಇಂದು "ರಕ್ಷಣ ವಲಯ ಪ್ರದೇಶ"ವೆಂದು ಹೆಸರಾಗಿದೆ. ನೀವು ವಿಮಾನದಲ್ಲಿ ಹಾರಾಡಿದರೆ ಇಲ್ಲಿನ ನಾಡು ಒಂದು ಮಹಾ ಚದುರಂಗದ ಹಾಸಂಗಿಯಂತೆ ಕಾಣುತ್ತದೆ. ಅದರ "ಮನೆ"ಗಳು ಹಸುರು ಗೆರೆಗಳಿಂದ ರಚಿಸಲ್ಪಟ್ಟಂತೆ ತೋರುತ್ತದೆ. ಅವು ವೃಕ್ಷಗಳ ಸಾಲುಗಳು.

ರಕ್ಷಣ ವಲಯ ಯೋಜನೆಗೆ ಕಾರಣನಾದವನು ಎಡ್ವರ್ಡ್ ಮುನ್ಸ್ ಎಂಬವನು. ಆತನೊಬ್ಬ ಪ್ರತಿಭಾವಂತ ನಿಸರ್ಗಪ್ರೇಮಿ. ಅರಣ್ಯಾಧಿಕಾರಿಗಳಿಂದ ನೇಮಿಸಲ್ಪಟ್ಟ ಆತ ತನ್ನ ವೃಕ್ಷಾರೋಪಣ ಯೋಜನೆಯನ್ನು ಪ್ರಕಟಿಸಿದಾಗ ಅದಕ್ಕೆ ಪ್ರಚಂಡ ವಿರೋಧ ಎದುರಾಯಿತು. ಅರಣ್ಯ ತಜ್ಞರು "ಹುಚ್ಚು ಯೋಜನೆ!" ಎಂದರು. "ಹಣ ಹಾಳು ಮಾಡುವ ಹಂಚಿಕೆ" ಎಂದು ಕರಕೊಡುವವರು ಕೂಗಿದರು. "ರೂಜವೆಲ್ಟನ ರಾಜಕೀಯ ಗತ್ತು" ಎಂದು ರಾಜಕಾರಣಿಗಳು ಹೇಳಿದರು. ಅವರನ್ನೆಲ್ಲ ಮನವೊಲಿಸಲು ಬಹಳ ಸಮಯ ಹಿಡಿಯಿತು. ಇಂದು ಅದೇ ವಿರೋಧಿಗಳು "ಕಾರ್ಯಕ್ರಮದ ಸಾಫಲ್ಯ ಅದ್ಭುತವಾಗಿದೆ" ಎಂದು ಒಪ್ಪಿಕೊಳ್ಳುತ್ತಾರೆ.

ಪ್ರಥಮ ಸಸಿಗಳು ೧೯೩೫ರಲ್ಲಿ ನೆಡಲ್ಪಟ್ಟವು. ಎಂಟೇ ವರ್ಷಗಳಲ್ಲಿ ೨೨.೫ ಕೋಟಿ ಸಸಿಗಳನ್ನು ನೆಟ್ಟಾಗಿತ್ತು. ೧೯೪೫ ರೊಳಗೆ ಕೆಲ ಮರಗಳು ೫೦ ಅಡಿ ಎತ್ತರಕ್ಕೆ ಬೆಳೆದಿದ್ದವು—ಮತ್ತು ಪವಾಡ ಪ್ರಾರಂಭವಾಗಿಹೋಗಿತ್ತು.

ಇಡೀ ಯೋಜನೆಯನ್ನು ಒಂದು ಬರಗಾಲ ಕಾಮಗಿರಿಯ ಹಾಗೆ ಜಾರಿಗೆ ತರಲಾಯಿತು. ಈ ಪ್ರದೇಶದಲ್ಲಿ ೩೨,೦೦೦ ಫಾರ್ಮುಗಳಿದ್ದವು. ಅವುಗಳ ರೈತರು ವಿಪನ್ನಾವಸ್ಥೆಯಲ್ಲಿದ್ದರು. ಅವರಿಗೇ ಮಜೂರಿ ಕೊಟ್ಟು ಸಸಿಗಳನ್ನು ನಡಿಸಲಾಯಿತು. ಒಟ್ಟು ಐದು ಕೋಟಿ ರೂಪಾಯಿ ವೆಚ್ಚ ಬಂತು. ಏನು ಮಹಾ? ಎರಡನೇ ಮಹಾಯುದ್ಧದ ಒಂದು ತಾಸಿನ ವೆಚ್ಚ ಇದಕ್ಕೂ ಹೆಚ್ಚಾಗಿತ್ತು.

ರಕ್ಷಣವಲಯ ಪ್ರದೇಶದ ಚದುರಂಗದ ಹಾಸಂಗಿಯ ಪ್ರತಿಯೊಂದು ಚಚ್ಚೌಕ "ಮನೆ" ೬೪೦ ಎಕರೆ ವಿಸ್ತಾರವಾಗಿದೆ. ಪ್ರತಿಯೊಂದು ಚಚ್ಚೌಕದ ಸುತ್ತಲೂ ಏಳೇಳರಿಂದ ಹತ್ತುಹತ್ತು ಮರಗಳ ಸಾಲುಗಳು. ಕೆಲ ವೇಳೆ ಚೌಕದ ಒಳಗೂ ಮೂಲೆಯಿಂದ ಮೂಲೆಗೆ ಮರಗಳ ಧಾರೆ. ಈ "ಮನೆ"ಯೊಳಗೆ ಹೊಲಗಳು, ತೋಟಗಳು.

ಮರಗಳು ತಮ್ಮ ಪವಾಡವನ್ನು ಸಾಧಿಸುವ ಬಗೆ ಹೀಗೆ: ಗಾಳಿ ಭರದಿಂದ ಬೀಸುವಾಗ ಇವು ಅದಕ್ಕೆ ತಡೆಹಾಕಿ ಅದರ ಗತಿಯನ್ನು ಮೇಲಕ್ಕೆ ತಿರುಗಿಸುತ್ತವೆ. ಇದರಿಂದ ನೆಲದ ಮೇಲೆ ಗಾಳಿಯ ಹೊಡೆತ ತಟ್ಟುವುದಿಲ್ಲ. ಧೂಳೆದ್ದು ಮೇಲ್ಮಣ್ಣು ಹಾರುವುದಿಲ್ಲ. ಮರಗಳು ಬೇಸಗೆಯಲ್ಲಿ ನೆಲದ ತೇವ ಆವಿಯಾಗಿ ಹೋಗುವು

ದನ್ನು ತಡೆಯುವುದರಿಂದ ಮಣ್ಣು ಹಸಿಯಾಗಿದ್ದು ನೆಲಕ್ಕೇ ಅಂಟಿಕೊಂಡಿರುತ್ತದೆ. ಅವು ಗಾಳಿಯ ರಭಸವನ್ನು ಕುಗ್ಗಿಸಿ ಬೆಳೆಗಳಿಗಾಗುವ ಹಾನಿಯನ್ನೂ ತಪ್ಪಿಸುತ್ತವೆ.

ಎಂಟೆಂಟು-ಹತ್ತುಹತ್ತು ಅಡಿ ದೂರದಲ್ಲಿರುವ ಮರಗಳ ಸಾಲುಗಳೆಲ್ಲ ಒಂದೇ ಬಗೆಯ ಸಸ್ಯಗಳಲ್ಲ. ಹೊರಗಿನ ಸಾಲಿನಲ್ಲಿ ಕುಳ್ಳನ್ನ ಪೊದೆಗಳು, ನಡುವೆ ಎತ್ತರದ ಬೇಗ ಬೆಳೆಯುವ ವೃಕ್ಷಗಳ ಸಾಲು. ಒಂದೊಂದು ವಲಯ ಅರ್ಧರ್ಧ ಮೈಲು ಉದ್ದವಾಗಿರುತ್ತದೆ.

ಅಲ್ಲಲ್ಲಿಯ ಮಣ್ಣಿಗೆ ಮಳೆಗೆ ಸರಿಹೊಂದುವ ಹಾಗೆ ವಿಜ್ಞಾನಿಗಳು ದೇಶವೆಲ್ಲ ಸುತ್ತಿ ಕಷ್ಟಜೀವಿಗಳೂ ಗಾಳಿಯ ಪೆಟ್ಟು ತಡೆದುಕೊಳ್ಳಬಲ್ಲವೂ ಆದ ೪೫ ಜಾತಿಯ ಮರಗಿಡಗಳನ್ನಾರಿಸಿ ಯೋಜನೆಗಾಗಿ ಉಪಯೋಗಿಸಿಕೊಂಡರು. ಕುರಿ, ಆಡು, ದನಗಳಿಂದ ಸಸಿಗಳನ್ನು ರಕ್ಷಿಸುವ ಸಲುವಾಗಿ ವಲಯಗಳ ಸುತ್ತ ತಂತಿಬೇಲಿಗಳನ್ನು ಹಾಕಿಸಲಾಗಿತ್ತು.

ಇಪ್ಪತ್ತೆರಡೂವರೆ ಕೋಟಿ ಅಗೆಗಳನ್ನು ಅಣಿಗೊಳಿಸುವುದೇನೂ ಚಿನ್ನಾಟದ ಮಾತಾಗಿರಲಿಲ್ಲ. ಅದೂ ಬೇರೆ ಬೇರೆ ಹವಾಮಾನಗಳನ್ನು ತಡೆದುಕೊಳ್ಳುವವುಗಳೂ ಐದಾರು ತಿಂಗಳೊಳಗೆ ನಡಲು ಬರುವಷ್ಟು ಬೆಳೆಯತಕ್ಕವೂ ಆಗಿರಬೇಕಿತ್ತು. ಆದರೆ ಸರಕಾರಿ ಅರಣ್ಯ ಶಾಖೆಯ ನರ್ಸರಿಗಳಲ್ಲಿ ಈ ಸಮಸ್ಯೆಯನ್ನು ಯಶಸ್ವಿಯಾಗಿ ಎದುರಿಸಲಾಯಿತು.

ಪ್ರಾರಂಭದಲ್ಲಿ ರೈತರು ಈ ಯೋಜನೆಯನ್ನು ಸಂದೇಹದಿಂದಲೇ ನೋಡಿದರು. ಕೆಲವರು ಖಡಾಖಂಡಿತವಾಗಿ ಅಸಹಕಾರ ಮಾಡಿದರು. ಆದರೆ ರಕ್ಷಣವಲಯದ ಯೋಜನೆಯಲ್ಲಿ ಸೇರಿದ ನೆರೆಯ ರೈತರು ವಿಪುಲವಾದ ಪೈರು ಕೊಯ್ಯುತ್ತಿರುವಾಗ ಅಸಹಕಾರ ಕೈಕೊಂಡವರು ಪೂರ್ತಿ ಪೈರನ್ನು ಕಳೆದುಕೊಳ್ಳುತ್ತಿರುವುದು ಯೋಜನೆಯ ಪ್ರಾರಂಭವಾಗಿ ಎರಡೇ ವರ್ಷಗಳಲ್ಲಿ ಪ್ರತ್ಯಕ್ಷ ನಿದರ್ಶನಕ್ಕೆ ಬಂದ ಮೇಲೆ ಬೇರೆ ಮನವೊಲಿಸುವಿಕೆ ಬೇಕಾಗಲಿಲ್ಲ.

ರೈತರಿಗೆ ವೃಕ್ಷಯೋಜನೆಯಿಂದ ಕನಸಿನಲ್ಲಿಯೂ ನೆನಸದ ಪ್ರಯೋಜನಗಳು ಲಭಿಸಿದವು. ಹಾಕಿದ ಬೀಜ ಹಾರಿಹೋಗುವುದೂ ಗಾಳಿ ತಂದೊಟ್ಟಿದ ಧೂಳಿನಲ್ಲಿ ಅವು ಹೂಳಿ ಹೋಗುವುದೂ ನಿಂತಿತು; ಚಳಿಗಾಲದ ಕುಳಿರ್ಗಾಳಿಗೆ ಸಾಕು ಪ್ರಾಣಿಗಳು ಸಾಯುವುದು ಕಡಿಮೆಯಾಯಿತು; ಬಿದ್ದ ಮಂಜು ಆವಿಯಾಗಿ ಹೋಗದೆ ನೆಲ ತಂಪಾಯಿತು; ಉರಿಸಲು ಕಟ್ಟಿಗೆ ಸಿಕ್ಕಿತು; ಈ ಮರಗಳ ಆಶ್ರಯಕ್ಕೆ ಬಂದ ಮೃಗಪಕ್ಷಿಗಳು ಮಾಂಸಕ್ಕೂ ಆದವು. ಒಟ್ಟಿನ ಮೇಲೆ ಹತ್ತು ವರ್ಷದ ಅನುಭವದ ನಂತರ ಕೇವಲ ಸೇಕಡಾ ಹತ್ತಂಶ ಸ್ಥಳಗಳಲ್ಲಿ ಮಾತ್ರ ಯೋಜನೆ ಅಷ್ಟು ಫಲಕಾರಿಯಾಗಲಿಲ್ಲ ಎಂದು ಕಂಡುಬಂತು.

ಯುದ್ಧ ಮುಗಿದು ವಿದೇಶಗಳಿಂದ ಅಮೇರಿಕನ್ನರು ಮರಳಿದಾಗ ಹತ್ತು ವರ್ಷದ ಹಿಂದೆ ರೈತರು ತಳ ಕೀಳುತ್ತಿದ್ದ ಈ ಪ್ರದೇಶದಲ್ಲಿ ಹತ್ತಾರು ಸಾವಿರ ಹೊಸ ಫಾರ್ಮುಗಳನ್ನು ಸ್ಥಾಪಿಸಿ ಸಾವಿರಾರು ಕುಟುಂಬಗಳಿಗೆ ಜೀವನೋಪಾಯ ತೋರಿಸಲು ಸಾಧ್ಯವಾಯಿತು.

ಯೋಜನೆಯ ಯಶಸ್ಸು ಜಗತ್ಪ್ರಸಿದ್ಧವಾಯಿತು. ೧೯೪೫ ರಷ್ಟರಲ್ಲಿ ಆಗಲೆ ಹತ್ತಾರು ದೇಶಗಳ ತಜ್ಞರು ಅಮೇರಿಕಕ್ಕೆ ಬಂದು ರಕ್ಷಣ ವಲಯ ಯೋಜನೆಯನ್ನು ಅಭ್ಯಸಿಸಿದ್ದಾಗಿತ್ತು. ಇಂಗ್ಲಂಡ್, ಅಮೇರಿಕ, ರಶಿಯಾ, ಅಸ್ಟ್ರೇಲಿಯ, ಡೆನ್ಮಾರ್ಕ್, ಭಾರತ ಎಲ್ಲೆಡೆಗಳಿಂದಲೂ ಬಂದವರಿದ್ದರು. ವಿಸ್ತಾರವಾದ ಮರುಭೂಮಿಯುಳ್ಳ ಇಜಿಪ್ತ್ ಸದ್ಯಕ್ಕೆ ಸಹರಾದ ಅಂಚಿನಲ್ಲಿ ಮರುಭೂಮಿಯನ್ನು ಪುನಃ ಸಸ್ಯಸಮೃದ್ಧಗೊಳಿಸುವ ಉಪಕ್ರಮವನ್ನು ಯಶಸ್ವಿಯಾಗಿ ಪ್ರಾರಂಭಿಸಿದ್ದರಲ್ಲಿ ಅಮೇರಿಕದ ಅನುಭವದ ಉಪಯೋಗವನ್ನು ಸಾಕಷ್ಟು ಮಾಡಿಕೊಂಡಿದೆ. *

ನಮ್ಮ ಅಖಿಲೇಶ ದಿನವಿಡಿಯ ೨೪ ಗಂಟೆಗಳಲ್ಲಿ ೧೫-೧೬ ಗಂಟೆ ಕೆಲಸ ಮಾಡುತ್ತಲೇ ಇರುತ್ತಾನೆ. ಕೆಲವೊಮ್ಮೆ ಅದು ೧೯ ಗಂಟೆಗಳ ವರೆಗೂ ತಲುಪುವುದುಂಟು. ಆ ಕುರಿತು ಧೂರಿಟ್ಟಾಗ... 'ಏನು ಮಾಡಲಿ? ಕೆಲಸವೇ ಮುಗಿಯುವುದಿಲ್ಲ!—' ಎನ್ನುತ್ತಾನವನು.

ಜೀವನದಲ್ಲಿ ನಿಜಕ್ಕೂ ಸಮಯಕ್ಕೆ ಸರಿಯಾಗಿ ಆಟ-ಪಾಟ, ಊಟ, ತಿರುಗಾಟ ಮೊದಲಾದವನ್ನು ನೆರವೇರಿಸಲು ಬಿಡುವು ದೊರೆಯದಷ್ಟೂ ಕೆಲಸವಿದೆಯೆ?

ಕೆಲಸ. ಅಂದರೆ ಅವರನ್ನು ಕಂಡಾಗ ಕೆಲಸ ಹೆಚ್ಚುತ್ತ ಹೋಗುತ್ತದೆ.

೨ ನೇ ಮಹಾಯುದ್ಧ ಭಯಂಕರ ರೂಪ ತಳೆದಿದ್ದಾಗ ಇಂಗ್ಲೆಂಡಿನ ಪ್ರಧಾನಮಂತ್ರಿ ಚರ್ಚಿಲರು ಸೇನಾಪತಿ 'ಮಾಂಟಗುಮರಿ'ಗೆ ಒಂದು ಸಂದೇಶ ಕಳುಹಿಸಿ, ರಾತ್ರಿ ೧೨ ಗಂಟೆಗೆ ಸರಿಯಾಗಿ ಅಗತ್ಯದ ಮೀಟಿಂಗಿಗಾಗಿ ಬರಬೇಕೆಂದು ತಿಳಿಸಿದರು.

'೧೨ ಗಂಟೆಗೆ ನಾನು ಮೀಟಿಂಗಿಗೆ ಬರಲಾರೆ, ಏಕೆಂದರೆ ಅದು ನನ್ನ ನಿದ್ರಾಸಮಯ.'

---

ನೀವೂ ಹೀಗನ್ನುತ್ತಿರಬಹುದಲ್ಲವೆ?

# ಕೆಲಸವೇ ಮುಗಿಯುವುದಿಲ್ಲ!

**ಕನ್ಹೈಯ್ಯಾಲಾಲ ಮಿಶ್ರ ಪ್ರಭಾಕರ**

---

ನಿಜಕ್ಕೂ ಬದುಕಿನಲ್ಲಿ ಇಷ್ಟು ಕೆಲಸ ತುಂಬಿದ್ದರೆ ಅದು ಬದುಕಿನ ಸ್ವಸ್ಥರೂಪವೆನಿಸೀತೆ? ಮನುಷ್ಯ ಈ ರೀತಿ ಕೆಲಸಗಳಿಗೆ ಅಂಟಿಕೊಂಡು ಯಂತ್ರವೆನಿಸಬೇಕೆ?— ಎಂಬೊಂದು ಉಪಪ್ರಶ್ನೆಯೂ ಏಳುತ್ತದೆ.

ನನ್ನ ದೀರ್ಘ ಅನುಭವದ ಆಧಾರದ ಮೇಲೆ ಹೇಳುವುದಾದರೆ ಇವೆರಡು ಪ್ರಶ್ನೆಗಳಿಗೂ 'ಇಲ್ಲ' ಹಾಗೂ 'ಬೇಡ' ಎಂಬ ಉತ್ತರಕೊಡುತ್ತೇನೆ.

*

ಕೆಲಜನರಿಗೆ ಕೆಲಸ ಮಾಡುತ್ತಿರುವುದೇ

ಸೇನಾಪತಿ ಮಾಂಟಗುಮರಿಯ ಯುದ್ಧ ಸಂಸ್ಮರಣೆಯಲ್ಲಿ ಅವರ ದಿನಚರಿಯಿದೆ. ಅವರು ಯುದ್ಧರಂಗದಲ್ಲೇ ಒಂದು ಟ್ರಕ್ಕಿನೊಳಗೆ ನಿದ್ರಿಸುತ್ತಾರೆ. ೯ ಗಂಟೆಗೆ ಸರಿಯಾಗಿ ಅವರು ತಮ್ಮ ಟ್ರಕ್ಕಿನೊಳಗೆ ನುಗ್ಗುವರು ಮತ್ತು ನಿದ್ರೆಯ ಉಡುಗೆಯನ್ನುಟ್ಟು, ಒಂದು ಕಪ್ಪು ಚಹ ಕುಡಿದು ಮಲಗುವರು; ತುಸುಹೊತ್ತು ಕಾದಂಬರಿಯೋದುತ್ತಿದ್ದು ಮತ್ತೆ ನಿದ್ದೆ ಹೋಗುವರು. ಅವರ ಟ್ರಕ್ಕಿನಿಂದ ತುಸು ದೂರದಲ್ಲೇ ಬಾಂಬು ವೃಷ್ಟಿಯಾಗುತ್ತಿದ್ದರೂ ಅವರು ನಿದ್ದೆ ಹೋಗು

ತ್ತಿದ್ದರು. ನಿದ್ದೆಗೇನೂ ವಿಘ್ನವಾಗುತ್ತಿರಲಿಲ್ಲ.

ಸೇನಾಪತಿ ಮಾಂಟಗುಮರಿಯವರಿಗಿಂತಲೂ ನನ್ನ ಮಗ ಅಖಿಲೇಶನ ಹೊಣೆಗಾರಿಕೆ ಹೆಚ್ಚಿನದೆ? ಇರಲಾರದೆಂದು ಯಾರಿಗೂ ಹೊಳೆಯುವುದು.

*

ಸಾಬರಮತಿ ಆಶ್ರಮದಲ್ಲಿ ಹಲವರ್ಷಗಳ ಹಿಂದೆ ಒಂದು ಘಟನೆ ನಡೆಯಿತು ಭೋಜನದ ಗಂಟೆ ಬಾರಿಸಿದಾಗ ಆಶ್ರಮವಾಸಿಗಳೆಲ್ಲ ಭೋಜನಾಲಯಕ್ಕೆ ಧಾವಿಸಿದರು. ಗಾಂಧೀಜಿಯವರೂ ತಮ್ಮ ಬಟ್ಟಲು ಹಿಡಿದು ಹೊರಟರು. ಆದರೆ ಆಗಲೇ ಒಬ್ಬ ಪರಿಚಿತರು ಸಿಕ್ಕಿದುದರಿಂದ ಗಾಂಧೀಜಿಯವರು ಅವರೊಡನೆ ಒಂದೂವರೆ ಮಿನಿಟು ಮಾತಾಡಬೇಕಾಯಿತು. ಗಂಟೆ ಬಾರಿಸಿದ ೨ ಮಿನಿಟಿನೊಳಗೆ ಭೋಜನಾಲಯದ ಬಾಗಿಲು ಮುಚ್ಚಬೇಕೆಂಬುದು ಆಶ್ರಮದ ನಿಯಮ. ಆಗಲೇ ಅಭೂತಪೂರ್ವದೃಶ್ಯ ಕಾಣಿಸಿತು. ಒಂದೆಡೆ ಗಾಂಧೀಜಿ ಓಡೋಡಿ ಬರುತ್ತಿದ್ದಾರೆ. ಇನ್ನೊಂದೆಡೆ ವ್ಯವಸ್ಥಾಪಕರು ಒಳಗಿನಿಂದ ಬಾಗಿಲು ಹಾಕಲು ಬರುತ್ತಿದ್ದಾರೆ.

ವ್ಯವಸ್ಥಾಪಕರು ೫-೬ ಸೆಕೆಂಡ ತಡೆದರು. ಆದರೆ ನಿಯಮಭಂಗದ ಭಯದಿಂದ ಹೆಚ್ಚು ತಡೆಯಲಿಲ್ಲ. ಗಾಂಧೀಜಿಯವರು ಬರುವಷ್ಟರಲ್ಲೇ ಬಾಗಿಲು ಹಾಕಲ್ಪಟ್ಟಿತು; ಮತ್ತು ಎರಡು ಅಟ್ಟಹಾಸಗಳು ಪ್ರತಿಧ್ವನಿಸಿದವು. ಒಂದು ಅಟ್ಟಹಾಸ ಗಾಂಧೀಜಿಯದು; ಇನ್ನೊಂದು ವ್ಯವಸ್ಥಾಪಕರದು . . . . . !

ವ್ಯವಸ್ಥಾಪಕ ಮತ್ತೊಂದು ಮಿನಿಟು ತಡೆದಿದ್ದರೆ ಅಂಥ ಪ್ರಳಯ ಏನಾಗುತ್ತಿತ್ತು? ಆಗ ಗಾಂಧೀಜಿಯವರು ಮೊದಲ ಪಂಕ್ತಿಯಲ್ಲೇ ಊಟಮಾಡುತ್ತಿದ್ದರಲ್ಲ?

ಪ್ರಳಯವೇನೋ ಆಗುತ್ತಿರಲಿಲ್ಲ, ನಿಜ; ಆದರೆ ಈ ನಿಯಮ ಶೈಥಿಲ್ಯವೇ ಅಖಿಲೇಶನಿಗೆ ಸ್ವಲ್ಪವೂ ಬಿಡುವು ಕೊಡಿಸುತ್ತಿದ್ದಿಲ್ಲ; ಮತ್ತು ನಿಯಮಪಾಲನೆಯೇ ಮಾಂಟಗುಮರಿಗೆ ಅಂಥ ಯುದ್ಧರಂಗದಲ್ಲೂ ನಿದ್ರೆಗೆ ಅವಕಾಶ ಕೊಡಿಸುತ್ತಿತ್ತು. . . . . . ! ಆದ್ದರಿಂದ ಕಿರಿದಾದರೂ ಇದರ ಬಗ್ಗೆ ಹೆಚ್ಚುಗಮನ ಕೊಡಬೇಕಾದುದು ಅಗತ್ಯ.

*

ಕೆಲಸವನ್ನು ಕೆಲಸದಂತೆಯೇ ಮಾಡಿದರೆ ಅದು ನಿನ್ನ ವಶದಲ್ಲುಳಿಯುತ್ತದೆ. ಅದರ ಬದಲು ಕೆಲಸವನ್ನು ಕೆಲಸದಂತೆ ಮಾಡದಿದ್ದರೆ ಅದೇ ನಿನ್ನನ್ನು ವಶದಲ್ಲಿಟ್ಟುಕೊಳ್ಳುತ್ತದೆ. ನನ್ನ ಆಫೀಸಿನ ಪಕ್ಕದಲ್ಲೇ ಒಂದು ಕಂಪನಿಯ ಕಾರ್ಯಾಲಯವಿತ್ತು. ಮೂವರು ಅದರ ಪ್ರಮುಖ ಕಾರ್ಯಕರ್ತರು; ಮತ್ತು ಕಾರ್ಯಾಲಯದ ಬೀಗದ ಕೈ ಸಂಜೆ ದೊಡ್ಡ 'ಮ್ಯಾನೇಜರರ ಬಳಿಯಿರುತ್ತಿತ್ತು.

ಬೆಳಿಗ್ಗೆ ೯ ಗಂಟೆಗೆ ಉಳಿದ ಕೆಲಸಗಾರರು ಬಂದಾಗ ಬಾಗಿಲು ಮುಚ್ಚಿರುತ್ತಿತ್ತು. ಹೆಚ್ಚು ತಡವಾದರೆ ಇತರ ಕಾರ್ಯಕರ್ತರೂ ಹೊರಗೆ ಅಡ್ಡಾಡುತ್ತಿರುತ್ತಾರೆ. ಯಾರಾದರೂ ಮ್ಯಾನೇಜರರಲ್ಲಿಗೆ ಹೋಗಿ ಬೀಗದ ಕೈ ಕೇಳಿದರೂ ಅವರು ಮನೆಯಲ್ಲಿರುವುದೇ ಕಡಿಮೆ

'ಐದಾಣೆಯಿಂದ ಈ ಸಮಸ್ಯೆಯನ್ನು ಬಿಡಿಸಬಹುದು' —ಒಂದು ದಿನ ನಾನು ಅವರೊಡನೆ ಹೇಳಿದೆ.

'ಅದೆಂತು?'

'ಐದಾಣೆಯೊಳಗೆ ಈ ಬೀಗಕ್ಕೆ ಇನ್ನೆರಡು ಕೈಗಳನ್ನು ಮಾಡಿಸಿ ಬಿಡಿ; ಒಂದನ್ನು ಸಣ್ಣ ಮ್ಯಾನೇಜರರಿಗೂ ಇನ್ನೊಂದನ್ನು ಲೇಬರ್ ಇನ್‌ಚಾರ್ಜರಿಗೂ ಕೊಟ್ಟು ಬಿಡಿ. ಮೊದಲು ಬಂದವರು ಬೀಗ ತೆಗೆಯುತ್ತಾರೆ.' ಇಷ್ಟು ಸಣ್ಣ ಕೆಲಸಕ್ಕಾಗಿ ತಮ್ಮ ಸಮಯವೆಷ್ಟು ನಷ್ಟವಾಗುತಿತ್ತೆಂದು ಅವರು ತುಂಬಾ ಲಜ್ಜಿತರಾದರು

*

ಧನಿಕ ಮಿತ್ರರೊಬ್ಬರಿದ್ದಾರೆ.... ಅವರ ಆಳು

ದಿನವಿಡೀ ತಿರುಗಾಡಿ ತಿರುಗಾಡಿ ದಣಿಯುತ್ತಿದ್ದ, ಆದರೆ ಸಂಜೆ 'ನೀನೇನೂ ಕೆಲಸ ಮಾಡಿಲ್ಲ' ವೆಂದೇ ಧನಿಕರು ದೂರುತ್ತಾರೆ.

ಸತ್ಯ ಸಂಗತಿಯೇನಂದರೆ, ಅವರು ಆಳಿಗೆ ಒಂದು ಕೆಲಸ ಹೇಳುತ್ತಾರೆ. ಅದರಂತೆ ಅವನು ಪೇಟೆಯಿಂದ ಸಾಮಾನು ತರುತ್ತಾನೆ. ಆ ಬಳಿಕ ಒಂದು ಪತ್ರ ಕೊಟ್ಟು 'ಆ ಸೇಠರಿಗೆ ಕೊಟ್ಟು ಬಾ' ಎಂದು ಮತ್ತೆ ಕಳಿಸುತ್ತಾರೆ. ಆಳು ಇದೀಗ ಪೇಟೆಗೆ ಹೋಗಿ ಸಾಮಾನು ತಂದಿದ್ದ-ನಲ್ಲಾ, ಆ ಅಂಗಡಿಯ ಪಕ್ಕದಲ್ಲೇ ಸೇಠರ ಮನೆಯಿದೆ! ಧನಿಕರು ಈ ಕಾಗದವನ್ನು ಮೊದಲೇ ಕೊಡುತ್ತಿದ್ದರೆ ತಾನು ಮೊದಲ ಬಾರಿಯೇ ಮುಟ್ಟಿಸುತ್ತಿದ್ದೆನಲ್ಲಾ – ಎಂದು ಆಳು ಯೋಚಿಸುತ್ತಾನೆ. ಈ ಯೋಚನೆ ಸರಿಯಷ್ಟೆ.

ಈ ಧನಿಕರು ಕೆಲಸವನ್ನು ಕೆಲಸದಂತೆ ಮಾಡಲು ಅರಿತಿಲ್ಲ—ಎಂಬುದು ಸ್ಪಷ್ಟ!

*

'ಕೆಲಸವನ್ನು ಸಂಗ್ರಹಿಸು; ಚದರಿಸಬೇಡ'- ಇದೂ ಒಂದು ಗಾದೆಯ ನುಡಿ. ಹಾಗೆಂದರೇನು?—ಎಂಬ ಪ್ರಶ್ನೆಯೇಳುತ್ತದೆ. ಒಂದು ದೊಡ್ಡ ಪರಿವಾರ ನನಗೆ ತುಂಬ ಪರಿಚಿತ. ಸ್ನಾನದ ವೇಳೆ ಟವೆಲ್ ಹಾಗೂ ಧೋತರ ಸರಿಯಾಗಿ ಸಿಗುತ್ತಿಲ್ಲವೆಂದು ದಿನಾಲೂ ಕೋಲಾಹಲ ಕೇಳಿಸುತ್ತದೆ.

'ಬುದ್ಧೂ; ನನ್ನ ಟವೆಲ್ ಎಲ್ಲಿ ಸುಟ್ಟು ತಿಂದೆ?'— ಎಂದು ದಿನಾಲೂ ಕೂಗಾಡುವುದನ್ನು ನಾನು ಕೇಳುತ್ತೇನೆ.

ಒಂದು ದಿನ ನಾನು ಸೇವಕನನ್ನು ಕರೆದು ಹೀಗೆಂದೆ— 'ದಿನಾಲೂ ಟವೆಲು, ಧೋತರಗಳು ಒಣಗಿದೊಡನೆಯೇ ಸ್ನಾನಗೃಹದಲ್ಲಿ ತೂಗು ಹಾಕಿ ಬಿಡು. ಯಾರು ಯಾವಾಗ ಸ್ನಾನಕ್ಕೆ ಬಂದರೂ ಅವರಿಗದು ಸಿಕ್ಕಿ ಬಿಡುವುದು.' ಈ ಬಗ್ಗೆ ನಾನು ನಾಲ್ಕಾರು ಗೂಟಗಳನ್ನು ತರಿಸಿ ಸ್ನಾನಗೃಹದಲ್ಲಿ ಹೊಡೆಯಿಸಿಬಿಟ್ಟೆ. ಇದೇ ಕೆಲಸವನ್ನು ಸಂಗ್ರಹಿಸುವ ಕ್ರಮ.

*

ಸಾಹಿತ್ಯಿಕ ಮಿತ್ರರೊಬ್ಬರ ಮನೆಗೆ ಹೋದಾಗ ಬರೆಯುವ ಮೇಜಿನಮೇಲೆ 'ಇಲೆಕ್ಟ್ರಿಕ್ ಟೇಬಲ್ ಲ್ಯಾಂಪ್' ಇದ್ದುದನ್ನು ನೋಡಿದೆ. ಅದರ ಬಳಿಯಲ್ಲೇ ಲಾಟೀನೂ ಒಟ್ಟಿಗೆ ಬೆಂಕಿಪೆಟ್ಟಿಗೆಯೂ ಇತ್ತು.

'ಈ ಲಾಟೀನು ಇಲ್ಲೇಕಿದೆ?'

'ಬರೆಯುತ್ತ ಬರೆಯುತ್ತ ವಿದ್ಯುದ್ದೀಪ ನಂದಿ ಹೋದರೆ, ಲಾಟೀನು ಹಚ್ಚುತ್ತೇನೆ... ಹೀಗೆ ವ್ಯರ್ಥದ ಹುಡುಕಾಟದಿಂದ ತಪ್ಪಿಸಿಕೊಳ್ಳು-ತ್ತೇನೆ—' ಅವರೆಂದರು.

ಇದೇ ಕೆಲಸದ ವಿಧಿ. ಕೆಲಸ ಮಾಡುವ ವಿಧಿಯನ್ನು ಅಂಚೆಪೇದೆಯಿಂದ ಕಲಿಯಿರಿ. ಅವನು ನೂರಾರು ಮನೆಗಳ ಪತ್ರಗಳನ್ನು ಕ್ರಮವಾಗಿ ಜೋಡಿಸಿಟ್ಟುಕೊಳ್ಳುತ್ತಾನೆ. ಮತ್ತು ಹೆಜ್ಜೆಯೊಂದಿಗೇ ಮನೆಮನೆಗೆ ಹಂಚುತ್ತ ಹೋಗುತ್ತಾನೆ. ಇದಕ್ಕೇ ವ್ಯವಸ್ಥೆಯೆನ್ನುತ್ತಾರೆ! *

ಅನುವಾದ : **ಬಳ್ಕೂರು ಸುಬ್ರಾಯ ಅಡಿಗ**



**ಪ್ರೊಫೆಸರ್ ಅಂದರೆ ಕಾಲೇಜನ್ನು ಸೇರಿದ ಬಳಿಕ ಅದನ್ನು ಬಿಡದಿರುವವರು.**

* *

**ಹೆಂಗಸರನ್ನು ಅರ್ಥಮಾಡಿಕೊಳ್ಳಲಾರದ ಎರಡು ಬಗೆಯ ಗಂಡಸರಿರುತ್ತಾರೆ—ಬ್ರಹ್ಮಚಾರಿಗಳು ಮತ್ತು ಗಂಡಂದಿರು.**

# ನಿಮ್ಮ ಮನೆಯಿಂದ ನೋವನ್ನು ನಿವಾರಿಸಲು...










# ಸಾರಿಡಾನ್ ಉಪಯೋಗಿಸಿರಿ

ತಲೆನೋವು, ಮೈಕೈನೋವು, ಹಲ್ಲುನೋವು, ಮೈಬಿಸಿಯಾಗುವುದು, ಅಸ್ವಸ್ಥತೆ ಇತ್ಯಾದಿಗಳಿಂದ ನಿಮ್ಮ ಮನೆಯವರು ಯಾರಾದರೂ ಕಷ್ಟ ಪಡುವಾಗ ಅವರಿಗೆ ಸಾರಿಡಾನ್ ಕೊಡಿರಿ... ಅವರಿಗೆ ಶೀಘ್ರವಾಗಿ, ನಿರಪಾಯಕರವಾಗಿ ಮತ್ತು ನಿಶ್ಚಯವಾಗಿ ಉಪಶಮನವುಂಟಾಗುವುದು. ಸಾರಿಡಾನ್ ವಿಶ್ರಾಂತಿಯನ್ನು ಮತ್ತು ಉಲ್ಲಾಸವನ್ನು ಕೂಡ ನೀಡುತ್ತದೆ! ದೊಡ್ಡವರಿಗೆ ಒಂದು ಮಾತ್ರೆ ಮತ್ತು ಮಕ್ಕಳಿಗೆ ¼ ರಿಂದ ½ ಮಾತ್ರೆ ಸಾಕು.







ಒಂದೇ ಒಂದು ಮಾತ್ರೆ ಸಾಕು

'ರೋಶ್' ಉತ್ಪಾದನೆ    ಸೋಲ್ ಡಿಸ್ಟ್ರಿಬ್ಯೂಟರ್ಸ್ : ವೋಲ್ಟಾಸ್ ಲಿಮಿಟೆಡ್




ತಪ್ಪು ಹೆಜ್ಜೆ ಇಟ್ಟವರು ಮುಗ್ಗರಿಸಲೇಬೇಕು

# ಪೋಲೀಸರ ಮೇಲೆ ವಿಜಯ

ಕೆ. ಎಂ. ಮುನಶಿ

೧೯೪೩ ರ ಸುಮಾರಿಗೆ, ಅಮೃತಸರದಲ್ಲಿ ಬಂಧಿಸಲ್ಪಟ್ಟು, ಸಂರಕ್ಷಣ ಕಾಯದೆಯ ೧೨೯ ನೆ ಕಲಮಿನನ್ವಯ ಲಾಹೋರ್ ಫೋರ್ಟಿನಲ್ಲಿ ಸ್ಥಾನಬದ್ಧತೆಯಲ್ಲಿಡಲ್ಪಟ್ಟಿದ್ದ ಶ್ರೀ ಜಯಪ್ರಕಾಶ ನಾರಾಯಣರ ಪರವಾಗಿ ವಕಾಲತ್ತು ವಹಿಸಲು ಮಿನೂ ಮಸಾನಿಯವರು ನನ್ನನ್ನು ಕೇಳಿಕೊಂಡರು. ಜಯಪ್ರಕಾಶ ನಾರಾಯಣರ ಪರವಾಗಿ ಲಾಹೋರ್ ಹೈಕೋರ್ಟಿನಲ್ಲಿ ಕ್ರಿಮಿನಲ್ ಪ್ರೊಸೀಜರ್ ಕೋಡಿನ ೪೯೧ ನೆ ಕಲಮಿನನ್ವಯ ಹೇಬಸ್ ಕಾರ್ಪಸ್ ಅರ್ಜಿಯನ್ನು ದಾಖಲು ಮಾಡಲಿದ್ದರು. ಆಗ ಲಾಹೋರ್ ಪೋಲೀಸರ ಕ್ರೂರ ದಬ್ಬಾಳಿಕೆಗೊಳಗಾಗಿತ್ತು. ಲಾಹೋರ್ ಫೋರ್ಟಿನಲ್ಲಿ ಪೋಲೀಸರ ದಂಡನೀತಿ ದೇಶದ ತುಂಬೆಲ್ಲ ಕುಪ್ರಸಿದ್ಧವಾಗಿತ್ತು. ಈ ಕಾರಣಗಳ ಮೂಲಕ ಜಯಪ್ರಕಾಶರ ಸ್ಥಾನಬದ್ಧತೆಯ ಪ್ರಕರಣ ತುಂಬಾ ಗಂಭೀರ ಸ್ವರೂಪಕ್ಕೆ ತಿರುಗಿತ್ತು.

ಈಗ ಸುಪ್ರೀಂ ಕೋರ್ಟಿನ ಅಡ್ವೊಕೇಟರಾಗಿರುವ ಶ್ರೀ ಪುರುಷೋತ್ತಮ ತ್ರಿಕಮದಾಸರು ಆಗ ಕಾಸೂರ ಜೇಲಿನಲ್ಲಿ ಸ್ಥಾನಬದ್ಧತೆಯಲ್ಲಿ

‘ಭವನ್ಸ್ ಜರ್ನಲ್’ ನಿಂದ

ದ್ದರು. ಅವರು ಮುಂಬಯಿಯಲ್ಲಿಯ ತಮ್ಮ ಮಿತ್ರರಿಗೆ ಮತ್ತು ಆಗ ಲಾಹೋರಿನ ಪ್ರಸಿದ್ಧ ವಕೀಲರಾಗಿದ್ದ ಶ್ರೀ ಜೀವನಲಾಲ ಕಪೂರರಿಗೆ (ಈಗ ಇವರು ಸುಪ್ರೀಂ ಕೋರ್ಟಿನ ಜಜ್ಜರಾಗಿದ್ದಾರೆ) ಜಯಪ್ರಕಾಶರಿಗೆ ಏನೂ ಅಪಾಯವಾಗದಂತೆ ನೋಡಿಕೊಳ್ಳಬೇಕೆಂದು ಸಂದೇಶಗಳನ್ನು ಕಳಿಸಿದ್ದರು. ಮುಂಬಯಿಯ ಪ್ರಸಿದ್ಧ ವಕೀಲಿ ಸಂಸ್ಥೆಯಾದ ಮೆಸರ್ಸ್ ಕಂಗಾ ಆ್ಯಂಡ ಕಂ. ಯವರು ಅರ್ಜಿಯನ್ನು ತಯಾರಿಸಿದ್ದರು.

ಭಾರತದ ಚಲೇಜಾವ್ ಚಳವಳಿಯಲ್ಲಿ ಸ್ಥಾನಬದ್ಧತೆಯಲ್ಲಿಡಲ್ಪಟ್ಟು ೧೯೪೩ ರ ನಡುವಿನ ಸುಮಾರಿಗೆ ಬಿಡುಗಡೆಯಾಗಿದ್ದ ಮುಂಬಯಿಯ ಬ್ಯಾರಿಸ್ಟರ್ ಪಾರ್ಡಿವಾಲಾ ಲಾಹೋರಿಗೆ ತೆರಳಿ ಅರ್ಜಿಯನ್ನು ಸಾದರಪಡಿಸುವ ಹೊಣೆಹೊತ್ತರು. ನಾನು ಅವರಿಗೆ ಜೀವನಲಾಲ ಕಪೂರ ಮತ್ತು ಆರ್ಯಸಮಾಜ ಮುಖಂಡರೂ 'ಪ್ರತಾಪ' ಪತ್ರಿಕೆಯ ಸಂಪಾದಕರೂ ಆಗಿದ್ದ ಶ್ರೀ ಮಹಾಸಾಯಿ ಕೃಷ್ಣರ ಹೆಸರಿನಿಂದ ಪರಿಚಯ ಪತ್ರಗಳನ್ನು ಕೊಟ್ಟೆ.

ಪೋಲೀಸರು ಪಾರ್ಡಿವಾಲಾರ ಬೆನ್ನ ಹಿಂದೆ-ಯೆ ಇದ್ದರು. ಲಾಹೋರಿಗೆ ಹೊರಟ ಪಾರ್ಡಿವಾಲಾರು ದಿಲ್ಲಿಯಲ್ಲಿ ಅರ್ಜಿದಾರಳಾಗಲು ಶ್ರೀಮತಿ ಪೂರ್ಣಿಮಾ ಬ್ಯಾನರ್ಜಿಯವರ ಒಪ್ಪಿಗೆ ಪಡೆಯಲೆಂದು ಇಳಿದರು. ಆಗ ಶ್ರೀಮತಿ ಪೂರ್ಣಿಮಾ ಬ್ಯಾನರ್ಜಿಯವರ ತಂಗಿ ಶ್ರೀಮತಿ ಅರುಣಾ ಅಸಫ ಅಲಿಯವರು ಕಾಂಗ್ರೆಸ್ಸಿನ ಭೂಗತ ಕಾರ್ಯಕರ್ತರಾಗಿದ್ದರು. ಅವರನ್ನು ಹುಡುಕಲು ಪೋಲೀಸರು ಅಸಾಧ್ಯ ಪ್ರಯತ್ನ ನಡೆಸಿಯೂ ವಿಫಲರಾಗಿದ್ದರು. ದಿಲ್ಲಿಯಲ್ಲಿ ಪಾರ್ಡಿವಾಲಾರು ಅವರನ್ನು ಭೆಟ್ಟಿಯಾಗಿದ್ದರೆಂದು ನನಗೇನೂ ಅನಿಸುವುದಿಲ್ಲ. ಆದರೆ ಪೋಲೀಸರಿಗೆ ಮಾತ್ರ ಆ ಸಂಶಯವಿತ್ತು. ಪಾರ್ಡಿವಾಲಾರು ಲಾಹೋರಿಗೆ ಒಯ್ಯುತ್ತಿರುವ ಪತ್ರಗಳು ನಾನು ಕೊಟ್ಟಿದ್ದಲ್ಲ, ಶ್ರೀಮತಿ ಅರುಣಾ ಅಸಫ ಅಲಿಯವರು ಕೊಟ್ಟಿದ್ದು ಎಂದು ಪೋಲೀಸರು ಭಾವಿಸಿದರು.

ನವೆಂಬರ್ ೮ ರಂದು ಪಾರ್ಡಿವಾಲಾರು ಜೀವನಲಾಲ ಕಪೂರರನ್ನು ಕಂಡರು. ಪೂರ್ಣಿಮಾ ಬ್ಯಾನರ್ಜಿಯವರ ಪರವಾಗಿ ಕಪೂರರು ಜಯಪ್ರಕಾಶ ನಾರಾಯಣರನ್ನು ಹಾಜರುಪಡಿಸಬೇಕೆಂಬ ಬಗ್ಗೆ ಹೇಬಸ್ ಕಾರ್ಪಸ್ ಅರ್ಜಿಯನ್ನು ಸಲ್ಲಿಸಿದರು. ಪಾರ್ಡಿವಾಲಾರೂ ಅವರೊಡನೆ ವಕೀಲರಾಗಿ ಹಾಜರಾಗಿದ್ದರು. ಕೋರ್ಟಿನ ಸೂಚನೆಯಂತೆ ಅರ್ಜಿಯಲ್ಲಿ ತಿದ್ದುಪಡಿ ಮಾಡಿದ ಬಳಿಕ ಮಾರನೆಯ ದಿನ ಚೀಫ್ ಜಸ್ಟಿಸ್ ಟ್ರೇವರ್ ಹ್ಯಾರಿಸ್ ಮತ್ತು ಜಸ್ಟಿಸ್ ಅಬ್ದುರ್ ರಿಹಮಾನರಿದ್ದ ಡಿವಿಜನ್ ಬೆಂಚು ಅಪ್ಪಣೆ ಹೊರಡಿಸಿತು. ಜಯಪ್ರಕಾಶರನ್ನು ಭೆಟ್ಟಿಯಾಗಲು ಅವಕಾಶವೀಯಬೇಕೆಂದು ಅರ್ಜಿ ಮಾಡಿಕೊಂಡಿದ್ದಕ್ಕೆ ಕೋರ್ಟು ಕಪೂರರು ಮೊದಲು ಆ ಬಗ್ಗೆ ಸರಕಾರಕ್ಕೆ ಅರ್ಜಿ ಮಾಡಿಕೊಳ್ಳಬೇಕೆಂದೂ ಅಪ್ಪಣೆ ಸಿಗದಿದ್ದರೆ ಕೋರ್ಟಿಗೆ ಅರ್ಜಿ ಮಾಡಬೇಕೆಂದೂ ಹೇಳಿತು.

ಪಂಜಾಬ ಸರಕಾರಕ್ಕೆ ಕೋರ್ಟು ಇತ್ತ ಆದೇಶದ ಮೂಲಕ ಈ ಪ್ರಕರಣ ರೋಮಾಂಚಕಾರಿ ರೂಪ ತಾಳಿತು. ಸುದ್ದಿಸಂಗ್ರಹಕ್ಕಾಗಿ ಪತ್ರಿಕಾ ಸುದ್ದಿಗಾರರು ಮತ್ತು ಸಿ. ಐ. ಡಿ. ಅಧಿಕಾರಿಗಳು ಬಾರ್ ಅಸೋಸಿಯೇಶನ್ನಿನ ಅತಿಥಿ ಕೋಣೆಯಲ್ಲಿ ನೆರೆದರು. ಕೋರ್ಟಿನಲ್ಲಿ ಬೇರಾವುದೊ ಕೆಲಸವಿದ್ದುದರಿಂದ ಕಪೂರರು ಅವರಿಗೆ ಉತ್ತರ ಹೇಳುವ ಭಾರವನ್ನು ಪಾರ್ಡಿವಾಲಾರ ಮೇಲೆ ಹೊರಿಸಿದರು. ತಮ್ಮನ್ನು ಬಾರ್ ಲೈಬ್ರರಿಯಲ್ಲಿ ನಾಲ್ಕು ಗಂಟೆಗೆ ಕಾಣಬೇಕೆಂದು ಪಾರ್ಡಿವಾಲಾರಿಗೆ ತಿಳಿಸಿಹೋದರು. ಲಾಹೋರ್ ಫೋರ್ಟಿನಿಂದ ಜಯಪ್ರಕಾಶರನ್ನು ನೇಪಾಳಕ್ಕೆ ಒಯ್ಯುತ್ತಾರೆಂಬ ಸುದ್ದಿ ಹಬ್ಬಿದ್ದರಿಂದ ವಿಷಯ ಅತ್ಯವಸರದ್ದೂ ಗಂಭೀರವೂ ಆಗಿತ್ತು.

ನಾಲ್ಕು ಗಂಟೆಯ ಸುಮಾರಿಗೆ ಪಾರ್ಡಿವಾಲಾರು ಬಾರ್ ಲೈಬ್ರರಿಗೆ ಹೊರಟಿದ್ದಾಗ ಹಾದಿ

ಯಲ್ಲಿ ಸಬ್ ಇನ್‌ಸ್ಪೆಕ್ಟರ್ ಬೇಗರು ಅವರನ್ನು ನಿಲ್ಲಿಸಿ "ಜಯಪ್ರಕಾಶರ ಅರ್ಜಿ ದಾಖಲು ಮಾಡಲು ಕಪೂರರ ಜೊತೆಯಲ್ಲಿ ಇದ್ದವರು ನೀವೇಯೆ ?" ಎಂದು ಕೇಳಿದರು. ಹೌದು ಎಂಬ ಉತ್ತರ ಬಂದೊಡನೆ ಪಾರ್ಡಿವಾಲಾರನ್ನು ಬಂಧಿಸಲಾಯಿತು. ಲೈಬ್ರರಿಯಲ್ಲಿ ಅವರಿಗಾಗಿ ಕಾಯುತ್ತಿದ್ದ ಕಪೂರರನ್ನು ಕಾಣಲು ಪಾರ್ಡಿವಾಲಾರಿಗೆ ಬಿಡಲಿಲ್ಲ. ಸಿ. ಐ. ಡಿ. ಸುಪರಿಂಟೆಂಡೆಂಟ್ ರಾಬಿನ್‌ಸನ್ನರಲ್ಲಿಗೆ ಬಂದು ತಮ್ಮನ್ನು ಕಾಣಬೇಕೆಂದು ಕಪೂರರಿಗೆ ಹೇಳಿ ಕಳಿಸಲು ಕೂಡ ಪೋಲೀಸರು ಪ್ರತಿಬಂಧಿಸಿದರು.

ಇಷ್ಟರಲ್ಲಿ ಜೀವನಲಾಲ ಕಪೂರರ ಸ್ನೇಹಿತ ಪೋಲೀಸ ಅಧಿಕಾರಿಯೊಬ್ಬ ಅವರಿಗೆ "ನಿಮ್ಮನ್ನು ಬಂಧಿಸಿ ಲಾಹೋರ್‌ಫೋರ್ಟಿಗೆ ಒಯ್ಯಲಿದ್ದಾರೆ" ಎಂದು ತಿಳಿಸಿದ. ಲಾಹೋರ್ ಫೋರ್ಟಿನ ಅನಾರೋಗ್ಯಕರವಾದ ಜೇಲು ಕೋಣೆಗಳಲ್ಲಿರಲು ಬಯಸದ ಜೀವನಲಾಲರು ಚೀಫ್‌ಜಸ್ಟಿಸ್ ಸರ್ ಟ್ರೇವರ್ ಹ್ಯಾರಿಸರ ಕೋಣೆಗೆ ಹೋಗಿ, ಅವರ ಕೋರ್ಟಿನಲ್ಲಿ ವಕಾಲತ್ತು ಮಾಡುವುದು ತುಂಬ ಗಂಡಾಂತರಕಾರಿಯಾದ್ದರಿಂದ, ತಾವು ವಕಾಲತ್ತು ಮಾಡುವುದಿಲ್ಲವೆಂದು ತಿಳಿಸಿದರು. "ಪಕ್ಷಕಾರರ ಪರವಾಗಿ ಕೆಲಸ ಮಾಡಲು ವಕೀಲರಿಗೆ ಕೊಡುವುದಿಲ್ಲವಾದರೆ ವಕೀಲರಾಗಿ ಪ್ರಯೋಜನವೇನು ?" ಎಂದರವರು.

ಚೀಫ್ ಜಸ್ಟೀಸರು ತುಂಬ ಸಹಾನುಭೂತಿ ತೋರಿದರು. ಪೋಲೀಸರು ವಕೀಲರನ್ನು ಬಂಧಿಸಿ ಅವರ ಕಾರ್ಯಕ್ಕೆ ಆತಂಕ ಮಾಡುವ ಬೆದರಿಕೆ ಹಾಕುತ್ತಿದ್ದರೆಂದು ಗೊತ್ತಾದ ಅವರು ಸಿಟ್ಟಿಗೆದ್ದರು. ಅವರು ಜೀವನಲಾಲರಿಗೆ "ಅವರು ನಿಮ್ಮನ್ನು ಬಂಧಿಸಿದರೆ ನಾನು ಹೇಬಸ್ ಕಾರ್ಪಸ್ ಆಜ್ಞೆ ಹೊರಡಿಸುತ್ತೇನೆ. ಅವರು ಬೇಕಾದರೆ ಪ್ರೀವ್ಹಿ ಕೌನ್ಸಿಲಿಗೆ ಹೋಗಲಿ" ಎಂದರು. ಆಗ ಜೀವನಲಾಲರು ಬಾರ್ ಅಸೋಸಿಯೇಶನ್ ಮೆಂಬರರ ಪರವಾಗಿ ಪಾರ್ಡಿವಾಲರ ಸ್ಥಾನಬದ್ಧತೆಯ ವಿಚಾರದಲ್ಲಿ ಹೇಬಸ್ ಕಾರ್ಪಸ್ ಆಜ್ಞೆ ಹೊರಡಿಸಬೇಕೆಂಬ ಅರ್ಜಿ ಹಾಕಿದರು.

*

ನವೆಂಬರ ೯ರಂದು ಸಂಜೆ ಪಾರ್ಡಿವಾಲಾರನ್ನು ಏಕಾಂಗಿಯಾಗಿ ಪ್ರತ್ಯೇಕ ಕೋಣೆಯಲ್ಲಿಟ್ಟಿದ್ದರು ಜೀವನಲಾಲರನ್ನು ಭೆಟ್ಟಿಯಾಗಲು ಅವರು ಮಾಡಿಕೊಂಡ ವಿನಂತಿ ತಿರಸ್ಕರಿಸಲ್ಪಟ್ಟಿತು. ೧೧ನೆಯ ತಾರೀಖಿನಂದು ಅವರಿಗೆ ಕಾಗದ ಪೆನ್ನುಗಳನ್ನು ಕೊಟ್ಟಾಗ ಅವರು ಹೇಬಸ್ ಕಾರ್ಪಸ್ ಅರ್ಜಿಯೊಂದನ್ನು ಮುಂಬಯಿಯ ಅಡ್ವೊಕೇಟ ಜನರಲ್ಲರಿಗೆ ಒಂದು, ಲಾಹೋರಿನ ಅಡ್ವೊಕೇಟ್ ಜನರಲ್ಲರಿಗೆ ಒಂದು ಮತ್ತು ಪಂಜಾಬಿನ ಡಿ.ಐ.ಜಿ., ಸಿ.ಐ.ಡಿ. ಯವರಿಗೆ ಒಂದು ಹೀಗೆ ಮೂರು ಪತ್ರಗಳನ್ನು ಬರೆದರು. ಅವುಗಳನ್ನು ಡಿ.ಐ.ಜಿ, ಸಿ.ಐ.ಡಿ. ಯವರಿಗೆ ಕಳಿಸಲೆಂದು ಸಬ್ ಇನಸ್ಪೆಕ್ಟರ್ ಬೇಗರಿಗೆ ಕೊಟ್ಟರು.

ಅಂದೇ ಸಂರಕ್ಷಣ ಕಾಯದೆಯ ೧೨೯ ನೇ ಕಲಮಿನನ್ವಯ ಸರಕಾರವು ಜಯಪ್ರಕಾಶರ ಮೇಲಿನ ಸ್ಥಾನಬದ್ಧತೆ ಆಜ್ಞೆಯನ್ನು ರದ್ದುಗೊಳಿಸಿ ಹೈಕೋರ್ಟಿನ ಕಕ್ಷೆಯ ಹೊರಗಿದ್ದ ೧೮೧೮ ರ ಬಂಗಾಲ ರೆಗ್ಯುಲೇಶನ್ ೩ ರನ್ವಯ ಸ್ಥಾನಬದ್ಧತೆಯ ಆಜ್ಞೆಯನ್ನು ಹೇರಿತು.

೧೩ರಂದು ಸಂಜೆ ೬ ಗಂಟೆಗೆ ಪಾರ್ಡಿವಾಲಾರ ಬಿಡುಗಡೆಯಾಯಿತು. ಅವರನ್ನು ರೇಲ್ವೆಸ್ಟೇಶನ್ನಿಗೆ ಕರೆದೊಯ್ದು ಫ್ರಂಟಿಯರ್ ಮೇಲಿನಿಂದ ಅವರು ಮುಂಬಯಿಗೆ ಪ್ರಯಾಣ ಬೆಳೆಸಿದ್ದನ್ನು ಪೋಲೀಸರು ಖಂಡಿತ ಮಾಡಿಕೊಂಡರು. ಪಾರ್ಡಿವಾಲಾರು ಅಧಿಕಾರಿಗಳಿಗೂ ಬಾರ್ ಅಸೋಸಿಯೇಶನ್ನುಗಳಿಗೂ ಪತ್ರ ಬರೆದು ತಾವು ೧೨ ರಂದು ಹೇಬಸ್ ಕಾರ್ಪಸ್ ಅರ್ಜಿಯನ್ನು ಪೋಲೀಸ್‌ರ ಕೈಗೆ ಕೊಟ್ಟಿದ್ದನ್ನು ತಿಳಿಸಿದರು.

*

ಜಯಪ್ರಕಾಶರ ಅರ್ಜಿಯ ವಿಚಾರಣೆಗೆ ಕೆಲ ದಿನಗಳಿದ್ದಾಗ ನಾನು ಕೋರ್ಟಿನಲ್ಲಿ ಕೆಲಸ

ನಡೆಸಬೇಕೆಂದು ಮಸಾನಿಯವರು ಮತ್ತೊಮ್ಮೆ ನನ್ನನ್ನು ಕೇಳಿಕೊಂಡರು. ನಾನು ಯಾವ ಅರ್ಜಿಯ ಸಲುವಾಗಿ ವಕಾಲತ್ತು ನಡೆಸುವೆನೊ ಅದು ಈಗ ತನ್ನ ಸತ್ವ ಕಳೆದುಕೊಂಡಿದೆಯೆಂದು ತಿಳಿಸುವುದಕ್ಕಾಗಿ ನೂರಾರು ಮೈಲು ದೂರ ಹೋಗುವುದರಲ್ಲಿ ಅರ್ಥವಿಲ್ಲೆಂದು ನಾನು ಮೊದಲು ನಿರಾಕರಿಸಿದೆ. ಆದರೆ ಆ ಅರ್ಜಿಯ ನಿರಾಕರಣೆಯಾಗುವ ಔಪಚಾರಿಕ ಕೆಲಸಕ್ಕಾಗಿ ಯಾದರೂ ನಾನು ಹೋಗಲೇಬೇಕೆಂದು ನನ್ನೆಲ್ಲ ಮಿತ್ರರು ಭಾವಿಸಿದರು. ನಾನು ಬಾರದಿದ್ದರೆ ತಾವೂ ಕೆಲಸ ಮಾಡುವುದಿಲ್ಲೆಂದು ಜೀವನಲಾಲ ಕಪೂರರು ಕೂಡ ತಿಳಿಸಿದ್ದರು.

ಹಾಗಾಗಿ ನಾನು ಮತ್ತು ಪಾರ್ಡಿವಾಲಾ ಲಾಹೋರಿಗೆ ಒಂದು ಅಸಫಲ ಕಾರ್ಯಕ್ಕಾಗಿ ತೆರಳಿದೆವು. ಹಾದಿಯಲ್ಲಿ ಮಾತಾಡುತ್ತಿದ್ದಾಗ ೧೨ ರಂದು ತಾವು ಪೋಲೀಸರಿಗೆ ಒಪ್ಪಿಸಿದ್ದ ಕಾಗದಗಳ ಸಾರಾಂಶವನ್ನು ತಮ್ಮ ದಿನಚರಿಯಲ್ಲಿ ಬರೆದಿಟ್ಟುಕೊಂಡದ್ದನ್ನು ಪಾರ್ಡಿವಾಲಾರು ನನಗೆ ತೋರಿಸಿದರು. ನನಗೆ ಬೆಳಕು ಕಂಡಿತು.

ಗಾಡಿಯಲ್ಲಿ ಸಂಬಂಧಪಟ್ಟ ಪೋಲೀಸ್ ಅಧಿಕಾರಿಗಳ ವಿರುದ್ಧ ಒಂದು ಅರ್ಜಿ ಬರೆಯಿಸಿದೆ. ತಮ್ಮ ವಕೀಲಿ ಕಾರ್ಯ ನಡೆಸುತ್ತಿರುವಾಗ ಪಾರ್ಡಿವಾಲಾರನ್ನು ಬಂಧಿಸಿದ್ದಕ್ಕಾಗಿ ಮತ್ತು ಅವರ ಹೇಬಸ್ ಕಾರ್ಪಸ್ ಅರ್ಜಿಯನ್ನು ಹೈ-ಕೋರ್ಟಿಗೆ ಕಳಿಸದ್ದಕ್ಕಾಗಿ ಪೋಲೀಸರ ಮೇಲೆ ಏಕೆ ಕೋರ್ಟಿನ ಅವಮಾನ ಮಾಡಿದ ಬಗ್ಗೆ ಖಟ್ಲೆ ಹಾಕಲಾಗದು ಎಂಬ ಆದೇಶವನ್ನು ಹೊರ-ಡಿಸಬೇಕು ಎಂದು ಅರ್ಜಿಯಲ್ಲಿ ಕಾಣಿಸಿದ್ದೆ.

ಲಾಹೋರ್ ಸ್ಟೇಶನ್ನಿನಲ್ಲಿ ಜೀವನಲಾಲ ಕಪೂರರು ನಮ್ಮನ್ನು ಸ್ವಾಗತಿಸಿದರು. ಇಂಥ ವ್ಯವ-ಹಾರದಲ್ಲಿ ಕೈ ಹಾಕಿದರೆ ಕಷ್ಟಕ್ಕೆ ಸಿಲುಕಿಕೊಳ್ಳುವಿರಿ ಎಂದು ಪೋಲೀಸರು ಅವರಿಗೆ ಬೆದರಿಕೆ ಹಾಕಿದ್ದಾಗಲೂ ಅವರು ಸ್ಟೇಶನ್ನಿಗೆ ಬಂದದ್ದು ಅತಿ ಧೈರ್ಯದ ಮಾತಾಗಿತ್ತು. ನಾವು ವೇಳೆ ಗಳೆಯದೆ ವಿಷಯವನ್ನು ಚರ್ಚಿಸಿ ಡಿ. ಐ. ಜಿ. ವೇಸ್, ಸುಪರಿಂಟೆಂಡೆಂಟ್ ರಾಬಿನ್‌ಸನ್ ಮತ್ತು ಸಿ.ಐ.ಡಿ. ಸಬ್ ಇನಸ್ಪೆಕ್ಟರ್ ವಿರ್ಜಾ ಅಸ್ಗರ್ ಬೇಗರ ಮೇಲೆ ಕೋರ್ಟಿನ ಅವಮಾನ ಮಾಡಿದ ಬಗ್ಗೆ ಕ್ರಮ ತೆಗೆದುಕೊಳ್ಳಬೇಕೆಂಬ ಬಗ್ಗೆ ಒಂದು ಸರಿಯಾದ ಅರ್ಜಿಯನ್ನು ತಯಾರಿಸಿದೆವು.

ರಾಬಿನ್‌ಸನ್ನರ ದಬ್ಬಾಳಿಕೆಯಿಂದ ಲಾಹೋರ್ ಎಷ್ಟರ ಮಟ್ಟಿಗೆ ಸಂತ್ರಸ್ತವಾಗಿತ್ತೆಂದರೆ ನಾನು ಬಂದದ್ದು ಒಂದು ದೊಡ್ಡ ಸಮಾಚಾರವೇ ಆಗಿಬಿಟ್ಟಿತು. ಜಯಪ್ರಕಾಶ ನಾರಾಯಣರ ಅರ್ಜಿ ತಳ್ಳಿ ಹಾಕಲ್ಪಟ್ಟೊಡನೆ ನಾವೆಲ್ಲ ಮಾಯವಾಗಿ ಬಿಡುವೆವು ಎಂದು ಪ್ರತಿಯೊಬ್ಬರೂ ತಿಳಿದಿದ್ದರು. ಆದರೆ ನಾನು ಕೋರ್ಟಿನ ಅವಮಾನ ಮಾಡಿದ ಬಗ್ಗೆ ಪೋಲೀಸ್ ಅಧಿಕಾರಿಗಳ ಮೇಲೆ ಕ್ರಮ ತೆಗೆದುಕೊಳ್ಳಬೇಕೆಂದು ಅರ್ಜಿ ಸಲ್ಲಿಸಿದೊಡನೆ ಮತ್ತು ಚೀಫ್ ಜಸ್ಟೀಸ್ ಟ್ರೇವರ್ ಹ್ಯಾರಿಸ್ ಮತ್ತು ಜಸ್ಟೀಸ್ ಅಬ್ದುರ್ ರೆಹಮಾನರು ಅದನ್ನು ಸ್ವೀಕರಿಸಿದೊಡನೆ ಜನರ ಕುತೂಹಲ ಕೆರಳಿತು. ರಾಬಿನ್‌ಸನ್ನರಿಗೆ ಪಂಜಾಬಿನ 'ಗೆಸ್ಟಪೊ' ಎಂಬ ಹೆಸರು ಬಿದ್ದಿತ್ತಾದ್ದರಿಂದ ಅವರ ವಿರುದ್ಧ ಅರ್ಜಿ ಎಂದೊಡನೆ ಜನರು ಉದ್ವೇಗಪೂರ್ಣರಾದದ್ದೇನೂ ಆಶ್ಚರ್ಯವಲ್ಲ.

ಪೋಲೀಸರ ದಬ್ಬಾಳಿಕೆಯಿಂದ ಜನ ನಿರ್ವೀರ್ಯರಾಗಿ ಬಿಟ್ಟಿದ್ದರು. ನಾವು ಪೋಲೀಸ್ ಅಧಿಕಾರಿಗಳ ವಿರುದ್ಧ ಕ್ರಮ ಕೈಕೊಂಡಿದು ಕಾಯದೆಯ ವಿಜಯ ಎಂದು ಭಾವಿಸಿ, ನಮ್ಮನ್ನು ಬೀಳ್ಕೊಡಲು ಸ್ಟೇಶನ್ನಿಗೆ ಬಂದಿದ್ದ ಜೀವನಲಾಲ ಕಪೂರರ ಜೊತೆಯಲ್ಲಿ ನೂರಾರು ಜನ ಸೇರಿದ್ದರು.

ನಮ್ಮ ಅರ್ಜಿಯ ವಿಚಾರಣೆ ಫೆಬ್ರುವರಿ ೧೪ ರಂದು ಇತ್ತು. ನಾನು ಮತ್ತು ಪಾರ್ಡಿವಾಲಾ ಪೋಲೀಸರ ವಿರುದ್ಧ ನಮ್ಮ ಹೋರಾಟ ಸಾಗಿಸಲು ಮತ್ತೆ ಲಾಹೋರಿಗೆ ತೆರಳಿದೆವು. ನಾವು ಲಾಹೋರ ಸ್ಟೇಶನ್ ತಲುಪಿದಾಗ ಜೀವನಲಾಲರು ನಮಗೆ " ಅರ್ಜಿಯ ವಿಚಾರಣೆ ದಿನ

## 'ಅವರನ್ನು ಮೆಚ್ಚಿಸುವುದು ಸುಲಭವಲ್ಲ...'

'ಅವರನ್ನು ಮೆಚ್ಚಿಸುವುದು ಸುಲಭವೆಂದು ನೀವು ತಿಳಿದಿದ್ದರೆ ಅದು ತಪ್ಪು ಗ್ರಹಿಕೆ' ಎಂದು ಶ್ರೀಮತಿ ಆರ್. ಆರ್. ಪ್ರಭು, ಹೇಳುತ್ತಾರೆ. 'ಬಟ್ಟೆಗಳ ವಿಷಯ ಹೇಳುವುದಾದರೆ... ಈಗ ನಾನು ಅವರ ಎಲ್ಲಾ ಬಟ್ಟೆಗಳನ್ನು ಸನ್‌ಲೈಟ್‌ನಿಂದಲೇ ಒಗೆಯುತ್ತೇನೆ—ಅದರಿಂದ ಅವರಿಗೆ ತೃಪ್ತಿಯಾಗುತ್ತದೆ. ನನಗೂ ತೃಪ್ತಿಯೆ. ಸನ್‌ಲೈಟ್‌ನಿಂದ ಹೇರಳ ನೊರೆಯಾಗುತ್ತದೆ, ನನ್ನ ಕೆಲಸವೂ ಬಹಳ ಸುಲಭವಾಗುತ್ತದೆ! ಬಟ್ಟೆಗಳೆಲ್ಲ ಅತ್ಯಂತ ಬೆಳ್ಳಗೆ ಮತ್ತು ಪ್ರಕಾಶಮಾನವಾಗುತ್ತವೆ. ನನಗೆ ಯಾವಾಗಲೂ ಸನ್‌ಲೈಟೇ ಬೇಕು!'

ಬಟ್ಟೆಗಳ ರಕ್ಷಣೆಗೆ ಶುದ್ಧ ಹಾಗೂ ಸೌಮ್ಯವಾದ ಸನ್‌ಲೈಟ್ ಸೋಪು ಅತ್ಯುತ್ತಮವಾಗಿದೆಯೆಂದೂ, ಅದರಂಥಾದ್ದು ಬೇರೆ ಇಲ್ಲವೆಂದೂ ಗೃಹಿಣಿಯರಿಗೆ ತಿಳಿದಿದೆ. ನಿಮಗೂ ಗೊತ್ತಾಗುವುದು.

# ಸನ್‌ಲೈಟ್




*ನಿಮ್ಮ ಬಟ್ಟೆಗಳಿಗೆ ಅತ್ಯಂತ ಹಿತಕರ!*

S.30-X29 KN

ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ

ನಿಶ್ಚಯಿಸುವ ವಿಚಾರದಲ್ಲಿ ನಾನು ಚೀಫ್ ಜಸ್ಟೀಸರನ್ನು ಅವರ ಕೋಣೆಯಲ್ಲಿ ಕಂಡಾಗ ಅವರು "ನಿಮ್ಮ ಅರ್ಜಿಯ ಬಗ್ಗೆ ಚಿಂತೆ ಮಾಡ ಬೇಡಿರಿ. ಅದರ ವಿಚಾರಣೆಯಾಗುವುದಿಲ್ಲ. ಅಮೃತಸರಕ್ಕೆ ಗಾಡಿ ಬಂದೊಡನೆ ಮುನ್ನಿಯವರ ಬಂಧನವಾಗುವುದು. ಅವರನ್ನು ಸ್ವಾಗತಿಸಲು ನೀವು ಸ್ಟೇಶನ್ನಿಗೆ ಹೋದಾಗ ನಿಮ್ಮ ಬಂಧನ ವಾಗುವುದು. ನಾನು ಕೋರ್ಟಿನಲ್ಲಿ ಆಸನ ಸ್ವೀಕರಿಸುವಾಗ ನನ್ನನ್ನು ಬಂಧಿಸುವರು" ಎಂದು ನನಗೆ ಹೇಳಿದರು ಎಂದು ತಿಳಿಸಿದರು.

ವಿಚಾರಣೆಯ ದಿನ ಕೋರ್ಟು ಕಿಕ್ಕಿರಿದು ತುಂಬಿತ್ತು. ಚೀಫ್ ಜಸ್ಟೀಸ್ ಸರ್ ಟ್ರೇವರ್ ಹ್ಯಾರಿಸ್, ಜಸ್ಟೀಸ್ ಅಬ್ದುರ್ ರಹಮಾನ ಮತ್ತು ಜಸ್ಟೀಸ್ ಅಬ್ದುಲ್ ರಶೀದರ ಎದುರು ಜೀವನಲಾಲ ಕಪೂರ, ಇಂದ್ರದೇವ ದುವಾ, ನಾನು ಮತ್ತು ಇನ್ನು ಅನೇಕರು ಹಾಜರಾದೆವು. ಪೋಲೀಸ್ ಅಧಿಕಾರಿಗಳ ಪರವಾಗಿ ಶ್ರೀ ವಿ. ಎನ್. ಸೇಠಿಯವರು ಹಾಜರಾದರು.

ನಾನು ವಾದನ್ನಾರಂಭಿಸಿ ಪಾರ್ಡಿವಾಲಾರ ಬಂಧನವಾದ ವರೆಗಿನ ಎಲ್ಲ ಸಮಾಚಾರ ತಿಳಿಸಿದೆ. ಸ್ಥಾನಬದ್ಧತೆಯಲ್ಲಿದ್ದಾಗ ೧೧ ರಂದು ಪರಡಿವಾಲಾರು ಹೇಬಸ್ ಕಾರ್ಪಸ್ ಅರ್ಜಿಯನ್ನು ಬರೆದು ೧೨ ರಂದು ಅದನ್ನು ಸಬ್ ಇನ್‌ಸ್ಪೆಕ್ಟರ್ ಬೇಗರ ಕೈಗೆ ಒಪ್ಪಿಸಿದರೇ ಎಂಬುದು ಮುಖ್ಯ ಪ್ರಶ್ನೆಯಾಗಿತ್ತು. ತಮ್ಮ ಅಫಿಡಾವಿಟ್‌ನಲ್ಲಿ ಬೇಗರು, ಪಾರ್ಡಿವಾಲಾರು ಬಿಡುಗಡೆ ಹೊಂದಿದ ಮೇಲೆ ೧೩ ರಂದು ತನ್ನ ಕೈಗೆ ಅರ್ಜಿ ಕೊಟ್ಟರು ಎಂದು ಹೇಳಿದ್ದರು.

ಪಾರ್ಡಿವಾಲಾರ ಹೇಳಿಕೆಗೆ ಅವರ ಡೈರಿಯಲ್ಲಿ ೧೧ ರಂದು ಅರ್ಜಿ ತಯಾರಿಸಿದ ಬಗ್ಗೆ, ೧೨ ರಂದು ಬೇಗರಿಗೆ ಕೊಟ್ಟ ಬಗ್ಗೆ ದಾಖಲೆಗಳಿದ್ದವು. ಈ ವಿಚಾರವನ್ನು ಅವರು ಬಾರ್ ಅಸೋಸಿಯೇಶನ್‌ಗಳು ಮತ್ತು ಪೋಲೀಸ್ ಅಧಿಕಾರಿಗಳಿಗೆ ಬರೆದ ಪತ್ರಗಳಲ್ಲಿ ತಿಳಿಸಿದ್ದರು.

ಅರ್ಜಿಯಲ್ಲಿ ೧೧ ನೆಯ ತಾರೀಖು ಇತ್ತು ಎಂಬುದನ್ನು ಒಪ್ಪಿಕೊಳ್ಳಲು ಪ್ರತಿಪಕ್ಷದವರನ್ನು ನಾನು ಕೇಳಿದೆ. ಪ್ರತಿವಾದಿಗಳ ವಕೀಲರು ಪ್ರತಿವಾದಿಗಳು ಕೋರ್ಟಿನಲ್ಲಿ ಹಾಜರಿರುವುದಿಲ್ಲವಾದ್ದರಿಂದ ತಾವು ಒಪ್ಪಿಗೆ ಕೊಡಲಾರೆವು ಎಂದರು. ನನಗೆ ಆಶ್ಚರ್ಯವಾಯಿತು. ಕೋರ್ಟಿಗೆ ಬಾರದೆ ಪೋಲೀಸ್ ಅಧಿಕಾರಿಗಳು ಕೋರ್ಟಿನ ಅವಹೇಳನೆ ಮಾಡಿರುವುದರತ್ತ ನಾನು ಕೋರ್ಟಿನ ಗಮನವನ್ನು ಸೆಳೆದೆ. ಜಸ್ಟೀಸ್ ಅಬ್ದುರ್ ರಹಮಾನರು ತಪ್ತರಾಗಿ "ಪೋಲೀಸ್ ಅಧಿಕಾರಿಗಳು ಏಕೆ ಬಂದಿಲ್ಲ? ಇದು ಕ್ರಿಮಿನಲ್ ಬಗೆಯ ಖಟ್ಲೆ. ಅವರು ಇಲ್ಲಿರಬೇಕಿತ್ತು" ಎಂದರು.

ಮೂರು ಖುರ್ಚಿಗಳನ್ನಿಡಿಸಲು ಕೋರ್ಟ್ ಕ್ಲಾರ್ಕನಿಗೆ ಹೇಳಿ ಚೀಫ್ ಜಸ್ಟೀಸರು "ಈ ಅಧಿಕಾರಿಗಳು ಈಗಿಂದೀಗ ಇಲ್ಲಿ ಹಾಜರಾಗಬೇಕು" ಎಂದರು.

ಅರ್ಜಿಯ ಮೇಲೆ ೧೧ ನೆಯ ತಾರೀಖು ಇತ್ತು ಎಂದು ಸಿದ್ಧ ಮಾಡಲು ನಾನು ಶ್ರೀ ಸೇಠಿಯವರಿಗೆ ಅದನ್ನು ಹಾಜರು ಮಾಡಲು ಕೇಳಿಕೊಂಡೆ. ಕಾಗದ-ಪತ್ರಗಳು ನಾಶ ಮಾಡಲ್ಪಟ್ಟಿವೆ ಎಂದು ಅವರು ತಿಳಿಸಿದರು.

ವಾತಾವರಣ ಗಂಭೀರವಾಯಿತು. "ಹೈಕೋರ್ಟಿಗೆ ಕಳಿಸಲ್ಪಡಬೇಕಾದ ಕಾಗದ ನಾಶ ಮಾಡಲ್ಪಟ್ಟಿತೆ?" ಜಸ್ಟೀಸ್ ಅಬ್ದುರ್ ರಹಮಾನರು ಉದ್ಗಾರ ತೆಗೆದರು.

"ಹೌದು" ಶ್ರೀ ಸೇಠಿಯವರೆಂದರು.

"ಯಾರಿಂದ? ಯಾರು ಆ ಕಾಗದವನು ನಾಶ ಮಾಡಿದರು?"

"ಶ್ರೀ ಬೇಗರು."

"ಯಾರ ಆಜ್ಞೆಯಂತೆ?"

"ಸುಪರಿಂಟೆಂಡೆಂಟ್ ರಾಬಿನ್‌ಸನ್ನರ ಅಪ್ಪಣೆಯಂತೆ."

ನ್ಯಾಯಾಧೀಶರಿಗೆ ಆಘಾತವಾಯಿತು. ನಾನು ಸಿ. ಐ. ಡಿ. ಅಧಿಕಾರಿಗಳು ಕಾಗದ-ಪತ್ರಗಳನ್ನು ನಾಶ ಚು ಹೂಡಿದ್ದರೆಂದು ಒತ್ತಿ ಹೇಳಿದಾಗ ವಿಚಾರಣೆಗೊಂದು ನಾಟಕೀಯ ಬಂತು.

ವಿಚಾರಣೆ ನಡೆದಿರುವಾಗೊಮ್ಮೆ "ಬಿಡುಗಡೆಯಾದ ಬಳಿಕ ಪಾರ್ಡಿವಾಲರು ಜೀವನಲಾಲ ಕಪೂರರನ್ನೇಕೆ ಭೆಟ್ಟಿಯಾಗಲಿಲ್ಲ?" ಎಂದು ನ್ಯಾಯಾಧೀಶರು ಕೇಳಿದರು.

"ಪೋಲೀಸರ ದಬ್ಬಾಳಿಕೆಯಿಂದ ಲಾಹೋರ್ ಅಂಜಿ ನಡುಗುತ್ತಿತ್ತು. ಪಾರ್ಡಿವಾಲಾರಿಗೆ ಲಾಹೋರಿನಲ್ಲಿರಲು ಮನಸ್ಸಿರಲಿಲ್ಲ" ನಾನು ಹೇಳಿದೆ.

"ಅವರು ಅಂಜಿ ಓಡಿದರೆಂದು ನಿಮ್ಮ ಅಭಿಪ್ರಾಯವೆ?"

"ಯಾರೇ ಆಗಲಿ, ಅಂಜುವಂಥ ಪರಿಸ್ಥಿತಿ ಲಾಹೋರಿನಲ್ಲಿತ್ತು. ಜಯಪ್ರಕಾಶ ನಾರಾಯಣರ ಪರವಾಗಿ ವಕಾಲತ್ತು ನಡೆಸಲು ಧೈರ್ಯವಿರದಷ್ಟು ಮಟ್ಟಿಗೆ ವಕೀಲರೂ ಅಂಜಿದ್ದರು. ನಾನು ಮುಂಬಯಿಯಿಂದ ಬರುವ ವರೆಗೆ ಕಪೂರರೂ ವಕಾಲತ್ತು ವಹಿಸಲು ಒಪ್ಪಲಿಲ್ಲ."

*

ಪಾರ್ಡಿವಾಲಾರು ತಮ್ಮ ವೃತ್ತಿಯ ಕರ್ತವ್ಯವನ್ನು ಪಾಲಿಸುತ್ತಿರುವಾಗ ಪೋಲೀಸರು ಅವರನ್ನು ಬಂಧಿಸಿ ನ್ಯಾಯದಾನಕ್ಕೆ ಆತಂಕವುಂಟು ಮಾಡಿದರೆಂದು ನಾನು ವಾದಿಸಿದೆ.

"ಆದರೆ ಲಾಹೋರಿಗೆ ವಕೀಲರೆಂದು ಬಂದಿದ್ದರೂ ಅವರ ಉದ್ದೇಶದಲ್ಲಿ ಬೇರೆ ಏನೋ ಇತ್ತು ಎಂದು ಪೋಲೀಸರು ಹೇಳಬಹುದಲ್ಲ!" ಎಂದು ಚೀಫ್ ಜಸ್ಟೀಸ್ ಹೇಳಿದರು.

"ಅವರು ವಕೀಲರೆಂದಷ್ಟೇ ಬಂದಿದ್ದರು ಎಂಬುದು ಪೋಲೀಸರಿಗೆ ಗೊತ್ತಿತ್ತು."

"ಹಾಗಿದ್ದರೆ ಪಾರ್ಡಿವಾಲಾರು ಮೊದಲೊಮ್ಮೆ ಜೇಲಿಗೆ ಹೋಗಿದ್ದರು ಎಂದು ಅವರಿಗೆ ಗೊತ್ತಿರಬೇಕು."

"ಅವರ ಬಂಧನಕ್ಕೆ ಅದೇ ಕಾರಣವಾಯಿತು ಎಂದರೆ ನಾನೇನೂ ಹೇಳಲಾರೆ. ಏಕೆಂದರೆ ನಾನು ಕೂಡ ಎರಡು ಸಲ ಜೇಲಿಗೆ ಹೋಗಿ ಬಂದವನೇ."

"ಪೋಲೀಸರು ನಿಮ್ಮನ್ನೂ ಸಂಶಯದಿಂದ ಕಾಣುತ್ತಿರಬೇಕು" ಎಂದು ಚೀಫ್ ಜಸ್ಟಿಸರೆಂದಾಗ ಕೋರ್ಟಿನಲ್ಲಿ ನೆರೆದ ಜನ "ಭಲೆ" ಎಂದಿತು.

"ಹಾಗಿದ್ದರೆ ನನ್ನ ಮೇಲೆ ಅನುಗ್ರಹ ಮಾಡಿದ್ದಕ್ಕಾಗಿ ನಾನು ಪೋಲೀಸರಿಗೆ ಕೃತಜ್ಞನಾಗಿರಬೇಕು. ಬಹುಶಃ ಇನ್ನೊಂದು ಹೇಬಸ್ ಕಾರ್ಪಸ್ ಅರ್ಜಿಯ ಗದ್ದಲ ಬೇಡ ಎಂದು ಅವರೆಂದುಕೊಂಡಿರಬೇಕು" ನಾನು ಹೇಳಿದೆ.

"ಪೋಲೀಸರಿಗೆ ಪಾರ್ಡಿವಾಲಾರ ಬಗ್ಗೆ ವಿಶೇಷವೇನೂ ಗೊತ್ತಿರಲಿಲ್ಲ. ಜಯಪ್ರಕಾಶರ ಹೇಬಸ್ ಕಾರ್ಪಸ್ ಅರ್ಜಿಗೆ ಆತಂಕ ಒಡ್ಡಬೇಕೆಂದೇ ಪೋಲೀಸರು ಪಾರ್ಡಿವಾಲಾರನ್ನು ಬಂಧಿಸಿದರು. 'ನೀವು ಕಾಂಗ್ರೆಸ್ ಸೊಶಾಲಿಸ್ಟ್ ಪಾರ್ಟಿಯ ಕಾರ್ಯದರ್ಶಿ ಜಾಗಕ್ಕೆ ಸ್ಪರ್ಧಿಸಿಲ್ಲವೆ? ನಿಮ್ಮ ಹೆಂಡತಿ ನರ್ಗಿಸ್ ಸಕ್ರಿಯ ಸೋಶಾಲಿಸ್ಟ್ ಕಾರ್ಯಕರ್ತ್ರಿಯಲ್ಲವೆ?' ಎಂದು ಪೋಲೀಸರು ಕೇಳಿದರು. ಸೊಶಾಲಿಸ್ಟ್ ಪಾರ್ಟಿಯೊಡನೆ ಯಾವ ಸಂಬಂಧವಿಲ್ಲದ್ದರಿಂದಲೂ ಲಗ್ನವೇ ಆಗಿರದ್ದರಿಂದಲೂ ಪರಡಿವಾಲಾರಿಗೆ ಆಶ್ಚರ್ಯವಾದದ್ದು ಸಹಜ. ಬಹುಶಃ ನರ್ಗಿಸ್ ಎಂಬ ಹೆಸರಿನ ಹೆಂಡತಿಯಿರುವ ಸೊಶಾಲಿಸ್ಟ್ ಸೋಲಿಬಾಟ್ಲಿವಾಲಾರೇ ಇವರು ಎಂದು ಪೋಲೀಸರು ತಿಳಿದಿರಬೇಕು. ಪೋಲೀಸರು ಪಾರ್ಡಿವಾಲಾರಿಗೆ ಆತಿಥ್ಯವನ್ನು ನೀಡಿದ್ದಲ್ಲದೆ ಒಬ್ಬ ಹೆಂಡತಿಯನ್ನೂ ದಯಪಾಲಿಸಿದರು" ಎಂದೆ ನಾನು.

*

ಕಾಗದ ಪತ್ರಗಳು ನಾಶಮಾಡಲ್ಪಟ್ಟ ಸಂಬಂಧದಲ್ಲಿ ನ್ಯಾಯಾಧೀಶರು ಬಲು ರೊಚ್ಚಿಗೆದ್ದಿದ್ದರು.

ಇದು ತುಂಬ ಗಂಭೀರ ವಿಷಯ ಎಂದು ಚೀಫ್ ಜಸ್ಟೀಸರು ಹೇಳಿದರು. ನಡುವೆಯೆ ಒಮ್ಮೆ ಅವರು "ಯಾವನಾದರೊಬ್ಬ ಹೈಕೋರ್ಟಿಗೆ ಅರ್ಜಿ ಸಲ್ಲಿಸಿದಾಗ ನ್ಯಾಯಾಧೀಶರೂ ಕೂಡ ಅದನ್ನು ನಾಶ ಮಾಡಲಾರರು. ಆದರೆ ಪೋಲೀಸರು ಹಾಗೆ ಮಾಡಬಲ್ಲರು ಎಂದು ಅನಿಸುತ್ತದೆ. ನಾವು ಮಾಡಲಾರದ್ದನ್ನು ಅವರು ಮಾಡಬಲ್ಲರು. ಕೋರ್ಟು ಚಲಾಯಿಸಲಾರದ ಅಧಿಕಾರವನ್ನು ಅವರು ತಮಗೆ ತಾವೇ ಕೊಟ್ಟುಕೊಳ್ಳುತ್ತಿದ್ದಾರೆ" ಎಂದರು.

*

ಫೆಬ್ರುವರಿ ೧೬ ರಂದು ವಿಚಾರಣೆ ಮುಂದುವರಿದಾಗ ತನ್ನ ಪಕ್ಷಕಾರರನ್ನು ಸಾಕ್ಷಿ ಪಂಜರದಲ್ಲಿ ನಿಲ್ಲಿಸಲು ಶ್ರೀ ಸೇಠಿ ಬಯಸಿದರು. ಹಾಗಾದರೆ ಅವರನ್ನು ಮರುಸವಾಲಿಗೆ ಒಳಪಡಿಸಲಾದೀತು ಎಂದರು ನ್ಯಾಯಾಧೀಶರು.

ಪಂಜಾಬಿನ ಗೆಸ್ಟ್ಪೊ ಸುಪರಿಂಟೆಂಡೆಂಟ್ ರಾಬಿನ್‌ಸನ್ ಸಾಕ್ಷಿಪಂಜರದಲ್ಲಿ ನಿಂತಾಗ ಪ್ರಕರಣದ ಕುತೂಹಲ ಚರಮ ಸೀಮೆಯನ್ನು ಮುಟ್ಟಿತು. ತನ್ನನ್ನು ಮರುಸವಾಲಿಗೆ ಗುರಿಪಡಿಸುತ್ತಿದ್ದಾರಲ್ಲ ಎಂಬುದರಿಂದಲೇ ಅವರ ಕೋಪ ನೆತ್ತಿಗೇರಿತ್ತು. ಅವರಿಗೆ ಗಾಂಧಿ ಟೊಪ್ಪಿಗೆಗಳೆಂದರೆ ಮೈಮೇಲೆ ಮುಳ್ಳೇಳುತ್ತಿತ್ತಂತೆ. ನನ್ನ ತಲೆಯ ಮೇಲೆ ಗಾಂಧಿ ಟೊಪ್ಪಿಗೆಯಿರುವುದು ಅವರಿಗೇನೂ ಅನುಕೂಲವಾಗಿರಲಿಲ್ಲ.

ನಾನು ಮರುಸವಾಲು ಆರಂಭಿಸಿದಾಗ ಅವರು ಸಿಡುಕು ತೋರಿದರು. ಮರುಸವಾಲಿನಲ್ಲಿ ಸುಲಭವಾಗಿ ನೆಗೆದು ಬೀಳುವ ಶ್ರೇಷ್ಠ ವರ್ಗದ ಸಾಕ್ಷಿದಾರರ ಸಾಲಿಗೆ ಅವರು ಸೇರಿದವರಾಗಿದ್ದರು. "೯ ನೆಯ ತಾರೀಖಿಗೆ ಪಾರ್ಡಿವಾಲಾರನ್ನು ಬಂಧಿಸಲು ಅಪ್ಪಣೆಯಿತ್ತೆ. ಸಂರಕ್ಷಣೆಯ ಕಾರಣಗಳಿಗಾಗಿ ಹಾಗೆ ಮಾಡಿದೆ. ಕಾರಣಗಳನ್ನು ಬಹಿರಂಗ ಪಡಿಸದಿರುವ ಹಕ್ಕು ನನಗಿದ್ದೆ" ಎಂದರವರು. ಅವರ ಮರುಸವಾಲಿನಲ್ಲಿ ನಡೆದ ಪ್ರಶ್ನೋತ್ತರಗಳಲ್ಲಿ ಕೆಲವನ್ನು ಇಲ್ಲಿ ಕೊಡುತ್ತಿದ್ದೇನೆ.

"ನವೆಂಬರ್ ೧೩ ರಂದು ಮುಂಜಾನೆ ಪಾರ್ಡಿವಾಲಾರು ಕೆಲ ಕಾಗದಪತ್ರಗಳನ್ನು ಕೊಟ್ಟಿದ್ದಾರೆಂದು ಬೇಗರು ನಿಮಗೆ ಹೇಳಿದರು."

"ಹೌದು."

"ಡಿ. ಐ. ಜಿ. ಯವರಿಗೆ ಬರೆದ ಪತ್ರವನ್ನು ನಾಶ ಮಾಡಲು ನೀವು ಅಪ್ಪಣೆ ಮಾಡಿದಿರಿ?"

"ಹೌದು."

"ಹಾಗೆ ಮಾಡಲು ನಿಮಗೆ ಅಧಿಕಾರವಿತ್ತೆ?"

"ನಾನು ಡಿ. ಐ. ಜಿ.ಯವರ ಪರವಾಗಿ ಕಾರ್ಯ ಮಾಡುತ್ತಿದ್ದೆ. ನನಗೆ ಆ ಕಾಗದ ನಾಶ ಮಾಡಲು ಪೂರ್ಣ ಅಧಿಕಾರವಿತ್ತು."

"ಒಬ್ಬ ಅಧಿಕಾರಿಯ ಪರವಾಗಿ ಕಾರ್ಯ ಮಾಡುತ್ತಿರುವ ಮಾತ್ರಕ್ಕೆ ಆ ಅಧಿಕಾರಿಯ ಹೆಸರಿಗೆ ಬರೆದ ಪತ್ರವನ್ನು ಇನ್ನೊಬ್ಬ ಅಧಿಕಾರಿ ನಾಶ ಮಾಡುವ ಅಧಿಕಾರ ಹೊಂದಿರುವುದು ನಿಮ್ಮ ಶಾಖೆಯಲ್ಲಿ ಒಂದು ಸಂಪ್ರದಾಯವೆ?"

"ನಾನು ಹಾಗೆ ಸರ್ವೇಸಾಮಾನ್ಯ ಉತ್ತರ ಹೇಳಲಾರೆ. ಪ್ರಸ್ತುತ ವಿಚಾರದಲ್ಲಿ ನಾನು ಡಿ.ಐ.ಜಿಯವರ ಪರವಾಗಿ ಕೆಲಸ ಮಾಡುತ್ತಿದ್ದೆ. ನಾನು ಆ ಪತ್ರಕ್ಕೆ ಏನೂ ಮಹತ್ವ ಕೊಡಲಿಲ್ಲ."

"ಆ ಕಾಗದಪತ್ರಗಳಲ್ಲಿ ಹೈಕೋರ್ಟಿಗೆ ಮಾಡಿಕೊಂಡ ಒಂದು ಅರ್ಜಿಯೂ ಇತ್ತೆಂದು ನಿಮಗೆ ಗೊತ್ತಿತ್ತು."

"ಹೌದು."

"ಅದನ್ನು ನಾಶಮಾಡುವ ಅಧಿಕಾರ ನಿಮಗಿದೆಯೆಂದು ನೀವು ತಿಳಿದಿರಿ."

"ಆ ಅರ್ಜಿ ತಮ್ಮ ಬಿಡುಗಡೆಗಾಗಿ ಪಾರ್ಡಿವಾಲಾರು ಮಾಡಿಕೊಂಡಿದ್ದು ಎಂದು ನಾನು ತಿಳಿದೆ. ಪಾರ್ಡಿವಾಲಾರು ಅಷ್ಟರಲ್ಲಿ ಬಿಡುಗಡೆ ಮಾಡಲ್ಪಟ್ಟಿದ್ದರಿಂದ ಮತ್ತೇನನ್ನೂ ಮಾಡುವ ಅಗತ್ಯವಿರಲಿಲ್ಲ."

ಪೋಲೀಸ್ ಶಾಖೆಯಲ್ಲಿ ಅವರು ಕೆಲಸ ಮಾಡ

ಹತ್ತಿ ಎಷ್ಟು ವರ್ಷಗಳಾದವು ಎಂದು ಕೇಳಿದೆ. ಮೇಲಿನ ಅಧಿಕಾರಿಗಳ ಹೆಸರಿಗೆ ಬಂದ ಪತ್ರಗಳನ್ನು ಅವರಿಗೆ ಕಳಿಸಿಕೊಡಬೇಕು ಎಂದು ಪೋಲೀಸ್ ರೂಲ್ಸಿನಲ್ಲಿ ಹೇಳಿರುವುದನ್ನು ಅವರ ಗಮನಕ್ಕೆ ತಂದೆ. "ಹೈಕೋರ್ಟಿಗೆ ಬರೆದುಕೊಂಡ ಪತ್ರ ಎಂದು ಗೊತ್ತಿದ್ದೂ ಆ ಕಾಗದವನ್ನು ನೀವು ನಾಶಮಾಡಿದಿರಿ ?"

ಇಷ್ಟೊತ್ತಿಗೆ ರಾಬಿನ್‌ಸನ್‌ರ ಆತ್ಮವಿಶ್ವಾಸ ಗಡಬಡಿಸತೊಡಗಿತ್ತು. ನನ್ನ ಈ ಪ್ರಶ್ನೆಗೆ ಉತ್ತರ ಹೇಳಲು ಅವರು ಸಮಯ ತೆಗೆದುಕೊಂಡರು. ನಾನು ಮತ್ತೆ ಮತ್ತೆ ಕೇಳಲು "ಹೌದು" ಎಂದವರು ಉತ್ತರವಿತ್ತರು.

"ಅನೇಕ ವರ್ಷ ಸರ್ವೀಸಾಗಿರುವ, ಪೋಲೀಸ್ ರೂಲ್ಸ್ ಗೊತ್ತಿರುವ ನೀವು, ಹೈಕೋರ್ಟಿನ ವಿಳಾಸವಿದ್ದ ಕಾಗದವನ್ನು ನಾಶ ಮಾಡಿದಿರಿ. ಯಾಕೆ?"

"ಎಲ್ಲರಿಗೂ ಆಗುವ ತೊಂದರೆಯನ್ನು ತಪ್ಪಿಸ ಬಯಸಿದೆ."

"ಆ ಕಾಗದ ಹೈಕೋರ್ಟ್ ತಲುಪುವುದನ್ನು ನೀವು ತಪ್ಪಿಸಿದಿರಿ."

ರಾಬಿನ್‌ಸನ್‌ರು ಉತ್ತರ ಕೊಡಲಿಲ್ಲ.

"ಏಕೆ ಮಾಡಿದಿರಿ ? ಹಾಗೇಕೆ ಮಾಡಿದಿರಿ ?" ನಾನು ಕೇಳಿದೆ.

ನಾನು ಎರಡು ಸಲ ಈ ಪ್ರಶ್ನೆ ಕೇಳಿದಾಗ ರಾಬಿನ್‌ಸನ್‌ರು ಮುಖ ಕೆಳಗೆ ಹಾಕಿ, "ನಾನು ತೀರ ಮೂರ್ಖನಂತೆ ಮಾಡಿದೆ" ಎಂದು ಗುಣುಗುಟ್ಟಿದರು.

"ನಿಮ್ಮ ಅಫಿಡಾವಿಟ್‌ನಲ್ಲಿ ಕಾಗದವನ್ನು ನಾಶಮಾಡಿದ್ದನ್ನು ಏಕೆ ಹೇಳಲಿಲ್ಲ ?"

"ಅಫಿಡಾವಿಟ್ ತಯಾರಿಸಿದಾಗ ಕಾಗದವನ್ನು ನಾಶಮಾಡಬಾರದಿತ್ತು ಎಂದು ನನಗೆ ಅರಿವಾಯಿತು. ಅರ್ಜಿಯನ್ನು ನಾಶ ಮಾಡಿದ್ದನ್ನು ಹೇಳಿದರೆ ನನ್ನ ಕರ್ತವ್ಯಚ್ಯುತಿಯ ಜೊತೆಗೆ ಈ ವಿಷಯಕ್ಕೆ ಪ್ರಸಿದ್ಧಿ ಕೊಟ್ಟಂತಾದೀತು ಎಂದು ತಿಳಿದೆ. ಈ ಅಫಿಡಾವಿಟ್‌ಗಳು ಬೇಗನೆ ಪತ್ರಿಕೆಗಳಲ್ಲಿ ಪ್ರಕಟವಾಗುವವು ಎಂದು ನನಗೆ ಗೊತ್ತಿತ್ತು. ಬೆಂಕಿಗೆ ತುಪ್ಪ ಸುರುವುವುದು ನನಗೆ ಬೇಡಾಗಿತ್ತು."

ರಾಬಿನ್‌ಸನ್‌ರು ಸಾಕ್ಷಿ ಪಂಜರದಿಂದ ಹೊರಬಿದ್ದಾಗ ಅವರು ಭೀಕರ ಪೋಲೀಸ್ ಅಧಿಕಾರಿಗಿಂತಲೂ ಹೆಚ್ಚಾಗಿ ಹವೆ ಹೋದ ಟಾಯರಿನಂತೆ ಕಾಣಿಸುತ್ತಿದ್ದರು.

ಬೇಗರ ಮರುಸವಾಲಿನಲ್ಲಿ ಕೋರ್ಟು ಅವರಿಗೆ ಪುನಃ ಪುನಃ ಎಚ್ಚರಿಕೆ ಕೊಡಬೇಕಾಯಿತು.

*

ಆಮೇಲೆ ಪಾರ್ಡಿವಾಲಾರ ವಿಚಾರಣೆ ನಡೆಯಿತು.

ಅವರು ನಡೆದದ್ದನ್ನೆಲ್ಲ ಯಥಾವತ್ತಾಗಿ ಹೇಳಿದರು. ಪ್ರತಿವಾದಿಯ ವಕೀಲರು ಮರುಸವಾಲಿನಲ್ಲಿ ವಿಚಿತ್ರ ರೀತಿಯಲ್ಲಿ ನಡೆದುಕೊಂಡರು. ದಿಲ್ಲಿಯಲ್ಲಿಳಿದದ್ದು ಜಯಪ್ರಕಾಶರ ಅರ್ಜಿಗೆ ಪ್ರಸಿದ್ಧಿ ಕೊಡಲೆಂದೂ ಲಾಹೋರಿಗೆ ನನ್ನ ಪತ್ರಗಳನ್ನು ತಂದಿದ್ದು ಅವರ ಅಪರಾಧವೆಂದೂ ಅವರು ಹೇಳಿದರು.

ಆಗ ಜಸ್ಟೀಸ್ ಅಬ್ದುರ್ ರೆಹಮಾನರು "ಇಂಥ ವಿಷಯಕ್ಕೆ ಪ್ರಸಿದ್ಧಿ ದೊರಕಿಸುವುದರಲ್ಲಿ ನನಗೇನೂ ತಪ್ಪು ಕಾಣುವುದಿಲ್ಲ" ಎಂದರು.

ನಡುವೆ ಒಮ್ಮೆ ಚೀಫ್ ಜಸ್ಟೀಸರು "ಹೇಬಸ್ ಕಾರ್ಪಸ್ ಅರ್ಜಿಗೆ ಮಹತ್ವವಿದೆಯೆಂದು ಪಂಜಾಬಿನಲ್ಲಿ ಯಾರೂ ತಿಳಿದಂತಿಲ್ಲ. ಅಂಥ ಅರ್ಜಿಯನ್ನು ತಡೆಯುವ ಅಧಿಕಾರ ತಮಗಿದೆಯೆಂದು ಇಲ್ಲಿಯ ದೊಡ್ಡ ದೊಡ್ಡ ಅಧಿಕಾರಿಗಳೂ ತಿಳಿದಂತಿದೆ" ಎಂದರು.

ಸಂಜೆ ನನ್ನನ್ನು ಬೀಳ್ಕೊಡಲು ಸ್ಟೇಶನ್ನಿಗೆ ದೊಡ್ಡ ಗುಂಪೇ ಬಂದಿತ್ತು. ಅದರಲ್ಲಿನ ಒಬ್ಬ ಕಾಂಗ್ರೆಸ್ಸಿಗ ತಮ್ಮ ಪೆರೋಲ್ ಅವಧಿಯನ್ನು ಬೆಳೆಸಿಕೊಳ್ಳಲೆಂದು ರಾಬಿನ್‌ಸನ್‌ರ ಹತ್ತಿರ

ಹೋಗಿದ್ದರಂತೆ. ರಾಬಿನ್‌ಸನ್‌ರು ಕಾಗದಗಳನ್ನು ಮೇಜಿನ ಮೇಲೆ ಎಸೆದು "ನೀವು ಮುನಶಿಯವರಾಗಬೇಕಿತ್ತು. ಅಂದರೆ ಏನು ಮಾಡಬೇಕು ಎಂದು ನನಗೆ ತಿಳಿಯುತ್ತಿತ್ತು" ಎಂದು ಕೂಗಿದರಂತೆ.

ಮಾರ್ಚ್ ೨೧ ರಂದು ತೀರ್ಪು ಹೇಳಲ್ಪಟ್ಟಿತು. "ಪಾರ್ಡಿವಾಲಾರನ್ನು ಬಂಧಿಸುವುದರಲ್ಲಿ ನ್ಯಾಯದಾನಕ್ಕೆ ಅಡ್ಡಿ ಮಾಡಬೇಕೆಂದೇನೂ ಪೋಲೀಸರು ಬಯಸಿರಲಿಲ್ಲ. ಆದರೆ ಬಂಧನದ ಸಮಯ ಮತ್ತು ಸ್ಥಳ ತೀರ ಅಸಮಂಜಸವಾಗಿತ್ತು. ಹೇಬಸ್ ಕಾರ್ಪಸ್ ಅರ್ಜಿಯನ್ನು ನಾಶಮಾಡಿದ ಪೋಲೀಸರು ಕೋರ್ಟನ್ನು ಧಿಕ್ಕರಿಸಿದ ಅಪರಾಧಕ್ಕೆ ಪಾತ್ರರಾಗಿದ್ದಾರೆ. ಆದರೆ ಈ ಧಿಕ್ಕಾರ ತಾಂತ್ರಿಕ ರೂಪದ್ದಾಗಿದೆ. ಏಕೆಂದರೆ ೧೩ ರಂದು ಪಾರ್ಡಿವಾಲಾರ ಬಿಡುಗಡೆಯಾಗಿತ್ತು. ಅರ್ಜಿ ಕೋರ್ಟಿಗೆ ಬಂದು ಪ್ರಯೋಜನವಿರಲಿಲ್ಲ."

ರಾಬಿನ್‌ಸನ್‌ರಿಗೆ ಎಚ್ಚರಿಕೆಯಿತ್ತು, ಅವರು ದಾವೆಯ ಖರ್ಚುಕೊಡಬೇಕೆಂದು ಕೋರ್ಟು ವಿಧಿಸಿದ್ದರಿಂದ ಪೋಲೀಸರಿಗೆ ಸಾಕಷ್ಟು ಮುಖಭಂಗವಾಯಿತು.

ತೀರ್ಮಾನದಲ್ಲಿ ಚೀಫ್ ಜಸ್ಟೀಸರು, "ಬಂಧನದಲ್ಲಿದ್ದ ಒಬ್ಬಾತ ಹೈಕೋರ್ಟಿಗೆ ಮಾಡಿಕೊಂಡಿದ್ದ ಅರ್ಜಿಯನ್ನು ಇಷ್ಟು ಲಘುವಾಗಿ ಕಂಡಿದ್ದು ನನಗೆ ತುಂಬ ಖೇದವುಂಟುಮಾಡಿದೆ. ಆದರೆ ಈ ಪೋಲೀಸ್ ಅಧಿಕಾರಿಗಳು ಸರಕಾರದಲ್ಲಿನ ಹಿರಿ ಅಧಿಕಾರಿಗಳ ಮಾದರಿಯನ್ನೆ ಅನುಸರಿಸುತ್ತಿದ್ದರೆಂದು ಹೇಳಬೇಕಾಗಿದೆ. ಫಿರೋಜಚಂದ ಮತ್ತು ಇತರರು – ವಿರುದ್ಧ ಚಕ್ರವರ್ತಿ ಖಟ್ಲೆಯಲ್ಲಿ ಕ್ರಿ. ಪ್ರೊ ಕೋಡಿನ ೪೯೧ ನೇ ಕಲಮಿನನ್ವಯ ಅನೇಕ ಅರ್ಜಿಗಳನ್ನು ಸರಕಾರವು ಯಾವ ಆಧಾರವೂ ಇಲ್ಲದೆ ತಡೆಹಿಡಿದಿದ್ದನ್ನು ನಾನು ಪ್ರಸ್ತಾಪಿಸಿದ್ದೆ. ಹಾಗಿರುವುದರಿಂದ ಕಿರಿ ಅಧಿಕಾರಿಗಳೂ ಹಾಗೆಯೆ ಮಾಡಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ" ಎಂದಿದ್ದರು.

ಜಸ್ಟೀಸ್ ಅಬ್ದುರ್ ರೆಹಮಾನರು ಈ ರೀತಿ ಹೇಳಿದ್ದರು: "ಇತ್ತೀಚೆಗೆ ಭಾರತದಲ್ಲೆಲ್ಲ ಸರಕಾರಿ ಅಧಿಕಾರಿಗಳಲ್ಲಿ ಹೈಕೋರ್ಟುಗಳಿಗೆ ಏನೂ ಮಹತ್ವ ಗೌರವಗಳನ್ನು ಕೊಡದಿರುವ ಪ್ರವೃತ್ತಿ ಕಂಡುಬರುತ್ತಿದೆ. ಅದು ಹೇಗೊ ಈ ರೀತಿ ನಡೆದುಕೊಳ್ಳುವುದು ಸರಕಾರದ ಧೋರಣವೆಂದೂ ಹೈಕೋರ್ಟುಗಳು ಸರಕಾರಕ್ಕೆ ವಿರೋಧಿಯಾಗಿವೆ ಎಂದೂ ಅವರು ತಿಳಿದುಕೊಂಡಂತಿದೆ. ಇದು ತೀರ ಅನುಚಿತವಾದದ್ದು. ಸಾಮ್ರಾಜ್ಯದ ಅಡಿಗಲ್ಲು ನಿಷ್ಪಕ್ಷಪಾತ ನ್ಯಾಯದಾನದಲ್ಲಿದೆ ಎಂದು ಈ ಅಧಿಕಾರಿಗಳು ತಿಳಿಯದಿರುವುದು ಖೇದದಾಯಕವಾಗಿದೆ. ಅವರು ಬಹುಶಃ ಅರಿವಿಲ್ಲದೇನೆ ಈ ಅಡಿಗಲ್ಲನ್ನೇ ಅಲುಗಿಸಲು ಯತ್ನಿಸುತ್ತಿದ್ದಾರೆ."

ಪಂಜಾಬ ಸರಕಾರ ರಾಬಿನ್‌ಸನ್ನರನ್ನು ಕೂಡಲೆ ದಿಲ್ಲಿಗೆ ವರ್ಗ ಮಾಡಿತು. ನಮ್ಮ ಈಗಿನ ಸ್ವತಂತ್ರ ಸರಕಾರಗಳೂ ಕೂಡ ನ್ಯಾಯಾಂಗದ ಅಭಿಪ್ರಾಯಕ್ಕೆ ಇದೇ ರೀತಿ ಗೌರವನ್ನಿತ್ತಿದ್ದರೆ ಒಳ್ಳೆಯದಾಗುತ್ತಿತ್ತು.

ಜೀವನಲಾಲ ಕಪೂರ ಮತ್ತು ನಾನು ಖಾಸಗಿಯಾಗಿ ಒಂದು ತಮಾಷೆಯ ಮಾತನ್ನಾಡಿಕೊಂಡಿದ್ದೆವು. ಕೋರ್ಟಿನ ಆಜ್ಞೆಯ ಪ್ರಕಾರ ರಾಬಿನ್‌ಸನ್ನರು ಖರ್ಚಿನ ಹಣ ಕೊಟ್ಟಾಗ ಅದನ್ನು ಅವರ ಬಳಿಯಲ್ಲೆ ಇಡಬೇಕು, ಪಾರ್ಡಿವಾಲಾರು ಲಗ್ನವಾದಾಗ ಅವರ ಹೆಂಡತಿಯ ಹೆಸರು ನರ್ಗಿಸ್ ಎಂದಿದ್ದರೆ ಅವಳಿಗೆ ಅದನ್ನು ಉಡುಗರೆಯಾಗಿ ಕೊಡಬೇಕು ಎಂದು ನಿರ್ಧರಿಸಿದ್ದೆವು. ಆದರೆ ಪಾರ್ಡಿವಾಲಾರಿಗೆ ಆ ಭಾಗ್ಯ ಬರಲಿಲ್ಲ. ಅವರು ಇದುವರೆಗೂ ಲಗ್ನವಾಗಿಲ್ಲ. ಯಾವ ನರ್ಗಿಸಳೂ ಅವರನ್ನು ಮೋಹಪಾಶದಿಂದ ಬಂಧಿಸಲಿಲ್ಲ. ರಾಬಿನ್‌ಸನ್ನರು ಖರ್ಚಿನ ಹಣವನ್ನು ಕೊಡಲೇ ಇಲ್ಲ. *



# 8,000/- ರೂ.ಗಳ ನಗದು ವರಮಾನದ ಬಹುಮಾನಗಳು



## ಮ್ಯಾನರ್ಸ್ ಗ್ರೈಪ್ ಮಿಕ್ಶ್ಚರ್
# ಭಾಗ್ಯಶಾಲಿ ಮಗುವಿನ ಸ್ಪರ್ಧೆಗೆ ಸೇರಿರಿ

1ನೆಯ ಬಹುಮಾನ- ಪ್ರತಿ ತಿಂಗಳಿಗೆ ರೂ 46ರಂತೆ 7 ವರ್ಷಗಳ ವರೆಗೆ
2ನೆಯ ಬಹುಮಾನ- ಪ್ರತಿ ತಿಂಗಳಿಗೆ ರೂ 29ರಂತೆ 7 ವರ್ಷಗಳ ವರೆಗೆ
3ನೆಯ ಬಹುಮಾನ- ಪ್ರತಿ ತಿಂಗಳಿಗೆ ರೂ 22ರಂತೆ 5 ವರ್ಷಗಳ ವರೆಗೆ
ಇದಲ್ಲದೆ 5 ರೂ. ಬೆಲೆಯ ಗವರ್ನಮೆಂಟ್
ಪ್ರೈಝ್ ಬಾಂಡುಗಳ 100 ಬಹುಮಾನಗಳು



ನಿಮ್ಮ ಮಗು ಭಾಗ್ಯವುಳ್ಳದ್ದೆ? ಮ್ಯಾನರ್ಸ್ ಗ್ರೈಪ್ ಮಿಕ್ಶ್ಚರ್ ಉಪಯೋಗಿಸುವವರೆಲ್ಲರಿಗೂ ಸೇರಬಹುದಾದ "ಮ್ಯಾನರ್ಸ್ ಭಾಗ್ಯಶಾಲಿ ಮಗುವಿನ ಸ್ಪರ್ಧೆ"ಗೆ ಸೇರಿರಿ. ಕೆಳಗೆ ಕಾಣಿಸಿರುವ ಪ್ರವೇಶ ಪತ್ರದಲ್ಲಿ ನಿಮ್ಮ ಮಗು ಜನಿಸಿದ ವೇಳೆ ತಾರೀಕು ಮತ್ತು ವರ್ಷವನ್ನು ಬರೆದು ಮ್ಯಾನರ್ಸ್ ಗ್ರೈಪ್ ಮಿಕ್ಶ್ಚರ್ ಪೆಟ್ಟಿಗೆಯ ಮೇಲಿನ ಮುಚ್ಚಳವೊಂದರ ಜೊತೆಗೆ "ಮ್ಯಾನರ್ಸ್ ಲಕ್ಕಿ ಬೇಬಿ ಫೆಸ್ಟಿವಲ್", ಪೋ. ಬಾ. 976 ಬೊಂಬಾಯಿ 1, ಈ ವಿಳಾಸಕ್ಕೆ ಕಳಿಸಿಕೊಡಿ. ಪ್ರವೇಶ ಪತ್ರಗಳು ಅಗಸ್ಟ 16, 1961ಕ್ಕೆ ಇಲ್ಲವೆ ಅದಕ್ಕೆ ಮುಂಚಿತವಾಗಿ ಕೈಸೇರಬೇಕು.

ನಿರ್ಣಾಯಕರ ಸಂಘದಿಂದ ಮುಂಚಿತವಾಗಿ ನಿಶ್ಚಯಿಸಲ್ಪಟ್ಟ ಅಧಿಕೃತ ವೇಳೆ, ತಾರೀಕು, ವರ್ಷಕ್ಕೆ ಎಲ್ಲಕ್ಕಿಂತ ಹತ್ತಿರಬರುವ ಉತ್ತರಗಳಿಗೆ ಬಹುಮಾನ ದೊರಕುವುದು.

ನಿಮ್ಮ ಹತ್ತಿರದ ವ್ಯಾಪಾರಿಯಿಂದ ಭಾಗ್ಯಶಾಲಿ ಮಗುವಿನ ಸ್ಪರ್ಧೆಯ ನಿಯಮಗಳನ್ನು ದೊರಕಿಸಿ. ಅವು ಜೂನ್ 18ರ ವರ್ತಮಾನ ಪತ್ರಗಳಲ್ಲಿ ಪ್ರಚುರಿಸಲ್ಪಟ್ಟಿವೆ.




ಮ್ಯಾನರ್ಸ್ ಗ್ರೈಪ್ ಮಿಕ್ಶ್ಚರ್ ಪೆಟ್ಟಿಗೆಯ ಮೇಲಿನ ಮುಚ್ಚಳವನ್ನು ಕಳಿಸಿಕೊಡಿ.






ಪ್ರವೇಶ ಪತ್ರ

### ಮ್ಯಾನರ್ಸ್ ಗ್ರೈಪ್ ಮಿಕ್ಶ್ಚರ್ "ಭಾಗ್ಯಶಾಲಿ ಮಗುವಿನ ಸ್ಪರ್ಧೆ"
(ಸ್ಪಷ್ಟವಾಗಿ ಬರೆಯಿರಿ)

ನನ್ನ ಮಗು (ಹೆಸರು) ..............................................................

19...... (ವರ್ಷ) .............................. ತಿಂಗಳ .............. ನೆ ತಾರೀಕಿನಂದು ಹಗಲು/ರಾತ್ರಿ (ಜನಿಸಿದ ವೇಳೆ-ಘಂಟೆ ಮತ್ತು ನಿಮಿಷ) .................. ಕ್ಕೆ ಜನಿಸಿತು. ಈ ಸ್ಪರ್ಧೆಯ ನಿಯಮಗಳನ್ನು ನಾನು ಓದಿದ್ದೇನೆ; ಅವು ನನಗೆ ಒಪ್ಪಿಗೆಯಾಗಿವೆ. ನನ್ನ ಮಗುವಿಗೆ ನಾನು ಮ್ಯಾನರ್ಸ್ ಗ್ರೈಪ್ ಮಿಕ್ಶ್ಚರ್ ಕೊಡುತ್ತೇನೆ. ಅದರ ಗುರುತಾಗಿ ಮಿಕ್ಶ್ಚರ್ ಪೆಟ್ಟಿಗೆಯ ಮೇಲಿನ ಮುಚ್ಚಳವನ್ನು ಕಳಿಸಿದ್ದೇನೆ.

ಸಹಿ (ತಂದೆ/ಪಾಲಕ)

ಹೆಸರು ಮತ್ತು ವಿಳಾಸ: ..............................................................

..............................................................

ASP/GI... Kan

ಮಡಿಯುವವರಿಗೆ ಒಂದು ಮನೆ – ಬೇಡುವವರಿಗೆ ಹತ್ತು ಮನೆ

# ಒಂದಿಷ್ಟು ಪೇಪರ್ ಕೊಡುತ್ತೀರಾ ?

**ಲಕ್ಷ್ಮಣ ಜೋಶಿ**

"ಸುಮುಹೂರ್ತೇ ಸಾವಧಾನಾ" ಎಂದ ಪುರೋಹಿತ ನರಸಿಂಹಾಚಾರ್ರು ಪಕ್ಕಕ್ಕೆ ನೋಡಿ "ಎಲಾ! ಮದುಮಗ ಎಲ್ಲಿ?" ಎಂದು ಚೀರಿದರಂತೆ. ಮದುಮಗಳು ಬೆಪ್ಪಾಗಿ, ಕನ್ಯಾಪಿತೃ ಬೆವರು ನೀರಾಗಿ, ಹಂದರವೆಲ್ಲ ಚುಪ್ಪಾಗಿ ನಿಂತಾಗ ಮದುಮಗ "ಇಕೋ ಬಂದೆ" ಅಂತ ಪ್ರತ್ಯಕ್ಷವಾದನಂತೆ. ವೇಳೆಗೆ ಇಷ್ಟು ಮಹತ್ವ ಕೊಟ್ಟ ಈ ಮದುಮಗ ಮತ್ತಾರೂ ಆಗಿರದೆ ನನ್ನ ಅಜ್ಜನಾಗಿದ್ದ. ಅಂದ ಮೇಲೆ ರೈಲು ಹೊತ್ತಿಗೆ ಮುಂಚಿತವಾಗಿ ಹೋಗುವುದು ನನಗೆ ಹೇಗೆ ಸಾಧ್ಯ ಹೇಳಿ. ದೋತರದ ಕುಚ್ಚು ಒಂದು ಕೈಲಿ ಹಿಡಿದು ಇನ್ನೊಂದು ಕೈಯಿಂದ ಹೆಗಲಿಗೇರಿಸಿದ ಚೀಲದ ಕೈ ಹಿಡಿದು ತೇಕುತ್ತ ಮೂರು ಫರ್ಲಾಂಗ್ ಓಡಿ ಬಂದು, ಅದೇ ಹೊರಟಿದ್ದ ಗಾಡಿ ಹತ್ತಿದೆ.

ಇಂದ್ರಜಿತು ಹುಟ್ಟುತ್ತಿದ್ದಾಗ ಶನಿ ಮಹಾರಾಯ ಮಾಡಿದ ಹಾಗೆ ಒಂದು ಕಾಲು ಒಳಗೆ ಇನ್ನೊಂದು ಹೊರಗೆ ಇಟ್ಟು ಓಡುವ ಗಾಡಿಯಲ್ಲಿ ಪ್ರಾಣಕ್ಕಾಗಿ ಜೋತಾಡುತ್ತಿದ್ದ ನನ್ನ ಕುರಿತು ಆ ಮುದುಕ "ರಾಯರೆ, ಆ ಪೇಪರು ಸ್ವಲ್ಪ ಇಸಿದುಕೊಡ್ತೀರಾ?" ಎಂದು ಹೇಳಿದ. ನನಗೆ ರೇಗಿತು. ಕೈಬಿಟ್ಟರೆ ಗಾಡೀ ಹೊರಗೆ ಬಾಗಾ ಅಂತ ಕಾಣೋದಿಲ್ವೆ ಇವನಿಗೆ! ಆದರೆ ಅವನ ಮುಖ, ಅವನ ದನಿಯಲ್ಲಿ ತುಂಬಿದ ಯಾವುದೋ ದೈನ್ಯ ನನ್ನನ್ನು ಕರಗಿಸಿತು. ಆ ಪೇಪರು ನಾನು ಇಸಿದುಕೊಡದಿದ್ದರೆ ಇವನಿಗೇನೋ ಭಯಂಕರ ವಿಪತ್ತು ಬರಲಿತ್ತು. ಹೇಗೋ ಸಾವರಿಸಿಕೊಂಡು ಅವನ ಕೈಯಿಂದ ಪೇಪರ್ ಇಸಿದು ಇವನಿಗೆ ಕೊಟ್ಟೆ. ಆತ ದುರುಗುಟ್ಟಿ ನೋಡಿದ. ಈತ ಪೇಪರಿನಲ್ಲಿ ಮುಳುಗಿ ಹೋದ.

ತುಳಿ ತುಳಿದು ತುಂಬಿದ ಹತ್ತಿ ಅಂಡಿಗೆಯ ಹಾಗಿದ್ದ ಗಾಡಿಯ ದಟ್ಟಣೆಯಲ್ಲಿ ಎಲ್ಲರ ದೃಷ್ಟಿಯೂ ಈ ಮುದುಕನ ಮೇಲೆ ಕೇಂದ್ರಿಸಿತ್ತು. ಆತ ಮಾತ್ರ ಯಾತರ ಪರವೆಯೂ ಇಲ್ಲದೆ ಪೇಪರ್ ಓದುತ್ತಿದ್ದ.

"ಎಂಥ ಚಟವಪ್ಪಾ ಇದು" ಎಂದು ಪೇಪರ್ ಕೊಟ್ಟವ ಗೊಣಗುಟ್ಟಿದ.

"ಚಟ ಇದ್ದರೆ ಕೊಂಡು ಓದಬೇಕು, ಬಿಕ್ಕೆ ಬೇಡಬೇಕು ಯಾಕೆ?" ಎಂದ ಹತ್ತಿರದವ.

"ಮಂದಿಗೆ ಯಾಕೆ ತೊಂದರೆ ಕೊಡಬೇಕು?"—ಇನ್ನೊಬ್ಬ.

ಈ ಸಾಲು ಟೀಕೆಗೆ ಸಂಪೂರ್ಣ ಕಿವುಡನಾಗಿ ಮುದುಕ ಓದುತ್ತಿದ್ದ. ನಿಜವಾಗಿ ಕಾಮಿಕ್ ಪ್ರಾಣಿ. ಆ ದಪ್ಪ ಕನ್ನಡಕ, ಅದರ ಕಿವಿ ಕಡ್ಡಿ ಮುರಿದದ್ದರಿಂದ ದಾರ ಕಟ್ಟಿ ಕಿವಿಗೆ ಹದಿನೆಂಟು ಸುತ್ತು ಹಾಕಿಕೊಂಡಿದ್ದ. ತಲೆಗೆ ಹಡಿಗೆ ರುಮಾಲು. ಇಷ್ಟರಲ್ಲಿ ಅವನ ಪಕ್ಕಕ್ಕೆ ಸ್ಥಳ ದೊರಕಿಸಿ ಕೊಂಡು ಕೀಲಾಯಮಾನನಾಗಿದ್ದ ನಾನು ಅವನ ಚಲನವಲನಗಳನ್ನು ಕೌತುಕದಿಂದ ನೋಡತೊಡಗಿದೆ. ಮೊದಲನೇ ಕಾಲ-

ಮ್ಮಿನ ಮೊದಲನೇ ಸಾಲಿನ ಎಡಗಡೆಯಿಂದ ಪ್ರಾರಂಭ ಮಾಡಿದ ಅವನ ದೃಷ್ಟಿಯೊಡನೆ ಅವನ ತಲೆ ಸಾವಕಾಶವಾಗಿ ಬಲಕ್ಕೆ ತಿರುಗುತ್ತಿತ್ತು. ಕಡೆಗೆ ಕಾಲಮ್ಮುಗಳ ನಡುವಣ ಗೆರೆಗೆ ಢಿಕ್ಕಿ ಹೊಡೆದು ಕ್ಷಣಕಾಲ ತಡೆದು ಚಟ್ಟನೆ ಎಡಕ್ಕೆ ಹೊರಳಿ ಎರಡನೇ ಸಾಲಿನ ಬುಡಕ್ಕೆ ಬರುತ್ತಿತ್ತು. ಹೀಗೆ ಎಡಕ್ಕೂ ಬಲಕ್ಕೂ ಯಾತಾಯಾತ ಹಾಕಿ ಕೆಳಗಿಳಿಯುತ್ತ ಕಾಲಮ್ಮಿನ ಕಡೇ ಸಾಲಿಗೆ ಬರುವಾಗ ತಲೆ ಪೂರಾ ಬಗ್ಗಿ ಹೋಗಿರುತ್ತಿತ್ತು. ಆ ಸಾಲಿನ ತುದಿಗೆ ತಲುಪಿ ಢಿಕ್ಕಿ ಹೊಡೆದ ಮೇಲೆ ಒಂದು ನಿಟ್ಟುಸಿರು ಬಿಟ್ಟು ಗಕ್ಕನೆ ತಲೆ ಮೇಲೆತ್ತಿ ಎರಡನೇ ಕಾಲಮ್ಮಿನ ಪ್ರಥಮ ಪಂಕ್ತಿಯ ಎಡಕ್ಕೇರಬೇಕು. ಆ ಪುಟದ ಎಲ್ಲ ಕಾಲಂ ಹೀಗೆ ಮುಗಿಸಿದ ಮೇಲೆ ಗಾಳಿಗೆ ಪಟಪಟ ಎನ್ನುವ ಪೇಪರಿನ ಪುಟ ಮಗುಚಲು ಕುಸ್ತಿಯನ್ನೇ ಹಿಡಿಯಬೇಕಾಗುತ್ತಿತ್ತು. ತೊಡೆಯ ಮೇಲೆ ಇಕ್ಕಿಕೊಂಡು, ಬಡಿದು, ಒತ್ತಿ ಸರಿ ಮಾಡಿ ಎರಡನೇ ಪುಟದ ಮೊದಲನೇ ಕಾಲಂ ಪ್ರಾರಂಭಕ್ಕೆ ಏರುತ್ತಿತ್ತು ತಲೆ.

"ಬರೇ ಹೆಡ್‌ಲೈನ್ ಓದಿ ಸುದ್ದಿ ತಿಳಿದುಕೊಂಡು ಪೇಪರ್ ಮುಗಿಸೋ ಬುದ್ಧಿವಂತರು ಕೆಲವರು ಇರುತ್ತಾರೆ. ಆದರೆ ಕೆಲವರು —" ಎಂದನೊಬ್ಬ.

"ಛೇ ಛೇ ಅದು ಹೇಗಾದೀತು ಸ್ವಾಮಿ, ದುಡ್ಡು ಕೊಟ್ಟು ತೆಗೆದುಕೊಂಡದ್ದಾದರೆ ನೀವು ಹೇಳೋದು ಸರಿ. ಕಡ ತೆಗೆದುಕೊಂಡ ಪೇಪರನ್ನ ಸಂಪುಟ, ಸಂಚಿಕೆ, ತಾರೀಖು, ವಾರ, ಬೆಲೆ, ಪುಟದಿಂದ ಪ್ರಾರಂಭಿಸಿ ಇಂಥವರು ಇಂಥಲ್ಲಿ ಮುದ್ರಿಸಿ ಇಂಥಲ್ಲಿ ಇಂಥವರು ಪ್ರಕಟಿಸಿದರು ಅನ್ನೋವರೆಗೂ ಓದದೆ ಬಿಡಬಹುದೆ?" ಎಂದ ಇನ್ನೊಬ್ಬ.

"ಒಂದು ಸುದ್ದಿ ಕಾಲಮ್ಮಿನ ತುದಿಗೆ ಬಂತೆಂದರೆ ಇಂಥಾ ಪುಟಕ್ಕೆ ಮುಂದುವರಿದಿದೆ ಎಂತ ಬರೆದಿರುತ್ತಾರೆ. ಆ ಪುಟ ನಂಬರ್ ತಪ್ಪು ಪ್ರಿಂಟಾಗಿದ್ದರೆ ತೀರಿ ಹೋಯಿತು. ಸುದ್ದಿಯ ಬಾಲ ಹುಡುಕೋದರೊಳಗೆ ಮರುದಿನದ ಪೇಪರ್ ಬಂದಿರುತ್ತೆ," ಎಂದರು ಮತ್ತೊಬ್ಬರು.

ಭಗೀರಥ ಪ್ರಯತ್ನದಿಂದ ಮುದುಕ ಪೇಪರು ಮುಗಿಸಿದಾಗ ನಾನು ನಿಟ್ಟುಸಿರು ಬಿಟ್ಟೆ. ಆತ ಬಿಡಲಿಲ್ಲ. ತಲೆಯೆತ್ತಿ ಡಬ್ಬಿಯ ಸುತ್ತೆಲ್ಲ ಕಣ್ಣಾಡಿಸಿದ. ದೂರ ಮೂಲೆಯಲ್ಲಿ ಕುಳಿತವನೊಬ್ಬನ ಕೈಲಿದ್ದ ಇನ್ನೊಂದು ಪೇಪರಿನ ಮೇಲೆ ಅವನ ಗೃಧ್ರ ದೃಷ್ಟಿ ನಿಂತಿತು.

"ರಾಯರೆ, ಓ ರಾಯರೆ, ಒಂದು ಚೂರು ಆ ಪೇಪರ್ ಕೊಡ್ತೀರಾ?" ಗಾಡಿಯ ಶಬ್ದ ಮೀರಿ ಮುದುಕ ಒದರಿದ ದೇಶಾವರಿ ನಗೆ ಬೀರಿ.

ಪೇಪರ್ ಹಿಡಿದಿದ್ದವ ಎದ್ದು "ತಗೊಳ್ಳಿ. ಒಂದು ಚೂರು ಪೇಪರು" ಎಂದವನೇ ಅದರ ಮೂಲೆ ಹರಿದು ಮುದುಕನತ್ತ ತೂರಿದ. ಎಲ್ಲರೂ ಗೊಳ್ಳನೆ ನಕ್ಕರು.

"ಛೆ ಛೆ, ಪೇಪರು ಓದಲಿಕ್ಕೆ ಬೇಡಿದೆ" ಎಂದು ಹಲ್ಲು ಕಿರಿದು ಮುದುಕ ತನ್ನನ್ನು ತಿದ್ದಿಕೊಂಡ. ಚೇಷ್ಟೆ ಮಾಡಿದಾತ ನಿರ್ವಾಹವಿಲ್ಲದೆ ಪೇಪರ್ ಇವನತ್ತ ಚಾಚಿದ. ಮುದುಕ ಕೈನೀಡಿ ಅದನ್ನು ಎಟುಕಲಾರದೆ ಮತ್ತೆ ಹಲ್ಲು ಕಿರಿದು "ಅವರ ಕೈಲಿ ಕೊಡಿ" ಎಂದ.

ಆತ ಪೇಪರ್ ತೆಗೆದುಕೊಂಡು ಇವನ ಕಡೆ ನೀಡಿದರೂ ಇವನ ಕೈಗೆ ಎಟುಕಲಿಲ್ಲ. ಭೂಪ ಅದನ್ನು ಹದಿನಾರು ಮಡಿಕೆ ಮಡಚಿ ಸೊಯ್ಯೆಂದು ಇವನತ್ತ ಬೀಸಿದ. ಅದು ಇವನನ್ನು ದಾಟಿ ಹಿಂದೆ ಹೋಗಿ ಅಲ್ಲಿ ಕುಳಿತಿದ್ದವರ ಮೇಲೆ ಅಪ್ಪಳಿಸಿ ಕೆಳಗೆ ಬಿತ್ತು. ಅವರು ಸಮಾಧಿ ಭಂಗವಾದ ಋಷಿಯ ಹಾಗೆ ಕೆಂಡಗಣ್ಣಿಂದ ನೋಡಿದರು. ಮುದುಕ ಎದ್ದು ನಿಂತು ತಿರುಗಿ ಟೊಂಕ ಬಗ್ಗಿಸಿ ಕೆಳಗೆ ಬಿದ್ದ ಪೇಪರ್ ಎತ್ತಲು ಪ್ರಯತ್ನ ಮಾಡುತ್ತಿದ್ದಾಗ ಪೆಟ್ಟುತಿಂದವರೇ "ತಡೀರಿ. ನಾನೇ ಎತ್ತಿ ಕೊಡುತ್ತೇನಪ್ಪಾ"

ಎಂದರು.

ಪೇಪರು ಕೈಗೆ ಬಂದದ್ದೇ ಮುದುಕ ಹಲ್ಲು ಕಿರಿದು ಉಪಕಾರ ಸ್ಮರಿಸಿ ಅದರ ಮೊದಲನೇ ಪುಟದ ಮೊದಲನೇ ಕಾಲಂನ ಮೊದಲನೇ ಸಾಲಿನ ಎಡಕ್ಕೆ ದೃಷ್ಟಿಯಿಟ್ಟು ರುಂಡಚಾಲನೆ ಪ್ರಾರಂಭಿಸಿದ. ಅವನ ವಿಚಿತ್ರ ನೋಡಿ ಎದ್ದ ಗುಸುಗುಸು, ಕಿಸಿಕಿಸಿ ಯಾವುದರ ಗಮನವೂ ಅವನಿಗಿರಲಿಲ್ಲ.

ಕೂತು ಕೂತು ಬೇಸರವಾಗಿ ನಾನು ಅವನ ಪೇಪರಿನ ಮೇಲೆ ಪಕ್ಕದಿಂದ ಹಣಿಕಿದೆ. ಒಮ್ಮೆಲೆ ಚೇಳು ಕುಟುಕಿದ ಹಾಗೆ ಮುದುಕ ಚಟ್ಟನೆ ಎದ್ದು ನಿಂತ. ಸ್ಟೇಶನ್ ಬಂದು ಗಾಡಿ ನಿಂತಿತ್ತು. ಯಾರೋ ಇಳಿಯುತ್ತಿದ್ದರು. "ಓ ಯಜಮಾನರೇ, ಆ ಪೇಪರಷ್ಟು ಕೊಟ್ಟು ಹೋಗ್ತೀರಾ? ಎಂದು ಕೂಗಿದ.

ಎಲಾ! ಗಾಡಿಯಲ್ಲಿದ್ದವರ ಪೇಪರು ಕೇಳಿ ಓದುವುದು ಸಾಲದ್ದಕ್ಕೆ ಇಳಿದು ಹೋಗುವವರಿಂದಲೂ ಪೇಪರು ಕೇಳುವ ಇವನ ಧೈರ್ಯ ದೊಡ್ಡದು! ಎಂದು ನಾನು ಎಣಿಸುವಷ್ಟರಲ್ಲಿ ಇಳಿದ ಮನುಷ್ಯ ತಿರುಗಿ ನಿಂತ. ಮುಖ ಪೆಚ್ಚಾಗಿತ್ತು. "ಹೆಹ್ಹೆ, ಮರೆತಿದ್ದೆ" ಎಂದು ಕೊಟ್ಟ

ಮುದುಕ ಪುನಃ ಸ್ಥಾನಾರೂಢನಾದ. ಪರವಾಯಿಲ್ಲ. ಒಂದು ಪೇಪರಾದರೂ ದುಡ್ಡು ಕೊಟ್ಟು ತೆಗೆದುಕೊಂಡಿದ್ದಾನೆ. ಒಂದು ಕೊಂಡದ್ದಕ್ಕೆ ಡಬ್ಬಿಯಲ್ಲಿದ್ದ ಎಲ್ಲ ಪೇಪರ್ ಮೇಲೆ ಅಧಿಕಾರ ಸ್ಥಾಪಿಸಿದ್ದ.

"ಅಲ್ಲಿ ನೋಡ್ರಿ ಸಾಹೇಬ್ರೇ, ನಿಮ್ಮ ಮಗು ಪೇಪರ್ ಹರೀತಾ ಇದೆ ಕಸಿದುಕೊಳ್ಳಿ" ಎಂದು ಮುದುಕ ಕಿರಿಚಿಕೊಂಡ. "ಹೆ ಹೆ ಹೌದಲ್ರಿ. ತಾಪ್ಪ ತಾ. ನಿನಗೆ ಪೆಪ್ಪರ್‌ಮಿಂಟ್ ಕೊಡ್ತೀನಿ ತಾ" ಎಂದು ಸಾಹೇಬ್ರು ಪೇಪರ್ ಇಸಿದುಕೊಂಡರು.

"ಪೇಪರ್ ಓದ್ಲಿಕ್ಕೆ ಇರ್ತದೋ ಮಕ್ಕಳಿಗೆ ಆಡ್ಲಿಕ್ಕೋ?" ಎಂದು ಮುದುಕ ಒಗರಿನಿಂದ ಹೇಳಿದ. ಮುಂದಿಯ ಪೇಪರ್ ಮೇಲೂ ಇವನಿಗೆಷ್ಟಪ್ಪ ಅಭಿಮಾನ ಎಂದುಕೊಂಡೆ.

ಸ್ಟೇಶನ್ ಮೇಲೆ ಸ್ಟೇಶನ್ ದಾಟಿ ಹೋಯಿತು. ಇಳಿಯುವವರಿಗಿಂತ ಹತ್ತುವವರ ಗದ್ದಲ. ಬರುವವರಲ್ಲಿ ಯಾರ ಕೈಲಾದರೂ ಪೇಪರ್ ಇದೆಯೆ ಎಂದು ನೋಡುವುದೇ ನನ್ನ ಕೆಲಸವಾಗಿತ್ತು. ಹೀಗೇ ಒಮ್ಮೆ ಗಾಡಿ ನಿಂತಾಗ ಮುದುಕಪ್ಪ ಎದ್ದು ಆತುದಿಗೆ – ಬಾಗಿಲಕಡೆ— ಹರಿದರು. ಇನ್ನೇನು ಇಳಿಯುತ್ತದೆ ಘಟ ಎಂದುಕೊಂಡು ನಾನು ಖೈಸಾಗಿ ಕುಳಿತೆ. ಆದರೆ ಎರಡು ನಿಮಿಷಗಳ ನಂತರ ಪ್ರತ್ಯಕ್ಷವಾದ. ಕೈಯಲ್ಲಿ ಮತ್ತೊಂದು ಪೇಪರು. ಮತ್ತಾವ ಮೃಗ ಸಿಕ್ಕಿತಪ್ಪ ಇವನಿಗೆ ಎನ್ನುವ ಹಾಗೆ ಪ್ರಶ್ನಾರ್ಥಕವಾದ ನನ್ನ ಮುಖಮುದ್ರೆ ನೋಡಿ ಹತ್ತಿರ ಕೂತಿದ್ದವ ಪಿಸು ದನಿಯಲ್ಲಿ "ಓದಿಕೊಳ್ಳಲಿ ಬಿಡು ಪಾಪ! ನಿನ್ನ ಗಂಟೇನು ಹೋಗುತ್ತದೆ" ಎಂದ. ಮುದುಕನ ಬಗ್ಗೆ ಸಹಾನುಭೂತಿಯಿದ್ದವ ಒಬ್ಬನಾದರೂ ಇದ್ದಾನಲ್ಲ ಎಂದುಕೊಂಡೆ.

ಗಾಡಿ ಸಾಗುತ್ತಿತ್ತು ದಿನಪತ್ರಿಕೆ,ವಾರಪತ್ರಿಕೆ, ಮಾಸಿಕ, ಷಾಣ್ಮಾಸಿಕ, ವಾರ್ಷಿಕ ಮತ್ತು ಎಂಥೆಂಥವೋ ವಿಶೇಷಸಂಚಿಕೆಗಳನ್ನು ಮುದುಕ ಗಾಡಿಯ ಮೂಲೆ ಮೂಲೆಯಿಂದ ಜಪ್ತಿ ಮಾಡಿ ತಂದಿದ್ದ. ಹೌದು, ಪುಕ್ಕಟೆ ಓದುವುದೆಂದಮೇಲೆ ದಾಕ್ಷಿಣ್ಯವೇಕೆ? ದುಡಿಯುವವರಿಗೆ ಒಂದು ಮನೆ, ಬೇಡುವವರಿಗೆ ಹತ್ತು ಮನೆ. ನನಗೆ ನಗೆ ಬಂತು. ಕೈ ಇಟ್ಟು ಅದನ್ನು ಮುಚ್ಚಿದೆ.

ಒಬ್ಬರು ದೊಡ್ಡ ದನಿ ತೆಗೆದು ವಿಶಿಷ್ಟವಾಗಿ ಯಾರನ್ನೂ ಕುರಿಯದೆ, "ರಸ್ತೆಯಲ್ಲಿ ಪೇಪರ್ ಓದ್ಕೋವರ್ನ ನೋಡಿದ್ದೀರಾ?" ಎಂದರು. ಅದಕ್ಕೆ ಉತ್ತರ ಬರುವವರೆಗೆ ತಡೆಯದೆ ಮುಂದುವರಿಸಿದರು: "ಮೊನ್ನೆ ಒಬ್ಬ ಓದ್ಕೋದ್ಕೋತಾ ಹೋಗಿ ಒಂದು ಟ್ರಕ್ಕಿಗೆ ಢಿಕ್ಕಿ ಹೊಡೆದ ತಲೆ ಒಡೆದು ರಕ್ತ ಸೋರಿತು. ಪುಣ್ಯಕ್ಕೆ ಟ್ರಕ್ ನಿಂತಿತು. ಇಲ್ಲದಿದ್ದರೆ ಸರಸ್ವತೀ ಲೋಕಕ್ಕೆ

ಹೋಗತಿದ್ದ."

"ಅಲ್ಲಾ, ಮನೆಯೊಳಗೆ ಕೂತು ಓದಬಹುದಲ್ಲ! ಜೀವ ಕಳಕೊಳ್ಳುವಷ್ಟು ಏನೀಗ?"

"ಮನೆಯಲ್ಲಿ ಓದಿದರೆ ಪ್ಯಾಳ್ಯಾದ ರೊಕ್ಕ ನೀವು ಕೊಡ್ತೀರಾ?"

"ಚಹಾ ಹೋಟೆಲ್ಲಿಗೆ ಹೋಗಬೇಕು."

"ಚಹಾಕ್ಕೆ ದುಡ್ಡು ಯಾರು ಕೊಡುವವರು? ಅಲ್ಲಿ ಇವನಂಥವರು ಸಾವಿರ ಜನ ಓದುವವರು ಬೇರೆ!"

"ಪುಕ್ಕಟೆ ಓದಬೇಕಾದರೆ ಕಾಯಬೇಕಪ್ಪ."

"ರೊಕ್ಕ ಕೊಟ್ಟರೂ ನಮ್ಮೂರಲ್ಲಿ ಪೇಪರ್ ಸಿಗೋದಿಲ್ಲ" ಎಂದ ಇನ್ನೊಬ್ಬ.

"ಯಾಕೆ?"

"ನಮ್ಮೂರಲ್ಲಿ ಒಂದು ಪೇಪರಿನ ಅಂಗಡಿ ಇದೆ. ಅಲ್ಲಿ ಹೋಗಿ ದುಡ್ಡು ಇಟ್ಟು ಪೇಪರ್ ಕೊಡು ಅಂದರೆ ಪೇಪರ್ ಇಲ್ಲ ಅಂತ ಉತ್ತರ ಬರುತ್ತದ."

"ಮತ್ತೆ ಅಲಂಕಾರಕ್ಕೆ ಪೇಪರ್ ಇಟ್ಟಿರುತ್ತಾನೆಯೆ?"

"ಎದುರಿಗೇ ಜೋತುಬಿದ್ದ ನೂರಾರು ಪೇಪರ್ ತೋರಿಸಿ ಮತ್ತೆ ಅವೇನು? ಅಂತ ಕೇಳಿದರೆ ಅವು ಪೇಪರ್ ಅಲ್ಲ, ಅದು ಸಂಯುಕ್ತ ಕರ್ನಾಟಕ, ಇದು ಟೈಮ್ಸ್ ಆಫ್ ಇಂಡಿಯಾ, ಇದು ಪ್ರಜಾವಾಣಿ, ಇದು ಹಿಂದೂ–ಪೇಪರ್ ಮಾತ್ರ ನಮ್ಮಲ್ಲಿಲ್ಲ ನೋಡಿ ಎನ್ನುತ್ತಾನೆ. ಪೇಪರಿನ ಹೆಸರು ನಿಮ್ಮಿಂದ ಹೇಳಿಸದೆ ಇದ್ದರೆ ಅವನ ಹೆಸರೇ ಅಲ್ಲ."

"ಹೊಸ ಮದುಮಗಳ ಹತ್ತಿರ ಗಂಡನ ಹೆಸರು ಹೇಳಿಸಿದ ಹಾಗೆ!"

ಎಲ್ಲರೂ ನಕ್ಕರು.

"ನಾವೂ ಒಗಟ ಹಾಕಿಯೆ ಹೆಸರು ಹೇಳಬೇಕು!"

ನಗು ಇಮ್ಮಡಿ ಆಯಿತು.

ಕುತೂಹಲಿಯೊಬ್ಬ "ಹಾಗೆ ಯಾಕೆ ಮಾಡುತ್ತಾನೆ ಆತ?" ಎಂದು ಜಿಜ್ಞಾಸಿಸಿದ.

"ಹಾಗೆ ಬನ್ನಿ. ಪೇಪರ್ ಅಂಗಡಿಯವನ ಹತ್ತಿರ ಸಕಾರಣಗಳೇ ಇವೆ. ಒಂದು ಪೇಪರ್ ಕೊಡು ಅಂತಾರೆ. ಯಾವುದಾದರೂ ಕೊಟ್ಟರೆ ಹೆಡ್‌ಲೈನು ಓದಿ, ಕಾರ್ಟೂನ್ ನೋಡಿ, ಬೆನ್ನು ತಿರುವಿ ಸ್ಪೋರ್ಟ್ಸ್ ಐಟಮ್ ಮೇಲೆ ಕಣ್ಣು ಹಾಯಿಸಿ ತಿರುಗಿ ಕೊಟ್ಟು ಇದಲ್ಲ, ನನಗೆ ಆ ಪೇಪರ್ ಬೇಕಾಗಿತ್ತು ಅಂತಾರೆ. ಒಂದು ತೆಗೆದುಕೊಂಡು ಎರಡು ಓದಿದ ಹಾಗಾಯಿತಲ್ಲ. ಪುಕ್ಕಟೆ ಫೌಜದಾರರು" ಎಂದು ಮುದುಕನ ಕಡೆ ನೋಡಿ ಅವ ಕಣ್ಣು ಮಿಟುಕಿಸಿದ.

ಗಾಡಿ ಭರದಿಂದ ಓಡುತ್ತಿತ್ತು. ಟೀಕಾಟೂಕೆ ರಂಗೇರುತ್ತಲೇ ಇತ್ತು. ಅಷ್ಟರಲ್ಲಿ ಒಂದು ಬ್ರಿಜ್ ಬಂತು. ಕಬ್ಬಿಣದ್ದು. ಅದರ ಸಪ್ಪಳದ ಬಗ್ಗೆ ಚರ್ಚೆ ಸುರುವಾಯಿತು. ಅಷ್ಟರಲ್ಲಿ ಮುದುಕ ಎದ್ದ. ಸುತ್ತಲೂ ಸಿಂಹಾವಲೋಕನ ಮಾಡಿದ. ತಲೆಯೆತ್ತಿ ಸಾಮಾನಿಡುವ ಜಾಗ ನೋಡಿದ. ಎಲ್ಲೆಲ್ಲಿಯೂ ಜನ ನಾನಾ ಭಂಗಿಗಳಲ್ಲಿ ಕೂತಿತ್ತು, ನಿಂತಿತ್ತು, ಜೋತಾಡುತ್ತಿತ್ತು. "ಎಲಾ" ಎಂದ

"ಯಾಕೆ, ಏನಾಯ್ತು?" ಎಂದು ಕೇಳಿದೆ. ಇನ್ನು ಕಡ ತೆಗೆದುಕೊಳ್ಳಲು ಯಾರ ಹತ್ತಿರವೂ ಪೇಪರ್ ಉಳಿದಿಲ್ಲ ಎಂದು ಚಿಂತೆ ಇವನಿಗೆ ಎಂದುಕೊಂಡೆ.

"ನನ್ನ ಸಾಮಾನೇ ಕಾಣಲೊಲ್ಲವು. ನಾನು ಇಳೀಬೇಕು."

"ಸ್ಟೇಶನ್ ಇನ್ನೂ ದೂರ ಇದೆ."

"ಇನ್ನೇನು ಬಂದುಬಿಡುತ್ತದೆ" ಎಂದು ಆತ ದಡಪಡಿಸಹತ್ತಿದ. ಜನ ಕೂತಲ್ಲೇ ನಿಂತಲ್ಲೇ ಒರಗಿದಲ್ಲೇ ಸರಿದರು ಮುದುಕ ಒಂದು ಕಡೆಯಿಂದ ಹಾಸಿಗೆ, ಇನ್ನೊಂದು ಕಡೆಯಿಂದ ಟ್ರಂಕು ಮತ್ತೆ ಬೇರೆ ಕಡೆಗಳಿಂದ ತರಣಿ, ತಂಬಿಗೆ, ಕೈಚೀಲ, ಬಡಿಗೆಗಳನ್ನು ಸಂಗ್ರಹಿಸಿ ತಂದ. ತಂದು ಬಾಗಿಲ ಬಳಿ ಜಮಾಯಿಸಿದ.

ಆ ಮೇಲೆ ತನ್ನ ಸ್ಥಳಕ್ಕೆ ಬಂದು ಪೇಪರಿನಲ್ಲಿ ಮೋರೆ ಹಾಕಿದ.

ಗಾಡಿ ನಿಂತಿತು. ಮುದುಕ ಒಂದೊಂದೇ ಸಾಮಾನು ಇಳಿಸಿದ. ಬಗಲಲ್ಲಿ ನಾಲ್ಕೈದು ಪೇಪರ್ ತುರುಕಿ ಕೆಳಗಿಳಿದ. ಆ ಮೇಲೆ ತಿರುಗಿ ಬಾಗಿಲಲ್ಲಿ ತಲೆ ಹಾಕಿ "ಒಂದಿಷ್ಟು ಆ ಪೇಪರೆಲ್ಲ ಕೊಡ್ತೀರಾ ?" ಎಂದು ಒದರಿದ.

ಗಾಡಿಯೊಳಗಿದ್ದವರೆಲ್ಲ ಕಕ್ಕಾವಿಕ್ಕಿಯಾದರು. ಡಬ್ಬಿಯೊಳಗೆ ಇನೂ ನಾಲ್ಕೈದು ಪೇಪರುಗಳಿದ್ದವೆಂದು ಆಮೇಲೆ ತಿಳಿಯಿತು ಬೇರೆ ಬೇರೆ ಜನರ ಕೈಯಲ್ಲಿ ಇದ್ದ ಅವುಗಳ ಮಾಲಕರು ಯಾರು ಎಂದು ಯಾರಿಗೂ ಗೊತ್ತಿರಲಿಲ್ಲ. ಯಾರ ಯಾರ ಕೈಯಿಂದಲೋ ಯಾರ ಯಾರ ಕೈಗೋ ಅವು ಹೋಗಿದ್ದವು. "ನಿಮ್ಮದೇನು?" "ನಿಮ್ಮದೇನು ?" ಎಂಬ ಪ್ರಶ್ನೆಗಳು ಡಬ್ಬಿಯೊಳಗೆಲ್ಲ ಸುಳಿದಾಡಿ "ನನ್ನದಲ್ಲ" "ನನ್ನದಲ್ಲ" ಎಂಬ ಉತ್ತರ ತಂದವು.

ಗಾಡಿ ಸೀಟಿ ಹೊಡೆಯಿತು. "ಎಲ್ಲಾ ಪೇಪರು ನನ್ನವಪ್ಪಾ, ದುಡ್ಡು ಕೊಟ್ಟು ಕೊಂಡದ್ದು. ಕೊಡಿ ಬೇಗ, ಗಾಡಿ ಬಿಡುತ್ತದೆ." ಎಂದು ಮುದುಕ ಕೂಗಿದ. ಎಲ್ಲರೂ ಬೇಗ ಬೇಗ ಪೇಪರು ಮಡಚಿ ಅವನಿಗೆ ಒಪ್ಪಿಸಿದರು.

"ಅದರ ಮೇಲೆ ನನ್ನ ಹೆಸರು ಹಾಕಿದ್ದೇನೆ," ಎಂದು ಮತ್ತೊಮ್ಮೆ ಕೂಗಿ ಪೇಪರುಗಳನ್ನು ಎಣಿಸಿಕೊಂಡ. "ಇನ್ನೊಂದು ಪೇಜು ಎಲ್ಲೋ ಉಳಿದಿದೆ ನೋಡಿ" ಎಂದಾತ ಗೋಗರೆಯುತ್ತಿದ್ದಾಗಲೇ ಗಾಡಿ ಹೊರಟಿತು. *



## ರವೀಂದ್ರರ ಎಂಜನಿಯರಿಂಗ್

ಕವಿವರ್ಯ ರವೀಂದ್ರರಿಗೆ ತಮ್ಮ ಬಾಲ್ಯದಲ್ಲಿ ಒಮ್ಮೆ ಹೂವಿನ ರಸದಿಂದ ಕವನ ಬರೆಯಬೇಕೆಂಬ ಆಸೆ ಮೂಡಿತು. ಹಿಸುಕಿ ಹಿಸುಕಿ ಹೊರತೆಗೆದ ರಸ ಲೇಖನಿಯ ಮೊನೆಯನ್ನು ತೇವ ಮಾಡಲೂ ಸಾಲುತ್ತಿರಲಿಲ್ಲ. ಯಂತ್ರವೊಂದನ್ನು ತಯಾರು ಮಾಡಲು ಆಲೋಚಿಸಿ ಅದರ ನಕ್ಷೆಹಾಕಿದರು. ತಳದಲ್ಲಿ ರಂಧ್ರಗಳಿರುವ ಮರದ ಬಟ್ಟಲನ್ನು ಮಾಡಿಸಬೇಕು, ಅದರ ಮೇಲೆ ಗುಂಡು ಕಲ್ಲಂತೆ ಸುತ್ತುವ ಒನಕೆಯ ಮುಂಡೊಂದು ಇರಬೇಕು. ಅದಕ್ಕೊಂದು ಹಗ್ಗ ಸುತ್ತಿ ಅದನ್ನೊಂದು ಚಕ್ರದಿಂದ ತಿರುಗಿಸಬೇಕು ಎಂದು ನಿರ್ಧರಿಸಿ ಅವರ ಜ್ಯೋತಿ ಅಣ್ಣನ ಬಳಿ ಬಯಕೆಯನ್ನು ಅರುಹಿದರು. ಅವರು ಬಡಗಿಗೆ ಅಪ್ಪಣೆ ಮಾಡಿದರು. ಮಾರನೆಯ ದಿನವೇ ಯಂತ್ರ ಸಿದ್ಧವಾಯಿತು. ಹೂಗಳಿಂದ ತುಂಬಿದ ಬಟ್ಟಲಿನಲ್ಲಿ ಹಗ್ಗ ಸುತ್ತಿದ ಗುಂಡನ್ನು ತಿರುವಿದಷ್ಟೂ ಹೂಗಳು ಅರೆಯಲ್ಪಟ್ಟು ಮುದ್ದೆಯಾದುವೇ ಹೊರತು ಒಂದು ಹನಿ ರಸವೂ ಹೊರಬೀಳಲಿಲ್ಲ.

ರವೀಂದ್ರರ ಬಾಳಿನಲ್ಲಿ ಅವರು ಇಂಜನಿಯರಿಂಗ್ ಉದ್ಯೋಗ ಮಾಡಹೊರಟುದು ಇದೊಂದೇ ಬಾರಿ.

— ಸಂಗ್ರಹ: ರವೀಂದ್ರನಾಥ ಎಸ್. ಬಿ.

ತುಂಟ ಹುಡುಗ ಜಗದ್ವಿಖ್ಯಾತ ಜಟ್ಟಿಯಾದ ಕಥೆ

# ಬಲಭೀಮ ರಾಮಮೂರ್ತಿ

ಶಿವಾಜಿ ಶಂಕರ ಕಾರ್ಲೇಕರ

"ಮುಝೆ ನೌಕರೀ ಮಿಲೇಗೀ ದಾದಾ ?" ಈ ಶಬ್ದಗಳು ಕಿವಿಗೆ ಬೀಳುತ್ತಲೇ ಪ್ರೊ. ಶಂಕರರಾಯರು ವೃತ್ತಪತ್ರದಿಂದ ತಮ್ಮ ದೃಷ್ಟಿಯನ್ನು ಎತ್ತಿ ಬಾಗಿಲ ಕಡೆಗೆ ಹೊರಳಿಸಿದರು. ಗೌರವರ್ಣ, ಸುದೃಢಕಾಯ, ಉಂಗುರಗೂದಲು, ಸತೇಜ ಮುಖಚರ್ಯೆ, ವಯಸ್ಸು ಸುಮಾರು ೧೫-೧೬ ಇರಬಹುದಾದ ತರುಣ ಹುಡುಗನೊಬ್ಬ ಬಾಗಿಲಲ್ಲಿ ನಿಂತಿದ್ದ. ಶಂಕರರಾಯರು, "ಆಪ್ ಸರ್ಕಸ್ ಮೆ ಕ್ಯಾ ಕಾಮ್ ಕರೆಂಗೇ ?" ಎಂದು ಪ್ರಶ್ನಿಸಿದರು. "ವೈ ಓಮನ್ ರಿಂಗ್, ಮಸಲ್ ಕಂಟ್ರೋಲ್ ಔರ್ ಅಕ್ರೊಬೆಟಿಕ್ ಫೀಟ್ಸ್ ಕರತಾ ಹುಂ." ಅವನನ್ನು ಸರ್ಕಸ್ಸಿನಲ್ಲಿ ನೇಮಿಸಿಕೊಂಡರು.

ಈ ಹೈದ ಮತ್ತಾರೂ ಅಲ್ಲ; ಭಾರತದಲ್ಲೆಲ್ಲ ಖ್ಯಾತಿವೆತ್ತಿದ್ದ ಪ್ರೊ. ರಾಮಮೂರ್ತಿ "ಸ್ಯಾಂಡೊ." ಇವರ ಜನ್ಮ ೧೮೮೦ ರಲ್ಲಿ ಆಂಧ್ರದ ವಿಜಯನಗರ ಎಂಬ ಪಟ್ಟಣದ ಹತ್ತಿರದ ಪೆದ್ದಾಪುರ ಎಂಬ ಹಳ್ಳಿಯೊಂದರಲ್ಲಿ ಆಯಿತು. ತಂದೆ-



ತಾಯಿ ಬಡವರು. ತಂದೆ ಹೊಲದಲ್ಲಿ ಕೂಲಿ ಕುಂಬಳಿ ಮಾಡುತ್ತಿದ್ದರು. ಬಹಳ ವರ್ಷಗಳ ವರೆಗೆ ಮಕ್ಕಳಿಲ್ಲದ ಕೊರಗು ರಾಮಮೂರ್ತಿ ಯವರ ತಂದೆಯವರನ್ನು ಪೀಡಿಸುತ್ತಿತ್ತು. ಹನು ಮಂತನಿಗೆ ಬೇಡಿಕೊಂಡರು. ಬೇಡಿಕೆ ಫಲಿಸಿ-ತೆನ್ನುವಂತೆ ರಾಮಮೂರ್ತಿ ಹುಟ್ಟಿದರು. ಅಂತೆಯೆ ಹನುಮಂತನ ಆರಾಧ್ಯ ದೈವತವಾದ ರಾಮನ ಹೆಸರನ್ನೇ ಕೂಸಿಗೆ ಇಟ್ಟರು. ಆದರೆ ರಾಮಮೂರ್ತಿಯ ದೌರ್ಭಾಗ್ಯ. ಪಿತೃಸುಖ ಬಹುಕಾಲ ಲಭಿಸಲಿಲ್ಲ ಒಂದು ವರ್ಷದೊಳ ಗಾಗಿಯೆ ತಂದೆ ತೀರಿಕೊಂಡರು.

ತಂದೆಯ ಪಶ್ಚಾತ್ ತಾಯಿಯೆ ಇವರನ್ನು ಲಾಲಿಸಿ-ಪಾಲಿಸತೊಡಗಿದರು. ಹೇಳತೀರದ ದಾರಿದ್ರ್ಯ. ಮುಸುರೆ ತಿಕ್ಕಿ ಕೂಲಿಮಾಡಿ ತಾಯಿ ಚರಿತಾರ್ಥವನ್ನು ನಡೆಸಿದರು. ರಾಮಮೂರ್ತಿ ಯೆಂದರೆ ಅವರಿಗೆ ಕಂಠಮಣಿ. ಮಗುವಿಗೆ ಆರು ವರ್ಷವಾಗುತ್ತಲೇ ಅಲ್ಲಿಯೇ ಊರಲ್ಲಿ ಸಾಲೆಗೆ ಸೇರಿಸಿದರು. ಆದರೆ ಪಾಠ ಓದಲಿಕ್ಕೆ ಹುಟ್ಟಿದ ಈ ಮಗು ಶಾಲೆಯಲ್ಲಿ ಲಕ್ಷ್ಯ ಕೊಡುತ್ತಿರಲಿಲ್ಲ. ಹೊಡೆದಾಡುವ ಸಂದರ್ಭವಿದ್ದರೆ ಕೇಳಿ. ಈ ಮಲ್ಲ ಎಲ್ಲರಿಗಿಂತ ಮುಂದೆ! ಒಮ್ಮೆ ತನಗೆ ಆಟಿಗೆಯ ಮೋಟಾರನ್ನು ತಂದು ಕೊಡೆಂದು ತಾಯಿಯನ್ನು ಪೀಡಿಸಿದಾಗ ಸಾಕಷ್ಟು ದುಡ್ಡು ಇಲ್ಲದ ತಾಯಿ ನಿರಾಕರಿಸಿದಳು. ಮಗ ಹೋಗಿ ತಾಯಿಯ ಒಂದು ಕಿವಿಯನ್ನೇ ಕಡಿದುಬಿಟ್ಟ. ರಕ್ತ ಧಾರೆಯಾಗಿ ಸುರಿಯಲಾರಂಭಿಸಿತು. ಇದು ತೀರ ಚಿಕ್ಕ ವಯಸ್ಸಿನಸಲ್ಲಾದರೆ ಶಾಲೆಯಲ್ಲೂ ಇಂಥ ಒಂದು ಸಂಕಟಕ್ಕೆ ಶಿಕ್ಷಕರನ್ನೇ ಗುರಿ ಮಾಡಿದ್ದ ಈ ಬಂಟ!

ಒಂದು ದಿನ ರಾಮಮೂರ್ತಿ ಮೂರು-ನಾಲ್ಕು ಚೇಳುಗಳನ್ನು ಹಿಡಿದುಕೊಂಡು ಬಂದ. ದಾರ ದಿಂದ ಅವನ್ನು ಕಟ್ಟಿ ಖುರ್ಚಿಗೆ ಕಟ್ಟಿದ. ಶಿಕ್ಷ ಕರು ಯಥಾಪ್ರಕಾರ ಬಂದು ಖುರ್ಚಿಯಲ್ಲಿ ವಿಶ್ರಮಿಸಿ, — ಹೌದು, ನಿಜವಾಗಿಯೂ ವಿಶ್ರಾಂತಿ ಹೊಂದುವ ಕ್ರಮ ಪೂರ್ತಿಗೊಳಿಸ ಲೆಂದು ಮೇಜಿನ ಮೇಲೆ ಕಾಲು ಚಾಚಿ ಸ್ವಲ್ಪ ನಿದ್ರಿಸಿದರು. ಸ್ವಲ್ಪ ಹೊತ್ತು ಕಳೆಯುವಷ್ಟರಲ್ಲಿ ಚೇಳು ಕಡಿದದ್ದರಿಂದ ಶಿಕ್ಷಕರು ಅಕ್ಷರಶಃ ನರ್ತಿಸಲಾರಂಭಿಸಿದರು. ಅವರ ರಂಭಾಟ ಹುಡುಗರನ್ನು ನಗಿಸಲಿಕ್ಕೆ ಚೆನ್ನಾಗಿತ್ತು. ಕೊನೆಗೆ ಈ ಕಿಡಿಗೇಡಿತನ ಯಾರದೆಂಬುದು ತಿಳಿಯಿತು. ರಾಮಮೂರ್ತಿಯನ್ನು ಶಾಲೆಯಿಂದ ಓಡಿಸಿದರು.

ಶಾಲೆಯೇ ಇಲ್ಲವಾದ ಮೇಲೆ ಹುಂಬತನಕ್ಕೆ ಇನ್ನಷ್ಟು ಸ್ವಾತಂತ್ರ್ಯ ಲಭಿಸಿತು. ಆದರೆ ಕಷ್ಟ ದಿಂದ ಜೀವನ ಸಾಗಿಸಿದ್ದ ತಾಯಿಗೆ ಮಗನ ಈ ವರ್ತನೆಯಿಂದ ಬಹಳ ಕೆಡುಕೆನಿಸುತ್ತಿತ್ತು. ಒಂದು ದಿನ ರಾಮಮೂರ್ತಿ ಒಬ್ಬ ಹುಡುಗನ ತಲೆ ಒಡೆದ. ಆ ಹುಡುಗನ ತಂದೆ ತಾಯಿಗಳು ಬೊಬ್ಬಿಡುತ್ತಾ ಇವನ ತಾಯಿಯ ಕಡೆಗೆ ಬಂದರು. ಆ ದಿನ ತಾಯಿ ಹಿಂದೆಂದೂ ಮಗನ ಮೈಮೇಲೆ ಒಂದು ಬೆರಳನ್ನೂ ಎಬ್ಬಿಸದಿದ್ದವಳು ಮೈಮುರಿ ಹೊಡೆದಳು. ಮಗನನ್ನು ಅಷ್ಟು ಹೊಡೆದ ದಿನದಿಂದ ಆ ತಾಯಿ ಹಾಸಿಗೆ ಹಾಕಿದ ವರು ಏಳಲಿಲ್ಲ. ಸಾಯುವಾಗ ಮಗನನ್ನು ಸನಿಹಕ್ಕೆ ಕರೆಸಿಕೊಂಡರು. ಕಣ್ಣು ತುಂಬ ನೀರು. ಗದ್ಗದಿತ ಕಂಠ. ನಡುಗುವ ಕೈಗಳಿಂದ ಮಗನ ಮುಖವನ್ನು ತೀಡಿ "ಮಗೂ, ಇನ್ನು ಮೇಲೆ ನಿನ್ನ ವರ್ತನೆ ಸುಧಾರಿಸಿಕೊ..." ಎಂದು ಹೇಳಿದರು. ಎಂದೆಂದೂ ಶೋಕಿಸದಿದ್ದ ರಾಮಮೂರ್ತಿ ಆ ದಿನ ಜೀವನದ ದುಃಖವನ್ನು ಮೊದಲ ಬಾರಿ ಅನುಭವಿಸಿದ. ಇನ್ನು ತನ್ನ ತಾಯಿ ತನಗೆ ಎಂದೆಂದೂ ಸಿಗಲಾರಳು, ತನ್ನನ್ನು ಬಿಟ್ಟು ಹೋಗುತ್ತಾಳೆ ಎಂದು ತಿಳಿ ಯಿತು. ರಾಮಮೂರ್ತಿ ಪಶ್ಚಾತ್ತಾಪದಿಂದ ಬೆಂದು ಕಣ್ಣೀರು ಸುರಿಸುತ್ತ ತಾಯಿಯ ಪಾದ ಗಳಿಗೆ ಎರಗಿ, "ಅಮ್ಮಾ ನಾನಿನ್ನು ಎಂದಿಗೂ ಈ ರೀತಿ ವರ್ತಿಸಲಾರೆ" ಎಂದು ಹೇಳಿದರು. ತಾಯಿಗೆ ತನ್ನ ಮಗನ ಬಗೆ ಅಭಿಮಾನವೆನಿ

ಸಿತು. ಎದೆಗವಚಿಕೊಂಡು ಮುದ್ದಿಸಿದರು. ಹಾಗೇ ಅದೇ ಸ್ಥಿತಿಯಲ್ಲಿ ದೇವಲೋಕದ ದಾರಿ ಹಿಡಿದರು. ಶವವನ್ನು ಅಂತ್ಯಸಂಸ್ಕಾರಕ್ಕೂ ಬಿಡದಂತೆ ರಾಮಮೂರ್ತಿ ಹಿಡಿದು ಬಿಟ್ಟಿದ್ದ. ಮಹತ್ಪ್ರಯಾಸದಿಂದ ಬಿಡಿಸಿದರು. ತಾಯಿಯ ಪ್ರೇತ ಸುಡುತ್ತಿರುವುದನ್ನು ರಾಮಮೂರ್ತಿ ಆರಿವುಗಟ್ಟು ನೋಡುತ್ತಿದ್ದ. ಕಣ್ಣಲ್ಲಿ ನೀರೇ ಇಲ್ಲ. ಅವರಲ್ಲಿಯ ಆರ್ದ್ರತೆಯೆ ಅಟ್ಟಿಸಿ ಹೋಗಿತ್ತೇನೋ! ಸ್ಮಶಾನದಿಂದ ತಿರುಗಿ ಬರ ಲಿಕ್ಕೂ ಒಪ್ಪಲಿಲ್ಲ. ಕೊನೆಗೆ ನಾಲ್ಕೈದು ಜನ ಸೇರಿ ಅವರನ್ನು ಅಕ್ಷರಶಃ ಎತ್ತಿಕೊಂಡೇ ಮರಳಿ ದರು. ಅದೇ ಊರಲ್ಲಿ ರಾಮಮೂರ್ತಿಯ ಆಪ್ತ ರೊಬ್ಬರಿದ್ದರು. ಅವರು ಸಣ್ಣ ಸರ್ಕಸ್ಸೊಂದ ರಲ್ಲಿ ಕೆಲಸಕ್ಕಿದ್ದರು. ಅದೇ ಆಗ ಊರಿಗೆ ಮರಳಿ ಬಂದಿದ್ದ ಅವರು ರಾಮಮೂರ್ತಿಯ ಸ್ಥಿತಿಯನ್ನು ನೋಡಿ ಅವರನ್ನು ತಮ್ಮೊಂದಿಗೆ ಕರೆದೊಯ್ದರು. ತಮ್ಮೊಂದಿಗೆ ಸರ್ಕಸ್ಸಿನಲ್ಲಿ ಒಯ್ದ ರಾಮಮೂರ್ತಿಯನ್ನು ಅವರು ನೂರ್-ಮಹಂಮದ ಎಂಬ ಗುರುವಿನ ಕಡೆಗೆ ಸರ್ಕಸ್ ಶಿಕ್ಷಣಕ್ಕೆಂದು ಒಪ್ಪಿಸಿದರು. ನೂರ್‌ಮಹಂಮದ ಎತ್ತರದ ಆಳು. ಕೆಲಸದಲ್ಲಿ ನಿಷ್ಣಾತ. ಆದರೆ ಕೇವಲ ಮಿತಿಮೀರಿದ ಕುಡುಕತನದಿಂದ ದೊಡ್ಡ ದೊಡ್ಡ ಕಂಪನಿಗಳಿಂದ ಹೊರಬಿದ್ದು ಈ ಸಣ್ಣ ಕಂಪನಿಯನ್ನು ಆಶ್ರಯಿಸಿದ್ದ.

ಮೊದಲೇ ವ್ಯಾಯಾಮಪ್ರೀತಿ. ಈಗ ತಕ್ಕ ಅವಕಾಶ ದೊರೆಯಿತು. ಇತರ ಕೆಲಸಗಳಿಗಿಂತ ಶಕ್ತಿಪ್ರಧಾನವಾದ ಕೆಲಸಗಳಲ್ಲಿ ರಾಮಮೂರ್ತಿಗೆ ಬಲು ಆಸಕ್ತಿ. ನೂರ್‌ಮಹಂಮದ ಅಂಥ ಕೆಲಸ ಗಳನ್ನೇ ಕಲಿಸಿದ.

ನಾಲ್ಕು ವರ್ಷಗಳಲ್ಲಿ ರಾಮಮೂರ್ತಿ ರೋಮನ್ ರಿಂಗ್, ಮಸಲ್ ಕಂಟ್ರೋಲ್, ಅಕ್ರೊಬೆಟಿಕ್ ಫೀಟ್ಸ್, ಮೊಳೆಯ ಹಾಸಿಗೆ ಯಂತಿರುವ ಹಲಗೆಯ ಮೇಲೆ ಮಲಗಿ ಎದೆಯ ಮೇಲೆ ಬಂಡೆಯನ್ನು ಒಡೆಯಿಸಿಕೊಳ್ಳುವುದು ಮುಂತಾದ ಪ್ರಯೋಗಗಳನ್ನು ಕಲಿತರು. ಇದೇ ಹೊತ್ತಿಗೆ ಇವರೊಂದಿಗೆ ಇವರ ಆಪ್ತನ ಮಗ ಳಾದ ಪಾಪಮ್ಮ ಎಂಬ ಹುಡುಗಿಯೂ ಕಲಿಯು ತ್ತಿದ್ದಳು. ಸುಂದರಿ, ಗುಣವತಿ. ಪ್ರೀತಿ ಬೆಳೆ ಯಿತು. ಲಗ್ನವಾಗಲು ಅಡ್ಡಿ ಏನೂ ಉಳಿ-ದಿರಲಿಲ್ಲ.

ಆದರೆ ಒಂದು ದಿನ ಈ ಸ್ವಪ್ನ ಸಂಪೂರ್ಣ ಉಡುಗಿ ಹೋಯಿತು. ರಾಮಮೂರ್ತಿಯ ಆಪ್ತ ರಾಮುಲು ಕ್ರಾಸ್ ರೋಪ್‌ನ ಕೆಲಸ ಮಾಡು ತಿದ್ದ. ಕ್ರಾಸ್ ರೋಪ್ ಎಂದರೆ ಡೇರೆಯ ನಾಲ್ಕು ಕಂಬಗಳಿಗೆ ಎರಡು ಹಗ್ಗಗಳನ್ನು ಒಂದಕ್ಕೊಂದು ಛೇದಿಸುವಂತೆ ಕಟ್ಟಿ ಛೇದಬಿಂದುವಿನಲ್ಲಿ ರಾಮುಲು ತನ್ನ ಮಗಳನ್ನು ಹೆಗಲ ಮೇಲೆ ಹೊತ್ತು ನಿಲ್ಲುತ್ತಿದ್ದನಲ್ಲದೆ ಆ ಮೇಲೆ ಮಗಳ ಕಾಲನ್ನು ಕೈಯಲ್ಲಿ ಹಿಡಿದು ಹಿಂದಕ್ಕೆ ಮೈ ಚೆಲ್ಲಿ ತನ್ನ ಕಾಲನ್ನು ಛೇದಬಿಂದುವಿನಲ್ಲಿ ಗಟ್ಟಿಯಾಗಿ ಸಿಕ್ಕಿಸಿ ಸಮತೂಕ ಉಳಿಸಿಕೊಳ್ಳುತ್ತಿದ್ದ. ಹಾಗೂ ಮಗಳನ್ನು ಕೈಯಲ್ಲಿ ಹಿಡಿದು ಗರಗರನೆ ತಿರುಗಿ-ಸುತ್ತಿದ್ದ. ಈ ಆಟದಲ್ಲಿ ಕೆಳಗೆ ಜಾಳಿಗೆ ಹಿಡಿದು ರಕ್ಷಣೆ ಮಾಡುವ ರೀತಿ ಇರಲಿಲ್ಲ. ಅಲ್ಲಿಂದ ಬಿದ್ದರೆ ಪ್ರಾಣ ಉಳಿಯುವ ಸಂಭವವೇ ಇರ ಲಿಲ್ಲ. ಒಂದು ದಿನ ಮೈಯಲ್ಲಿ ಸ್ವಲ್ಪ ಜ್ವರ ಇರು ವಾಗಲೇ ರಾಮುಲು ಹಗ್ಗದ ಮೇಲೆ ಏರಿದ. ಪಾಪಮ್ಮನನ್ನೂ ಹೆಗಲ ಮೇಲೆ ಹೊತ್ತ. ಹಿಂದೆ ಮೈ ಚೆಲ್ಲಿ ಕಾಲನ್ನು ಛೇದಬಿಂದುವಿನಲ್ಲಿ ಸಿಕ್ಕಿಸ ಬೇಕೆಂದಿದ್ದ. ಆದರೆ ಅವನ ಕಾಲು ತಪ್ಪಿತು. ಕ್ಷಣಾರ್ಧದಲ್ಲಿ ಎರಡು ಜೀವಿಗಳು ಕೆಳಗೆ ಬಿದ್ದವು. ಪಾಪಮ್ಮನ ಪ್ರಾಣ ಆಗಲೇ ಹೋ-ಯಿತು. ರಾಮುಲು ಮೂರ್ಛೆ ಹೋದ. ದವಾ ಖಾನೆಯಲ್ಲಿ ಎರಡು ದಿನಗಳ ತರುವಾಯ ಅವನ ಮೃತ್ಯುವಾಯಿತು.

ಇನ್ನು ರಾಮಮೂರ್ತಿ ಕೊನೆಯದಾಗಿ ಒಂಟಿಗ ನಾದರು. ಜೀವನದಲ್ಲಿ ತನಗೆ ಯಾವ ಅನುಬಂಧ ಗಳೇ ಉಳಿದಿಲ್ಲವೇನೊ ಎಂದು ಭಾವಿಸಿದರು. ಆ

ಸರ್ಕಸ್ಸಿನಲ್ಲಿ ತಾನು ಜೀವಿಸಲಾರೆನೆನ್ನುವಷ್ಟು ಹುಚ್ಚಾದರು. ಮುಂದೆ ಒಂದು ದಿನ ನಮ್ಮ ಸರ್ಕಸ್ಸಿಗೆ ಬಂದರು. ತಿಂಗಳಿಗೆ ೧೫೦ ರೂಪಾಯಿ ಸಂಬಳಕ್ಕೆ ಒಪ್ಪಿ ನಮ್ಮಲ್ಲಿ ಉಳಿದ ರಾಮ-ಮೂರ್ತಿ ಬಹುಕಾಲ ನಮ್ಮಲ್ಲಿಯೆ ಉಳಿದರು.

ರಾಮಮೂರ್ತಿ ಒಬ್ಬರೇ ಇದ್ದದ್ದರಿಂದ ತುಂಬ ದುಡ್ಡನ್ನೂ ಕೂಡಹಾಕಿದರು. ವ್ಯಾ-ಯಾಮದಿಂದ ಶಕ್ತಿಯನ್ನು ವರ್ಧಿಸಿಕೊಂಡು ಹೆಸರಾಂತ ಜಟ್ಟಿಗಳೂ ಆದರು. ಅವರ ಶಕ್ತಿಯ ಪ್ರಯೋಗಗಳನ್ನು ನೋಡಿ ಜನರು ಬೆರಳು ಕಚ್ಚಿಕೊಳ್ಳಲಾರಂಭಿಸಿದರು. ತೆಂಗಿನ ಮರವನ್ನು ಬರಿಕೈಗಳಿಂದ ಅಲುಗಾಡಿಸಿ ತೋರಿಸಿದರು. ಗಿಡ ಅಲುಗಾಡಿದಂತೆಲ್ಲ ಕಾಯಿಗಳು ಪಟಪಟನೆ ಉದುರತೊಡಗಿದವು. ಅದನ್ನು ನೋಡಿ ಹನುಮಂತನ ಅವತಾರವೇ ಇವರೆಂದುದುಂಟು. ನಡೆಯುವ ಗಾಡಿಯನ್ನು ಕೈಯಿಂದ ತಡೆದು ನಿಲ್ಲಿಸುವುದನ್ನು ಇವರು ಅಭ್ಯಾಸ ಮಾಡಿದ್ದರು. ಮೋಟಾರುಗಳನ್ನು ತಡೆದುನಿಲ್ಲಿಸುವ ಇವರ ಪ್ರ-ಯೋಗ ಅದ್ಭುತವಾಗಿರುತ್ತಿತ್ತು. ಇವರ ಎರಡೂ ಮಗ್ಗಲಿಗೆ ಮೋಟಾರುಗಳನ್ನು ಇವರ ಕಡೆಗೆ ಬೆನ್ನು ಮಾಡಿ ನಿಲ್ಲಿಸಿ ಕೈಗಳಿಗೂ ಮೋಟಾರುಗಳ ಹಿಂಬದಿಗಳಿಗೂ ದಪ್ಪ ಹಗ್ಗಗಳನ್ನು ಕಟ್ಟಿ ಮೋಟಾರುಗಳನ್ನು ಶುರು ಮಾಡುತ್ತಿದ್ದರು. ಆಗ ಇವರು ತಮ್ಮ ಎಲ್ಲ ಶಕ್ತಿಯನ್ನು ಒಟ್ಟುಗೂಡಿಸಿ ಕೈಗಳನ್ನು ಬಿಗಿಯಾಗಿ ಹಿಡಿದುಬಿಡುತ್ತಿದ್ದರು. ಇದರ ಪರಿಣಾಮವಾಗಿ ಮೋಟಾರುಗಳ ಹಿಂಗಾಲಿಗಳು ನಿಂತಲ್ಲಿಯೇ ನೆಲವನ್ನು ಕೆದರಿ ಮಣ್ಣು ತೂರಿ ಅಲ್ಲಿ ತಗ್ಗನ್ನು ಮಾಡುತ್ತಿದ್ದುವೇ ವಿನಾ ಒಂದಂಗುಲವೂ ಮುಂದೆ ಹೋಗುತ್ತಿರಲಿಲ್ಲ. ಅದರಂತೆಯೆ ಮೊಳೆಗಳಿರುವ ಹಲಗೆಯ ಮೇಲೆ ಮಲಗಿ ಎದೆಯ ಮೇಲೆ ಒಂದು ಹಲಗೆಯನ್ನು ಇರಿಸಿಕೊಂಡು ಅದರ ಮೇಲೆ ಆನೆಯನ್ನು ನಿಲ್ಲಿಸಿಕೊಳ್ಳುತ್ತಿದ್ದರು. ಇಂಥ ಪ್ರಯೋಗಗಳು ರಾಮಮೂರ್ತಿಯವರಿಗೆ ಅಪಾರ ಕೀರ್ತಿಯನ್ನು ತಂದುಕೊಟ್ಟವು. ಅವರ ಸಂಬಳವನ್ನು ಒಮ್ಮೆ ಇಮ್ಮಡಿಸಿ ೩೦೦ ರೂ. ಮಾಡಲಾಯಿತು. ಆದರೆ ಇಷ್ಟರಲ್ಲಿ ರಾಮಮೂರ್ತಿಯವರಿಗೆ ನೌಕರಿ ಬೇಸರ ಬರಲಾರಂಭಿಸಿತು. ತಾವೇ ಒಂದು ಸ್ವಂತ ಸರ್ಕಸ್ ಕಂಪೆನಿ ತೆಗೆಯಬೇಕೆಂಬ ವಿಚಾರ ಅವರ ತಲೆಯಲ್ಲಿ ಸುಳಿದಾಡಲಾರಂಭಿಸಿತು. ಕೊನೆಗೆ ಒಂದು ದಿನ ಅವರು ಕಾರ್ಲೇಕರ್ ಸರ್ಕಸನ್ನು ಬಿಟ್ಟರು.

ಕಾರ್ಲೇಕರ್ ಸರ್ಕಸ್ ಬಿಟ್ಟವರು ಸೀದಾ ತಮ್ಮ ಜನ್ಮಭೂಮಿ ವಿಜಯನಗರಕ್ಕೆ ಹೋದರು. ಆಗ ಅದು ಸಂಸ್ಥಾನವಾಗಿತ್ತು. ಅಲ್ಲಿಯ ಮಹಾರಾಜರೆದುರು ತಮ್ಮ ಶಕ್ತಿಯ ಪ್ರಯೋಗಗಳನ್ನು ಮಾಡಿತೋರಿಸಿ ಅವರನ್ನು ಮಂತ್ರಮುಗ್ಧಗೊಳಿಸಿದರು. ಮಹಾರಾಜರು ಸಂತುಷ್ಟರಾಗಿ ಅತುಲ ಸಂಭಾವನೆ ಇತ್ತು ಗೌರವಿಸಿದರಲ್ಲದೇ, ಸ್ವಂತ ಸರ್ಕಸ್ಸಿನ ವಿಚಾರವನ್ನು ತಿಳಿದುಕೊಂಡು ೧೦,೦೦೦ ರೂಪಾಯಿ ಮತ್ತು ಆರು ಉತ್ತಮ ಕುದುರೆಗಳನ್ನು ಕೊಟ್ಟರು.

ಇದರಿಂದ ಹುರಿದುಂಬಿದವರಾಗಿ ರಾಮಮೂರ್ತಿಯವರು ೧೯೧೧ ರಲ್ಲಿ ಸ್ವಂತ ಸರ್ಕಸ್ಸನ್ನು ಪ್ರಾರಂಭಿಸಿದರು. ಸರ್ಕಸ್ಸಿನ ಹೆಸರು ಪ್ರೊ. ರಾಮಮೂರ್ತಿ ಸರ್ಕಸ್ ಎಂದಾಗಿತ್ತು. ಈ ಸರ್ಕಸ್ಸಿನಲ್ಲಿ ಒಂದೂ ಪಶು ಅಥವಾ ಪಕ್ಷಿ ಇರಲಿಲ್ಲ. ಬರಿಯ ಶಕ್ತಿ ಪ್ರಯೋಗಗಳಿಗೇ ಪ್ರಾಧಾನ್ಯ. ಇದರಲ್ಲಿ ಬಹಳ ಜನ ಜಟ್ಟಿಗಳಿದ್ದರು. ಸರ್ಕಸ್ಸಿನ ಡೇರೆಯ ಬಾಗಿಲುಗಳಲ್ಲಿ ದೊಡ್ಡ ದೊಡ್ಡ ಮುಂಡಾಸುಗಳನ್ನು ಸುತ್ತಿದ ಪಹಲವಾನರು ನಿಂತದ್ದು ಕಾಣುತ್ತಿತ್ತು. ಪ್ರವೇಶದ್ವಾರದಲ್ಲಿ ಸ್ವತಃ ತಾವೇ ಪಹೆಲವಾನರ ಉಡುಪನ್ನು ಧರಿಸಿ ನಿಂತುಕೊಳ್ಳುತ್ತಿದ್ದರು. ಅಖಿಲ ಭಾರತವನ್ನಲ್ಲದೆ ಸಿಲೋನ್, ಮಲಾಯಾ, ಜಾವಾ, ಸುಮಾತ್ರಾ, ಇಂಡೋಚೀನ, ಸಯಾಮ, ಬ್ರಹ್ಮದೇಶ ಮುಂತಾದ ಅನೇಕ ಹೊರನಾಡುಗಳಲ್ಲೂ ರಾಮಮೂರ್ತಿಯ

ವರ ಸರ್ಕಸ್ ತಿರುಗಿತು. ಸಾಕಷ್ಟು ದುಡ್ಡನ್ನೂ ಗಳಿಸಿತು. ಆದರೆ ರಾಮಮೂರ್ತಿಯವರ ಸ್ವಭಾವ ಸ್ವಲ್ಪ ದುಂದುಗಾರಿಕೆಯದು. ತಮ್ಮ ನೌಕರರಿಗೆ ರಾಜೋಚಿತ ಊಟವನ್ನು ನಿತ್ಯ ಒದಗಿಸುತ್ತಿದ್ದರವರು. ಯಾರೇ ಕೈ ಒಡ್ಡಿ ಕೇಳಿದರೆ ಇಲ್ಲೆನ್ನಲರಿಯದ ಜೀವ ಇವರದು. ಗವರ್ನರರು, ಸಂಸ್ಥಾನಿಕರುಗಳಿಂದ ಅನೇಕ ಪದಕಗಳನ್ನು ದೊರಕಿಸಿದರೂ ಒಂದು ವಿಷಯದಲ್ಲಿ ಮಾತ್ರ ಕಾಲು ಜಾರಿ ಉಜ್ವಲ ಚರಿತ್ರೆಗೆ ಕಲಂಕ ತಗಲಿಸಿಕೊಂಡರು.

ಮೇಲೆ ಹೇಳಿರುವ ವಿಜಯನಗರದ ಮಹಾರಾಜರು ಒಬ್ಬ ಸುಂದರ ತರುಣಿಯನ್ನು ಇಟ್ಟುಕೊಂಡಿದ್ದರು. ಅವಳ ಮೇಲೆ ಅತಿಪರಿಚಯದಿಂದ ರಾಮಮೂರ್ತಿಗಳ ಮನಸ್ಸು ಹರಿಯಿತು. ಪ್ರೀತಿ ಬೆಳೆಯಿತು. ಮುಂದುವರೆದು ಅವರು ಅವಳನ್ನು ಓಡಿಸಿಕೊಂಡು ಮುಂಬಯಿಗೆ ಹೋದರು. ಮಹಾರಾಜರ ಸಿಟ್ಟು ಅನಾಚಾರವಾಗಿ ರಾಮಮೂರ್ತಿಗಳ ಹೆಸರಿನಿಂದ ವಾರಂಟು ತೆಗೆಸಿದರು. ಅದನ್ನು ತಪ್ಪಿಸಲು ರಾಮಮೂರ್ತಿ ತಮ್ಮ ಸರ್ಕಸ್ಸನ್ನು ಫ್ರಾನ್ಸಿಗೆ ಒಯ್ದರು. ಇದಕ್ಕೆ ತಕ್ಕ ಯೋಜನೆ ಮೊದಲೇ ಸಿದ್ಧಪಡಿಸಿಕೊಂಡಿದ್ದರು.

ಫ್ರಾನ್ಸಿನಲ್ಲಿ ಆರು ವರ್ಷ ಉಳಿದರು ಪ್ಯಾರಿಸಿನಲ್ಲಿದ್ದಾಗಲೇ ಒಂದು ಕೆಟ್ಟ ಘಟನೆ ಸಂಭವಿಸಿತು. ಅದು ರಾಮಮೂರ್ತಿ ಸರ್ಕಸನ್ನೇ ಕೊನೆಯದಾಗಿ ಮುಚ್ಚಿತು

ರಾಮಮೂರ್ತಿಗಳು ಮೊಳೆಯ ಹಾಸಿಗೆಯ ಮೇಲೆ ಮಲಗಿ ಎದೆಯ ಮೇಲೆ ಆನೆಯನ್ನು ನಿಲ್ಲಿಸಿಕೊಳ್ಳುತ್ತಿದ್ದರಷ್ಟೇ! ಅವರ ಎದೆಯ ಮೇಲಿನ ಹಲಗೆಯನ್ನು ಪರೀಕ್ಷಿಸಿ ನೋಡುವ ಕೆಲಸ ಮ್ಯಾನೇಜರನ ಕಡೆಗಿತ್ತು. ಮ್ಯಾನೇಜರನೊಂದಿಗೆ ಏನೋ ಕಾರಣದಿಂದ ಸ್ವಲ್ಪ ಜಗಳವಾಗಿದ್ದರಿಂದ ಅದೇ ಮಾತಿನ ಸೇಡು ತೀರಿಸಲೆಂದು ಮ್ಯಾನೇಜರ ಮುರುಕು ಹಲಗೆಯನ್ನು ಆ ದಿನ ಇವರ ಎದೆಯ ಮೇಲೆ ಇರಿಸಿದ. ಇದಾವುದನ್ನೂ ಅರಿಯದ ರಾಮಮೂರ್ತಿ ಆಟಕ್ಕೆ ಸಿದ್ಧರಾದರು. ಆನೆ ಎದೆಯೇರುವುದೇ ತಡ, ಹಲಗೆ ಮುರಿಯಿತು. ಆಗಬಾರದಿದ್ದ ಅನಾಹುತ ಆಗಿ ಹೋಯಿತು. ರಾಮಮೂರ್ತಿಗಳ ಮೂರು ಪಕ್ಕೆಲವುಗಳೇ ಮುರಿದವು. ಅವರು ಮೂರ್ಛೆಗೊಂಡರು ಆಸ್ಪತ್ರೆಗೆ ಸಾಗಿಸಲಾಯಿತು. ೧೧ ತಿಂಗಳು ಆರೈಕೆ ಹೊಂದಿದ ಮೇಲೆ ನಡೆದಾಡುವಷ್ಟು ಗುಣ ಹೊಂದಿದರು ಆ ಮೇಲೆ ಹತಾಶರಾಗಿ ಭಾರತಕ್ಕೆ ಮರಳಿದರು. ಈಗ ವಿಜಯನಗರದ ಮಹಾರಾಜರೇ ತೀರಿಹೋಗಿದ್ದರಿಂದ ವಾರಂಟಿನ ಪ್ರಶ್ನೆಯೇ ಉಳಿದಿರಲಿಲ್ಲ. ಜೀವ ಉಳಿದಂತಾಯಿತಾದರೂ ಒಂದು ಕಾಲು ಮಾತ್ರ ಮೊಣಕಾಲಿನಿಂದ ಕೆಳಗೆ ಕತ್ತರಿಸಬೇಕಾಯಿತು. ಅಪಘಾತವಾದ ಮೇಲೆ ಇವರು ಬಹುಕಾಲ ಬಾಳಲಿಲ್ಲ. ೧೯೩೨ ರಲ್ಲಿ ಮರಳಿ ಬಂದ ಮೇಲೆ ಬನಾರಸ್ ಹಿಂದೂ ಯುನಿವರ್ಸಿಟಿಯಲ್ಲಿ ಶಾರೀರಿಕ ಶಿಕ್ಷಕನಾಗಿ ಕೆಲಸಕ್ಕೆ ಸೇರಿದರು. ಬಿರುಗಾಳಿಯಂತೆ ಬಂದ ದುಡ್ಡು ಬಿರುಗಾಳಿಯಂತೆ ಹೋಗಿತ್ತು. ಕೊನೆಯ ವರ್ಷಗಳನ್ನು ಬಹಳ ಕಷ್ಟದಲ್ಲಿ ಕಳೆಯಬೇಕಾಯಿತು. ಹೇಗೊ ಮೂರು ವರ್ಷ ಜೀವಿಸಿದ್ದು ೧೯೩೫ ರಲ್ಲಿ ಭಾರತದ ಈ ಬಲಭೀಮ ಮಹಾನಿರ್ವಾಣ ಗೈದ! *



ಈಶಚಿಂತನೆಯಲ್ಲಿ ತೊಡಗಿರುವುದರಿಂದ ನಿಮ್ಮ ಕಲ್ಯಾಣವಾಗಬಹುದು. ಆದರೆ ಸತ್ಕಾರ್ಯದಲ್ಲಿ ತೊಡಗುವುದರಿಂದ ಮತ್ತೆ ಹಲವರದೂ ಕಲ್ಯಾಣವಾಗಬಹುದು.

— ರಾಬರ್ಟ್ ಬೆನ್ಸನ್

ಪುಸ್ತಕ ವಿಭಾಗ

# ಔರಂಗಜೇಬ ಆಳುತ್ತಿದ್ದಾಗ






ಇಟಾಲಿಯನ್ ಪ್ರವಾಸಿಯ
ದಿನಚರಿಯಿಂದ

# ಔರಂಗಜೇಬ ಆಳುತ್ತಿದ್ದಾಗ–

ವಿಶ್ವಪರ್ಯಟನದ ಹವ್ಯಾಸದಿಂದ ಇಟಲಿಯ ಮಾನುಚಿ ತನ್ನ ೧೪ನೇ ವಯಸ್ಸಿನಲ್ಲಿಯೆ ವೆನಿಸ್‌ನಲ್ಲಿದ್ದ ತನ್ನ ಮನೆಯಿಂದ ಓಡಿ ಸ್ಮರ್ನಾಕ್ಕೆ ಹೋಗುವ ಹಡಗವೊಂದನ್ನು ಕಳ್ಳತನದಿಂದ ಏರಿದ. ಅಲ್ಲಿ ಅವನಿಗೆ ಇಂಗ್ಲಂಡಿನ ಎರಡನೆಯ ಚಾರ್ಲಸನ ಪರವಾಗಿ ರಾಯಭಾರಿಯಾಗಿ ಇರಾಣಕ್ಕೆ ಹೊರಟಿದ್ದ ಲಾರ್ಡ್ ಬೆಲ್ಮೋಂಟನ ಪರಿಚಯವಾಯಿತು. ಲಾರ್ಡ್ ಬೆಲ್ಮೋಂಟ್ ಮಾನುಚಿಯನ್ನು ನೌಕರಿಗಿಟ್ಟುಕೊಂಡ. ಪರ್ಶಿಯದ ಶಾಹನಿಂದ ಸಾಲ ಪಡೆಯಲು ಲಾರ್ಡ್ ಬೆಲ್ಮೋಂಟ್ ಅಸಮರ್ಥನಾಗಲು ಅವನಿಗೆ ಮೊಗಲರ ದರಬಾರಕ್ಕೆ ಹೋಗಲು ಆದೇಶ ಬಂತು. ಆತ ಮಾನುಚಿಯೊಂದಿಗೆ ೧೬೫೬ ಜನವರಿಯಲ್ಲಿ ಸುರತ್ ತಲುಪಿ ಅಲ್ಲಿ ಹನ್ನೊಂದು ವಾರಗಳಿದ್ದು ಬಳಿಕ ದಿಲ್ಲಿಗೆ ಹೊರಟ.

ಹಾದಿಯಲ್ಲಿ ಲಾರ್ಡ್ ಬೆಲ್ಮೋಂಟ್ ಅಕಸ್ಮಾತ್ತಾಗಿ ಬೇನೆಬಿದ್ದು ಮರಣ ಹೊಂದಿದ. ಮಾನುಚಿ ದಿಲ್ಲಿಯನ್ನು ಮುಟ್ಟಿದ. ಬೆಲ್ಮೋಂಟನ ಸಾಮಾನಿನ ಸಂಬಂಧದಲ್ಲಿ ಎದ್ದ ಒಂದು ಜಗಳದ ಮೂಲಕ ಅವನಿಗೆ ಶಾಹಜಹಾನನ ಹಿರಿಯ ಮಗ ದಾರಾನ ಪರಿಚಯವಾಯಿತು. ದಾರಾ ಅವನನ್ನು ತನ್ನ ತೋಫುಗಾರನೆಂದು ನಿಯಮಿಸಿಕೊಂಡ.

೧೬೫೮ ರಲ್ಲಿ ಔರಂಗಜೇಬ ತಂದೆಯ ವಿರುದ್ಧ ದಂಗೆಯೆದ್ದಾಗ ದಾರಾನನ್ನು ಅವನ ಸಮಾಚಾರ ತೆಗೆದುಕೊಳ್ಳಲು ಕಳಿಸಲಾಯಿತು. ಸಾಮೂಗಡ ಯುದ್ಧದಲ್ಲಿ ದಾರಾನನ್ನು ಸೋಲಿಸಿ ಔರಂಗಜೇಬ ಆಗ್ರಾಕ್ಕೆ ಹೋಗಿ ಶಾಹಜಹಾನನನ್ನು ಬಂಧಿಸಿದ. ಮಾನುಚಿ ಯುದ್ಧಭೂಮಿಯಿಂದ ಓಡಿಹೋಗಿ ಆಗ್ರಾವನ್ನು ತಲುಪಿ ಅಲ್ಲಿ ವೇಷ ಬದಲಾಯಿಸಿಕೊಂಡು ಔರಂಗಜೇಬನ ಸೈನ್ಯವನ್ನು ಸೇರಿಕೊಂಡ. ಆತ ಸೈನ್ಯದಲ್ಲಿರುವಾಗ ಔರಂಗಜೇಬ ಮೋಸದಿಂದ ಮುರಾದನನ್ನು ಬಂಧಿಸಿ ತಾನೇ ಸಮ್ರಾಟನಾದ. ಮಾನುಚಿ ಸಾಧುವಿನ ವೇಷ ಧರಿಸಿ ದಿಲ್ಲಿಗೆ ಬಂದು ಅಲ್ಲಿಂದ ಹೊರಟು ಲಾಹೋರಿನಲ್ಲಿ ಹೊಸ ಸೈನ್ಯ ಕಟ್ಟುತ್ತಿದ್ದ ದಾರಾನನ್ನು ಕೂಡಿಕೊಂಡು ಭಕ್ಕರಕ್ಕೆ ಹೋದ. ದಾರಾ ಗುಜರಾತಿಗೆ ಹೊರಟಾಗ ಮಾನುಚಿ ತೋಫುಖಾನೆಯ ಸೇನಾಪತಿಯಾಗಿ ಭಕ್ಕರದಲ್ಲೇ ಉಳಿದ. ಭಕ್ಕರಕ್ಕೆ ಮುತ್ತಿಗೆ ಬಿದ್ದಾಗ ಭೀಕರ ಕದನ ನಡೆಯಿತು. ಕಿಲ್ಲೆಯ ಪತನವಾದಾಗ ಸೈನ್ಯದ ತುಕಡಿಯೊಂದರ ಜೊತೆ ಮಾನುಚಿ ಲಾಹೋರಿಗೆ ಬಂದ. ಅಲ್ಲಿ ಒಂದು ಯುದ್ಧದಲ್ಲಿ ಆತ ಸತ್ತು ಸತ್ತು ಉಳಿದ. ಇತರ ಯುರೋಪಿಯನ್ ತೋಫುಗಾರರೊಂದಿಗೆ ಮಾನುಚಿ ದಿಲ್ಲಿಗೆ ಬಂದನಾದರೂ ಔರಂಗಜೇಬನ ನೌಕರಿ ಮಾಡಲು ನಿರಾಕರಿಸಿದ.

ಮಾನುಚಿ ಔರಂಗಜೇಬನ ಶಾಸನ ಕಾಲದ ತನ್ನ ಅನುಭವಗಳನ್ನು ಬರೆದಿಟ್ಟಿದ್ದು ಆದರ ಸಾರವನ್ನು ಇಲ್ಲಿ ಕೊಡಲಾಗಿದೆ.

ಔರಂಗಜೇಬ ತನ್ನ ತಂದೆಯನ್ನು ಸೆರೆಯಲ್ಲಿಟ್ಟು ಬಂಧುಗಳನ್ನು ಕೊಲ್ಲಿಸಿ ತಾನೇ ಹಿಂದುಸ್ಥಾನದ ಸಮ್ರಾಟನಾಗಿದ್ದಾನೆ ಎಂಬ ವಾರ್ತೆಯನ್ನು ಕೇಳಿದೊಡನೆ ಬಾಲ್ಖದ ಬಾದಶಾಹ ನಡುಗಿ ಹೋದ. ಅವನಿಗೆ ಈ ಹೊಸ ಸಮ್ರಾಟನ ಶಕ್ತಿಯ ಪರಿಚಯವಿತ್ತು. ಬಾದಶಾಹ ಶಾಹಜಹಾನನು ಔರಂಗಜೇಬನನ್ನು ತನ್ನೊಡನೆ ಯುದ್ಧ ಮಾಡಲು ಕಳಿಸಿದ್ದ ಪ್ರಸಂಗ ಅವನಿಗೆ ನೆನಪಾಯಿತು. ಈಗಲೋ ಔರಂಗಜೇಬ ಸ್ವತಃ ಬಾದಶಾಹನಾಗಿದ್ದ. ಅವನ ಬಳಿ ಅಪಾರ ಧನರಾಶಿ, ಅಪಾರ ಸೈನ್ಯವಿತ್ತು. ಆತ ಬಾಲ್ಖದ ಮೇಲೆ ದಾಳಿ ಮಾಡಿದರೆ? ಸಂದೇಹ, ಭಯಗಳಿಂದ ತ್ರಸ್ತನಾದ ಬಾಲ್ಖದ ಬಾದಶಾಹ ಔರಂಗಜೇಬನ ಸ್ನೇಹ ಸಂಪಾದಿಸುವುದಕ್ಕಾಗಿ ಅಪಾರ ಕಪ್ಪಕಾಣಿಕೆಗಳೊಂದಿಗೆ ದೂತರನ್ನು ಕಳಿಸಿದ.

ಔರಂಗಜೇಬನಿಗೆ ಈ ಕಪ್ಪಕಾಣಿಕೆಗಳ ನಿಜಾರ್ಥ ತಿಳಿದಿತ್ತು. ಬಾಲ್ಖವನ್ನು ಗೆದ್ದುಕೊಳ್ಳಬೇಕೆಂಬ ಹಂಬಲ ಅವನಿಗಿದ್ದರೂ ತನ್ನ ಆಳಿಕೆಯ ಆರಂಭದಲ್ಲಿಯೆ ಬಾಲ್ಖದ ಬಾದಶಾಹ ಇತರರನ್ನು ಕೂಡಿಕೊಂಡು ತನಗೆ ಸಂಕಟವನ್ನು ತಂದೊಡ್ಡುವುದು ಅವನಿಗೆ ಬೇಡವಾಗಿತ್ತು. ಈ ರಾಜ್ಯ ಎತ್ತರವಾದ ಪರ್ವತಗಳ ಮಡಿಲಲ್ಲಿದ್ದು, ಅಲ್ಲಿಯ ಶೀತವನ್ನು ಹಿಂದುಸ್ಥಾನದ ಸೈನಿಕರು ಸಹಿಸಿಕೊಳ್ಳುವುದು ಸಾಧ್ಯವಿರದ್ದರಿಂದ ದಂಡಯಾತ್ರೆ ಕೈಕೊಳ್ಳುವುದೂ ಕಠಿಣವಾಗಿತ್ತು. ಆದ್ದರಿಂದ ಆತ ಬಾಲ್ಖದ ಬಾದಶಾಹನ ದೂತರನ್ನು ಬಹು ಪ್ರೇಮದಿಂದ (೧೬೬೧) ಸ್ವಾಗತಿಸಿದ. ಆದರೆ ಅವರು ತನ್ನ ದರಬಾರಿನಲ್ಲಿ ಹಿಂದುಸ್ಥಾನದ ಸಂಪ್ರದಾಯದಂತೆ ಸಲಾಮು ಮಾಡಬೇಕು, ಅಂದರೆ ತಲೆಯ ಮೇಲೆ ಕೈಯಿಟ್ಟುಕೊಂಡು ಅದನ್ನು ಮೂರು ಸಲ ನೆಲಕ್ಕೆ ತಾಗುವಂತೆ ಮಣಿಸಬೇಕು ಎಂದು ಕರಾರು ಹಾಕಿದ. ಬಾಲ್ಖದ ರಾಜದೂತರು ಹಾಗೆಯೆ ಮಾಡಿ ತಮ್ಮ ಬಾದಶಾಹನ ಪತ್ರವನ್ನೊಪ್ಪಿಸಲು ಮುಂದುವರಿದಾಗ ಔರಂಗಜೇಬನ ದ್ವಿತೀಯ ಮಂತ್ರಿ ಮುಲಾಫತಖಾನನು ಅವರನ್ನು ತಡೆದು ತಾನೇ ಆ ಪತ್ರವನ್ನು ಸಮ್ರಾಟನ ಕೈಗೆ ಕೊಟ್ಟ. ಆ ಪತ್ರವನ್ನು ಮುಖ್ಯಮಂತ್ರಿ ಜಾಫರಖಾನನಿಗೆ ಕೊಟ್ಟು ಅದಕ್ಕೆ ಯೋಗ್ಯ ಉತ್ತರ ಬರೆಯಲು ಅವನಿಗೆ ತಿಳಿಸಿ ಕಾಣಿಕೆಯ ವಸ್ತುಗಳನ್ನು ತನ್ನ ಸಮ್ಮುಖದಲ್ಲಿ ತರಲು ಔರಂಗಜೇಬ ಆಜ್ಞಾಪಿಸಿದ.

ಆ ವಸ್ತುಗಳನ್ನು ಕಂಡು ಸಂತೋಷವನ್ನು ವ್ಯಕ್ತಪಡಿಸಿ ಬಾಲ್ಖದ ರಾಜದೂತರಿಗೆ ಸನ್ಮಾನ ಸೂಚಕ ವಸ್ತ್ರಗಳನ್ನು ಕೊಡಿಸಿ ಆದಷ್ಟು ಬೇಗ ಅವರನ್ನು ಅವರ ದೇಶಗಳಿಗೆ ತಿರುಗಿ ಕಳಿಸಿಕೊಡುವ ವ್ಯವಸ್ಥೆ ಮಾಡಬೇಕೆಂದು ಔರಂಗಜೇಬ ಆಜ್ಞೆಯಿತ್ತ. ದಿಲ್ಲಿಯಲ್ಲಿರುವ ವರೆಗೆ ಆ ರಾಜದೂತರು ಬೇಕಾದಾಗ ದರಬಾರಕ್ಕೆ ಬರಬಹುದೆಂದು ಹೇಳಿದ. ಬಾಲ್ಖದ ರಾಜದೂತರು ತಂದಿದ್ದ ಒಂದು ಕುದುರೆಯನ್ನು ಔರಂಗಜೇಬ ಬಹುವಾಗಿ ಮೆಚ್ಚಿದ. ಈ ಕುದುರೆ ದಿಲ್ಲಿಯಿಂದ ಸೂರ್ಯೋದಯಕ್ಕೆ ಹೊರಟು ಆಗ್ರಾವನ್ನು ಸೂರ್ಯಾಸ್ತ ಸಮಯಕ್ಕೆ ಮುಟ್ಟಿತು. ಈ ಕುದುರೆಗೆ ಔರಂಗಜೇಬ "ಬಾದೇ ರಫ್ತಾರ್" (ಗಾಳಿಯಂತೆ ವೇಗಶಾಲಿ) ಎಂಬ ಹೆಸರನ್ನಿಟ್ಟ.

ಬಾಲ್ಖದ ರಾಜದೂತರು ದಿಲ್ಲಿಯಲ್ಲಿ ನಾಲ್ಕು ತಿಂಗಳ ಕಾಲ ಇದ್ದರು. ಅವರೆಲ್ಲ ಕುರೂಪ ಆಕೃತಿಯವರಾಗಿದ್ದರು. ಕಪ್ಪು ಬಣ್ಣ, ಎತ್ತರದ ಶರೀರ, ಚಿಕ್ಕ ಬಿಳಿಯ ಗಡ್ಡ, ಬಲು ಸಣ್ಣ ಕಣ್ಣುಗಳು. ಅವರು ಉತ್ತಮ ಕುದುರೆ ಸವಾರರೂ ಧನುರ್ಧಾರಿಗಳೂ ಆಗಿದ್ದರು. ಅವರೊಡನೆ ಬಂದಿದ್ದ ಜನ ಕುದುರೆ, ಒಂಟೆ, ಪ್ರಾಣಿಗಳ ಚರ್ಮ, ಕಸ್ತೂರಿ ಮುಂತಾದವನ್ನು ತಂದಿದ್ದರು. ಅವರು ಅವನ್ನು ದಿಲ್ಲಿಯಲ್ಲಿ ಮಾರಿದರು. ನಾನೂ ಅವರಿಂದ ಅನೇಕ ವಸ್ತುಗಳನ್ನು ಕೊಂಡೆ.

ಬೇಸಿಗೆಯ ದಿನಗಳು ಬರಲು ತಮಗೆ ತುಂಬ ತೊಂದರೆಯಾಗುತ್ತದೆ, ಆದ್ದರಿಂದ ಬೇಗನೆ

ತಮ್ಮನ್ನು ಮರಳಿ ಕಳಿಸಿ ಕೊಡಬೇಕು ಎಂದು ಬಾಲ್ಖದ ರಾಜದೂತರು ಔರಂಗಜೇಬನಿಗೆ ವಿನಂತಿ ಮಾಡಿಕೊಂಡರು. ಬೇಸಿಗೆಯ ತಾಪ ದಿಂದ ಅವರಲ್ಲನೇಕರು ಸತ್ತರು. ಆದರೆ ಮುಖ್ಯ ವಾಗಿ ಅವರ ಕಡುಲೋಭಿತನವೇ ಅವರ ಮೃತ್ಯುವಿಗೆ ಕಾರಣವಾಗಿತ್ತು. ಬಾದಶಾಹನು ತಮ್ಮ ವೆಚ್ಚಕ್ಕಾಗಿ ಕೊಟ್ಟ ಹಣದಲ್ಲಿ ಉಳಿಸಿ ಕೊಳ್ಳಲು ಬಯಸಿ ಅವರು ಬೇನೆ ಬಿದ್ದ ಕುದುರೆ ಮತ್ತು ಒಂಟೆಗಳ ಮಾಂಸವನ್ನು ತಿನ್ನುತ್ತಿದ್ದರು.

ಈ ರಾಜದೂತರು ದಿಲ್ಲಿಯಲ್ಲಿ ಮಾರಲೆಂದು ಅನೇಕ ತಾರ್ತರಿ ಮತ್ತು ಉಜಬೆಕ್ ಸ್ತ್ರೀಯ ರನ್ನು ತಂದಿದ್ದರು. ಜನಾನಖಾನೆಯಲ್ಲಿ ಮೇಣೆ ಗಳನ್ನು ಹೊರಲು ಅಥವಾ ಬಾದಶಾಹನು ಹೆಂಡಂದಿರೊಡನೆ ರಾತ್ರಿ ಕಳೆಯುವಾಗ ಕಾವಲು ನಡೆಸಲು ಈ ಸ್ತ್ರೀಯರು ಉಪಯುಕ್ತರಾಗಿದ್ದರು. ಅವರು ಬಲು ಧೀರರೂ ಭರ್ಚಿ, ಖಡ್ಗ, ಬಿಲ್ಲು ಬಾಣಗಳ ಉಪಯೋಗವನ್ನು ಬಲ್ಲವರೂ ಆಗಿದ್ದುದರಿಂದ ಈ ಕೆಲಸಕ್ಕೆ ವಿಶೇಷ ಅರ್ಹ ರೆಂದು ಪರಿಗಣಿಸಲ್ಪಡುತ್ತಿದ್ದರು. ಇವರಲ್ಲಿ 'ಯಾಕ್ಷಿ' ಎಂಬ ಹುಡುಗಿಯನ್ನು ಇಫ್ತಿಯಾರ ಖಾನನು ಕೊಂಡು ಬಾದಶಾಹನಿಗೆ ಕಾಣಿಕೆ ಯಾಗಿ ಕೊಟ್ಟ. ಔರಂಗಜೇಬ ಅವಳನ್ನು ತನ್ನ ಮಹಲಿನಲ್ಲಿ ದ್ವಾರಪಾಲಕಳನ್ನಾಗಿ ನೇಮಿಸಿದ.

ಕೆಲ ತಿಂಗಳಲ್ಲಿ ಯಾಕ್ಷಿ ಗರ್ಭವತಿಯಾಗಿ ದ್ದಾಳೆಂದು ರಾಜಮಹಲಿನ ಸ್ತ್ರೀ ನೌಕರರ ಮುಖ್ಯಸ್ಥನು ಬಾದಶಹನಿಗೆ ವರದಿ ಮಾಡಿದ. ಯಾಕ್ಷಿಗೆ ಗಂಡು ಮಗು ಹುಟ್ಟಿದರೆ ತಾನು ಅವ ನನ್ನು ಮಗನಂತೆ ಸಾಕುವೆ, ಮಗಳು ಹುಟ್ಟಿದರೆ ಮಗಳಂತೆ ಸಾಕುವೆ ಎಂದು ಔರಂಗಜೇಬ ಹೇಳಿದ. ಯಾಕ್ಷಿಗೆ ಹುಟ್ಟಿದ ಗಂಡು ಮಗುವಿಗೆ ಆತ ಆಲಮತೋಷ ಬಹಾದೂರ ಎಂದು ಹೆಸ ರಿಟ್ಟು ಅವನನ್ನು ದತ್ತಕಪುತ್ರನಂತೆ ಸಲಹಿದ. ಆತ ದೊಡ್ಡವನಾದಾಗ ಅವನಿಗೆ ಅರಸು ಮಕ್ಕಳ ಸೌಕರ್ಯಗಳನ್ನೆಲ್ಲ ಒದಗಿಸಿದ. ಆದರೆ ಆ ಹುಡುಗ ಸ್ವಚ್ಛಂದನಾಗಿ ವರ್ತಿಸಿದ್ದರಿಂದ ಔರಂಗಜೇಬ ಅವನಿಗಿತ್ತ ಸೌಕರ್ಯಗಳನ್ನೆಲ್ಲ ಕಸಿದುಕೊಂಡು ಅವನನ್ನು ಹೊರಗೆ ಹಾಕ ಬೇಕಾಗಿಬಂತು.

೨೦ ಸಿಂಹಾಸನವನ್ನೇರಿದೊಡನೆ ಔರಂಗಜೇಬನು ಮಾವುತರ ಸೊಕ್ಕನ್ನು ಅಡಗಿಸುವ ನಿರ್ಧಾರ ವನ್ನು ಮಾಡಿದ. ಈ ಮಾವುತರು ಪ್ರತಿನಿತ್ಯ ಅರಮನೆಯ ಎದುರಿನಲ್ಲಿ ಆನೆಗಳ ಕವಾಯತು ಮಾಡಿಸುವುದಕ್ಕಾಗಿ ಇಲ್ಲವೆ ಅವುಗಳಲ್ಲಿ ದ್ವಂದ್ವ ಯುದ್ಧ ಮಾಡಿಸುವುದಕ್ಕಾಗಿ ಅನೇಕ ಆನೆಗ-ಳನ್ನು ತರುತ್ತಿದ್ದರು. ಎಷ್ಟೋ ಸಲ ಬೇಕೆಂದೇ ಆನೆಗಳನ್ನು ರೊಚ್ಚಿಗೆಬ್ಬಿಸುತ್ತಿದ್ದುದರಿಂದ ತುಂಬ ಅನಾಹುತವಾಗುತ್ತಿತ್ತು. ರೊಚ್ಚಿಗೆದ್ದ ಆನೆಗಳು ನಗರದಲ್ಲಿ ಕೋಲಾಹಲವನ್ನುಂಟುಮಾಡುತ್ತಿ-ದ್ದವು. ಈ ಗದ್ದಲದಲ್ಲಿ ಎಷ್ಟೋ ಜನ ಸಾಯುತ್ತಿ ದ್ದರು, ಅಂಗಡಿ ಪೇಟೆಗಳು ಧ್ವಂಸವಾಗುತ್ತಿ-ದ್ದವು. ತಮಗೆ ಯಾರ ಮೇಲೆ ದ್ವೇಷವಿದೆಯೊ ಅವರ ಅಂಗಡಿಗಳನ್ನು ಮೊದಲಿಗೆ ಮಾವುತರು ಆನೆಗಳಿಂದ ಹಾಳುಗೆಡವಿಸುತ್ತಿದ್ದರು.

ಆನೆಗಳಿಗೆ ತನ್ನಷ್ಟಕ್ಕೆ ಮದವೇರುವುದೇ ಅಥವಾ ಅವುಗಳಿಗೆ ಮದವೇರಿಸಲಾಗುವುದೇ ಎಂದು ಔರಂಗಜೇಬ ಕೇಳಿದ. ಔರಂಗಜೇಬ ನನ್ನು ಸಂತುಷ್ಟನನ್ನಾಗಿ ಮಾಡಿದರೆ ತಮ್ಮ ಸಂಬಳ ಹೆಚ್ಚೀತೆಂಬ ಆಶೆಯಿಂದ ಮಾವುತರು “ಕೆಲ ಔಷಧಿಗಳನ್ನು ತಿನ್ನಿಸಿ ಇವುಗಳಿಗೆ ಮದ ಬರುವಂತೆ ಮಾಡುವೆವು” ಎಂದು ಹೇಳಿದರು. ಆಗ ಬಾದಶಾಹನು ಯಾರ ಆನೆ ಮನುಷ್ಯರನ್ನು ಕೊಲ್ಲುವುದೋ ಆ ಮಾವುತನ ರುಂಡ ಹಾರಿಸ ಲಾಗುವುದೆಂದೂ ಆನೆ ಧ್ವಂಸಮಾಡಿದ ಆಸ್ತಿಯ ಹಣವನ್ನು ಮಾವುತರ ವೇತನದಿಂದ ತುಂಬಿ ಕೊಡಲಾಗುವುದು ಎಂದೂ ವಿಧಿಸಿದ. ಈ ಬಗೆಯ ಕರಾರಿಗೆ ಸಹಿ ಮಾಡಬೇಕಾಗಿ ಬಂದಿ ದ್ದರಿಂದ ಮಾವುತರ ಮೂಲಕ ನಡೆಯುತ್ತಿದ್ದ

ಆನೆಗಳ ಉಪದ್ರವ ತುಂಬಾ ಕಡಿಮೆಯಾಗಿ ಜನಕ್ಕೆ ನೆಮ್ಮದಿಯಾಯಿತು.

ಆನೆಗಳಿಗೆ ಸಂಬಂಧಪಟ್ಟ ಒಂದು ಘಟನೆಯನ್ನು ಇಲ್ಲಿ ಹೇಳದಿರಲಾರೆ. ಒಂದು ದಿನ ಔರಂಗಜೇಬನು ಶಾಹಜಹಾನನ ಎಲ್ಲ ಆನೆಗಳನ್ನು ತನ್ನ ಮುಂದೆ ತರಬೇಕೆಂದು ಆಜ್ಞೆ ಮಾಡಿದನು. ಶಾಹಜಹಾನನ ಆನೆಗಳ ಸಂಖ್ಯೆ ಸುಮಾರು ೩,೦೦೦ ಇತ್ತು. ಅವುಗಳಲ್ಲಿ ಎಷ್ಟೋ ಆನೆಗಳ ಮೇಲೆ ಚಿನ್ನ-ಬೆಳ್ಳಿಗಳ ಅಂಬಾರಿಗಳಿದ್ದವು.

ಮೊದಲನೆಯ ದಿನ ಆನೆಗಳ 'ಸರದಾರ' ಖಾಲಿಕದಾದ ಎಂಬ ಆನೆಯನ್ನು ಬಾದಶಾಹನ ಸಮ್ಮುಖದಲ್ಲಿ ತಂದು ನಿಲ್ಲಿಸಲು ಮಾವುತರು ಯೋಚಿಸಿದರು. ಈ ಆನೆ ವಿಶಾಲ ಕಾಯದ್ದಾಗಿತ್ತು. ಹದಿನೆಂಟು ಅಡಿ ಎತ್ತರವಾಗಿದ್ದ ಈ ಆನೆಯೆಂದರೆ ಶಾಹಜಹಾನನಿಗೆ ತುಂಬ ಪ್ರೀತಿಯಿತ್ತು. ಆದರೆ ಈ ಆನೆಯನ್ನು ಕಿಲ್ಲೆಯೊಳಗೆ ತರುವುದು ಮಾವುತರಿಗೆ ಸಾಧ್ಯವಾಗದ್ದರಿಂದ ಅವರು ಉಳಿದ ಆನೆಗಳನ್ನು ತಂದು ಔರಂಗಜೇಬನ ಸಮ್ಮುಖದಲ್ಲಿ ನಿಲ್ಲಿಸಿದರು.

ಖಾಲಿಕದಾದ ಆನೆ ಕಿಲ್ಲೆಯೊಳಕ್ಕೆ ಬರಲು ನಿರಾಕರಿಸುತ್ತಿದೆಯೆಂದು ಔರಂಗಜೇಬನಿಗೆ ಗೊತ್ತಾದೊಡನೆ ಅವನು "ಅದನ್ನು ಇಲ್ಲಿ ತನ್ನಿರಿ. ಇಲ್ಲವಾದರೆ ನಿಮ್ಮನ್ನು ಕೆಲಸದಿಂದ ತೆಗೆದು ಹಾಕುವುದಲ್ಲದೆ ಬಾರುಕೋಲಿನಿಂದ ಹೊಡೆಸುವೆ" ಎಂದು ಮಾವುತರಿಗೆ ಎಚ್ಚರಿಕೆಯಿತ್ತ. ಅಂಜಿದ ಮಾವುತರು ಒಂದು ಉಪಾಯ ಹುಡುಕಿದರು. ಮೂರು ದಿನ ಆನೆಗೆ ಅನ್ನ ನೀರುಗಳನ್ನು ಕೊಡದೆ ಉಪವಾಸವಿಟ್ಟು ಅವರು ಕಿಲ್ಲೆಯ ರಸ್ತೆಯ ಎರಡೂ ಬದಿಗಳಲ್ಲಿ ಹಸಿರು ಟೊಂಗೆಗಳನ್ನೂ ಕಬ್ಬುಗಳನ್ನೂ ಕಟ್ಟಿದರು. ಖಾಲಿಕದಾದ ಇವುಗಳ ಆಶೆಯಿಂದ ಅವರೊಂದಿಗೆ ಕಿಲ್ಲೆಯನ್ನು ಪ್ರವೇಶಿಸಿತು.

ಬಾದಶಾಹ ಬರುವುದನ್ನು ಕಂಡೊಡನೆ ಮಾವುತನ ಸಂಕೇತದಂತೆ ಖಾಲಿಕದಾದ ಸೊಂಡಿಲನ್ನೆತ್ತಿ ಸಲಾಮು ಮಾಡಿತು. ಅಷ್ಟರಲ್ಲಿ ಅದಕ್ಕೆ ತನ್ನ ಮನಸ್ಸಿನ ವಿರುದ್ಧ ತನ್ನನ್ನಿಲ್ಲಿ ತಂದಿದ್ದಾರೆಂಬ ಕಲ್ಪನೆ ಬಂತೆಂದು ಕಾಣುತ್ತದೆ. ಅದೊಮ್ಮೆ ಚೀತ್ಕಾರ ಮಾಡಿ ತನ್ನ ಜೊತೆ ಬಂದಿದ್ದ ಹೆಣ್ಣಾನೆಗಳ ಮೇಲೆ ಏರಿ ಹೋಗಿ ಅವನ್ನು ಬದಿಗೆ ಸರಿಸುತ್ತ ಕ್ರೋಧಾವೇಶದಿಂದ ಓಡತೊಡಗಿತು. ಹಾದಿಯಲ್ಲಿ ಸಿಕ್ಕಿದ್ದನ್ನೆಲ್ಲ ಧ್ವಂಸ ಮಾಡತೊಡಗಿತು. ಕೋಲಾಹಲವೆದ್ದು ಹೋಯಿತು. ಕಿಲ್ಲೆಯಿಂದ ಹೊರಬೀಳುವಾಗ ಬಾಗಿಲಲ್ಲಿ ಖಾಲಿಕದಾದಕ್ಕೆ ಒಂದು ಕಲ್ಲಿನ ಆನೆ ಕಾಣಿಸಿತು. ಅದನ್ನು ನಿಜ ಆನೆಯೆಂದೇ ಭಾವಿಸಿ ಖಾಲಿಕದಾದ ಅದನ್ನು ಉರುಳಿಸಿ ತುಳಿದು ಮುಂದಕ್ಕೆ ಹೋಯಿತು. ಕುರಾನಿನ ಅನುಯಾಯಿಯಾದ ಔರಂಗಜೇಬನು ಆ ಕಲ್ಲಿನ ಆನೆಯ ಜೊತೆಯಾಗಿದ್ದ ಇನ್ನೊಂದು ಕಲ್ಲಿನ ಆನೆಯನ್ನೂ ನಾಶಮಾಡಲು ಆಜ್ಞೆಯಿತ್ತ.



ನಗರ ಮಧ್ಯದ ವಿಶಾಲ ಬಯಲಿಗೆ ಬಂದು ಖಾಲಿಕದಾದ ಇತರ ಆನೆಗಳನ್ನು ಬೆದರಿಸಿ ಓಡಿಸುತ್ತ, ಪಲ್ಲಕ್ಕಿಗಳನ್ನು ಮುರಿಯುತ್ತ ಕುದುರೆಗಳನ್ನು ಕೆಡವಿ ತುಳಿಯುತ್ತ ಧಾಂದಲೆ ಹಾಕಿತು. ಮನುಷ್ಯರನ್ನು ಅದು ಬೆನ್ನಟ್ಟತೊಡಗಲು ಜನ "ತ್ರಾಹಿತ್ರಾಹಿ" ಎಂದು ಕೂಗುತ್ತ ಚಲ್ಲಾಪಿಲ್ಲಿಯಾಗಿ ಓಡಹತ್ತಿದರು. ಕೆಲವರ ಪಗಡಿ ಉರುಳಿತು, ಕೆಲವರ ಖಡ್ಗ ಕಳಚಿಬಿತ್ತು, ಕೆಲವರ ಧನುರ್ಬಾಣಗಳು ನೆಲವನ್ನು ಕಂಡವು. ನಾನು ನನ್ನ ಕುದುರೆಯ ಮೇಲೆ ಕುಳಿತು ಅಲ್ಲಿಂದ ಓಡಿದೆ.

ಆಗಾಗ ಕತ್ತು ಹೊರಳಿಸಿ ನಾನು ಖಾಲಿಕದಾದನನ್ನು ನೋಡುತ್ತಿದ್ದೆ. ಜನರ ಸಂಕಟವನ್ನು ಕಂಡು ತಾಪವಾಗುತ್ತಿದ್ದರೂ ನಾಲ್ಕೂ ಕಡೆಗಳಲ್ಲಿ ಬರಿಗಾಲಿನಲ್ಲಿ ಜೀವದಾಶೆಯಿಂದ ಓಡುತ್ತಿದ್ದ ನೂರಾರು ಜನರನ್ನು ಕಂಡು ನನಗೆ ನಗೆ ತಡೆಯದಾಯಿತು.

ಆನೆಯ ಈ ಉನ್ಮತ್ತತೆಯನ್ನು ಕಂಡು ಅದು ಇಲ್ಲಿರುವುದು ಬೇಡವೆಂದು ಔರಂಗಜೇಬ ನಿರ್ಧರಿಸಿದ. ಅದನ್ನು ಆಗ್ರಾಕ್ಕೆ ಒಯ್ದು ಶಾಹಜಹಾನ ತನ್ನ ಮಹಲಿನಿಂದಲೇ ಅದನ್ನು ನೋಡಬಹುದಾದಲ್ಲಿ ಕಟ್ಟಿಹಾಕಬೇಕೆಂದೂ ಅಪ್ಪಣೆಮಾಡಿದ. ಖಾಲಿಕದಾದ ಮುಂದೆ ಅಲ್ಲಿ ಒಂಬತ್ತು ವರ್ಷ ಬದುಕಿತ್ತು. ತನ್ನ ಒಡೆಯ ಶಾಹಜಹಾನ ಸತ್ತ ದಿನವೇ ಈ ಆನೆ ಕೂಡ ಸತ್ತಿತು.

ಔರಂಗಜೇಬನಿಗೆ ಇಬ್ಬರು ತಂಗಿಯರಿದ್ದರು. ದೊಡ್ಡವಳ ಹೆಸರು ಜಹಾನಾರಾ. ಇವಳನ್ನು ಬೇಗಮ ಸಾಹಿಬಾ ಎಂದು ಕರೆಯುತ್ತಿದ್ದರು. ಕಿರಿಯವಳು ರೋಶನಾರಾ ಬೇಗಮ. ಜಹಾನಾರಾ ತನ್ನ ತಂದೆಯೊಂದಿಗೆ ಆಗ್ರಾದಲ್ಲಿ ಕೈದಿಯಾಗಿದ್ದಳು. ಅಲ್ಲಿ ಅವಳು ತಂದೆಯ ಸೇವೆ ಶುಶ್ರೂಷೆಗಳಲ್ಲಿ ಮಗ್ನಳಾಗಿದ್ದಳು. ಶಾಹಜಹಾನ ದಿಲ್ಲಿಯ ಸಾಮ್ರಾಟನಾಗಿದ್ದ ಕಾಲದಲ್ಲಿ

ಟಾಟಾರವರ
ಓ ಡಿ
ಕೊಲೋನ್
ಸಾಬೂನು




ಓ ಡಿ ಕೊಲೋನ್ ನಿಂದ ಕೂಡಿದ್ದು, ಬಂಗಾರ ಬಣ್ಣದ ಕಾಗದದಿಂದ ([illegible]) ಪ್ಯಾಕ್ ಮಾಡಲ್ಪಟ್ಟಿರುತ್ತದೆ.



TESY-14

ಇವಳು ಕಿಲ್ಲೆಯ ಹೊರಗೆ ಒಂದು ಪ್ರತ್ಯೇಕ ನಿವಾಸದಲ್ಲಿ ಇರುತ್ತಿದ್ದಳು. ಔರಂಗಜೇಬ ಬಾದಶಾಹನಾದ ಬಳಿಕ ರೋಶನಾರಾ ಕೂಡ ಸ್ವಚ್ಛಂದ ಜೀವನ ನಡೆಸಬಯಸಿದಳು. ಔರಂಗ ಜೇಬ ಅವಳನ್ನು ತುಂಬ ಪ್ರೀತಿಸುತ್ತಿದ್ದ. ಒಂದು ದಿನ ರೋಶನಾರಾ ತನಗೆ ಜಹಾನಾರಾಳ ಮಹಲಿನಲ್ಲಿ ಇರಲು ಅನುಮತಿಯನ್ನೀಯ ಬೇಕೆಂದು ಬಿನ್ನವಿಸಿಕೊಂಡಳು. ಈ ಬಿನ್ನಹದ ಹಿಂದಿದ್ದ ಉದ್ದೇಶವನ್ನು ಚೆನ್ನಾಗಿ ತಿಳಿದಿದ್ದರೂ ಔರಂಗಜೇಬ ಅದನ್ನು ಹೊರಗೆಡಹದೆ, "ತಂಗಿ, ನಾನು ಸಂತೋಷದಿಂದ ಈ ಮಾತಿಗೆ ಒಪ್ಪಿ ಕೊಳ್ಳುತ್ತಿದ್ದೆ. ಆದರೆ ನಿನ್ನ ಸಹವಾಸವನ್ನು ಕಳೆದುಕೊಳ್ಳಲಾರದಷ್ಟು ಮಟ್ಟಿಗೆ ನಾನು ನಿನ್ನನ್ನು ಪ್ರೀತಿಸುತ್ತೇನೆ. ಅಲ್ಲದೆ ಬಾದಶಾಹನ ಹೆಣ್ಣುಮಕ್ಕಳು ತಂದೆಯ ಮಹಲಿನ ಹೊರಗಡೆ ಇರಲಾರರು. ನನ್ನ ಹೆಣ್ಣು ಮಕ್ಕಳು ನೀನು ದೂರವಿರುವುದನ್ನು ಸಹಿಸಲಾರರು. ಆದ್ದರಿಂದ ನೀನು ಅವರ ಜೊತೆಯಲ್ಲಿದ್ದು ಅವರಿಗೆ ರಾಜ ಕುಮಾರಿಯರ ನೀತಿ ನಡಾವಳಿಗಳನ್ನು ಹೇಳಿ ಕೊಡು. ನಿನಗೆ ಇಲ್ಲಿ ಕಡಿಮೆಯಾಗಿರುವು ದಾದರೂ ಏನು? ನನ್ನ ಈ ಮೊಗಲ ಸಾಮ್ರಾಜ್ಯದ ಸಂಪತ್ತು-ವೈಭವವೆಲ್ಲ ನಿನ್ನದೇ ಆಗಿದೆ" ಎಂದನು.

ಅರಮನೆಯ ಇಂಥ ಸಂಗತಿಗಳೆಲ್ಲ ನನಗೆ ಒಬ್ಬ ಪೋರ್ತುಗೀಸ್ ಹೆಂಗಸಿನಿಂದ ತಿಳಿಯು ತ್ತಿದ್ದವು. ತೋನಾಜಿಯಾ ಮಾರ್ಟಿನ್ಸ್ ಎಂಬ ಈಕೆ ಹುಗಲಿ ಯುದ್ಧದ ಕಾಲದಲ್ಲಿ ಮುಸಲ್ಮಾನರಿಂದ ಬಂಧಿಸಲ್ಪಟ್ಟು ದಿಲ್ಲಿಗೆ ತರಲ್ಪಟ್ಟಿದ್ದಳು. ಬಾದಶಾಹನ ಪಾಕಶಾಲೆಯ ಮುಖ್ಯಸ್ಥಳಾಗಿ ನೇಮಕಗೊಂಡ ಇವಳನ್ನು ರೋಶನಾರಾ ಬೇಗಮಳು ತುಂಬ ಮಮತೆಯಿಂದ ಕಾಣುತ್ತಿದ್ದಳು. ಅರಮನೆಯಲ್ಲಿ ಸೇವಕಿಯರಾಗಿದ ಸಿಪಾಯಿಗಳ ಹೆಂಡಂದಿರಿಗೆ ತಿಂಗಳಲ್ಲಿ ಒಂದು ವಾರ ತಂತಮ್ಮ ಗಂಡಂದಿರೊಂದಿಗೆ ಇರಲು ಅವಕಾಶ ಕೊಡುತ್ತಿದ್ದರು. ಹೀಗೆ ಹೊರಗೆ ಬಂದಾಗ ನನ್ನ ಮೇಲೆ ಬಹು ಪ್ರಸನ್ನಳಾಗಿದ್ದ ತೋನಾಜಿಯಾ ನನಗೆ ಅರಮನೆಯ ಸುದ್ದಿಗಳನ್ನೆಲ್ಲ ತಿಳಿಸುತ್ತಿದ್ದಳು. ಅನೇಕ ವಸ್ತುಗಳನ್ನು ಕಾಣಿಕೆಯಾಗಿ ಅರ್ಪಿಸುತ್ತಿದ್ದಳು.

ರೋಶನಾರಾಳ ಈ ಬಿನ್ನಹ ಅಮಾನ್ಯವಾದ ಕೆಲ ತಿಂಗಳುಗಳ ನಂತರ ಒಂದು ದಿನ ಜನಾನಖಾನೆಯ ನಪುಂಸಕ ಕಾವಲುಗಾರರು ತಮ್ಮ ಮುಖ್ಯಸ್ಥನಿಗೆ ರೋಶನಾರಾಳ ಮಹಲಿನಲ್ಲಿ ಇಬ್ಬರು ಯುವಕರು ಬಂದಿದ್ದರೆಂದು ತಿಳಿಸಿದರು. ಆತ ಇಬ್ಬರನ್ನು ಕಾವಲು ನಿಲ್ಲಿಸಿ ಅವರ ಮೂಲಕ ಕೆಲ ದಿನಗಳ ಮೇಲೆ ರೋಶನಾರಾ ಬೇಗಮಳು ತನ್ನ ಇಚ್ಛಾಪೂರ್ತಿಗಾಗಿ ಕರೆಸಿಕೊಂಡಿದ್ದ ಇಬ್ಬರನ್ನು ಹಿಡಿಸಿದನು. ಅವರನ್ನು



ಔರಂಗಜೇಬನ ಎದುರು ತಂದಾಗ ಆತ ಅವರು ಬಂದಿದ್ದ ಕಾರಣವನ್ನು ಅರಿತುಕೊಂಡ ಮೇಲೆ ಹೆಚ್ಚಿನ ವಿಚಾರಣೆ ನಡೆಸದೆ ಅವರಿಬ್ಬರೂ ತಾವು ಒಳಗೆ ಬಂದಿದ್ದ ಹಾದಿಯಿಂದಲೇ ಹೊರಗೆ ಹೋಗಬೇಕು ಎಂದು ವಿಧಿಸಿದ. ಒಬ್ಬಾತ ತಾನು ಬಾಗಿಲಿನಿಂದಲೇ ಒಳ ಹೊಕ್ಕಿದ್ದೆ ಎನ್ನಲು ಅವನನ್ನು ಬಾಗಿಲಿನಿಂದಲೇ ಹೊರಗೆ ಹೋಗಗೊಟ್ಟರು. ಇನ್ನೊಬ್ಬ ಕೈದಿ ಮಾತ್ರ ತನ್ನ ದಡ್ಡತನದಿಂದ ತಾನು ಗೋಡೆ ಜಿಗಿದು ಒಳಗೆ ಬಂದಿದ್ದೆನೆಂದು ಹೇಳಿದ. ನಪುಂಸಕರ ಮುಖ್ಯಸ್ಥನಿಗೆ ಅವನ ಅಜಾಗರೂಕತೆಗಾಗಿ ಬಾದಶಾಹ ದಂಡ ವಿಧಿಸಿದ್ದರಿಂದ ನೊಂದು ಕೊಂಡ ಆತನು ಈ ಎರಡನೆಯವನ ಮೇಲೆ ಸೇಡು ತೀರಿಸಿಕೊಳ್ಳುವುದಕ್ಕಾಗಿ ಅವನನ್ನು ಗೋಡೆಯಾಚೆ ನೂಕಿಸಿ ಕೆಡವಿಸಿದ. ಇದರಿಂದ ಆತ ಸತ್ತ. ಔರಂಗಜೇಬ ಇದನ್ನು ಕೇಳಿ ಅಸ್ವಸ್ಥ ಚಿತ್ತನಾದ. ಏಕೆಂದರೆ ಇದರಿಂದ ನಿಜ ಸಂಗತಿ ಪ್ರಕಟವಾಗುವಂತಿತ್ತು. ರಾಜಕುಮಾರಿಯರ ಮರ್ಯಾದೆಯ ರಕ್ಷಣೆಗಾಗಿ ಈ ಸಂಗತಿಯನ್ನು ಆತ ಗುಪ್ತವಾಗಿಡಬಯಸಿದ್ದ. ತನ್ನ ಕೈಕೆಳಗಿನ-ವರನ್ನು ಬಲು ಕ್ರೂರತನದಿಂದ ನಡೆಸಿಕೊಳ್ಳುತ್ತಾನೆಂಬ ನೆಪ ಹೇಳಿ ಆತ ನಪುಂಸಕರ ಮುಖ್ಯಸ್ಥನನ್ನು ಕೆಲಸದಿಂದ ತೆಗೆದುಹಾಕಿದ. ರೋಶನಾರಾಳ ಪಾಪದ ಫಲವನ್ನು ಆ ಮುಖ್ಯಸ್ಥ ಭೋಗಿಸಬೇಕಾಯಿತು. ಈ ಘಟನೆಯ ನಂತರ ಔರಂಗಜೇಬನ ದೃಷ್ಟಿಯಲ್ಲಿ ರೋಶನಾರಾಳ ಬೆಲೆ ಇಳಿದುಹೋಯಿತು.

ಸಾಮಾನ್ಯವಾಗಿ ರಾಜಮಹಲಿನಲ್ಲಿ ಭಿನ್ನ ಭಿನ್ನ ಜಾತಿಗಳ ಸುಮಾರು ೨,೦೦೦ ಸ್ತ್ರೀಯರಿ-ರುತ್ತಿದ್ದರು. ಪ್ರತಿಯೊಬ್ಬಳಿಗೂ ಬೇರೆ ಬೇರೆ ಕೆಲಸವಿರುತ್ತಿತ್ತು. ಕೆಲವರು ಬಾದಶಾಹನ ಸೇವೆಗಾಗಿ, ಕೆಲವರು ಬೇಗಮರ ಸೇವೆಗಾಗಿ, ಇನ್ನು ಕೆಲವರು ಬಾದಶಾಹನ ಉಪಪತ್ನಿಯರ ಸೇವೆಗಾಗಿ ಮತ್ತು ಹಲವರು ರಾಜಕುಮಾರಿಯರ ಸೇವೆಗಾಗಿ ಮೀಸಲಾಗಿರುತ್ತಿದ್ದರು. ಈ ಸೇವಕಿಯರಲ್ಲದೆ ಗಾಯಕಿಯರೂ ಇರುತ್ತಿದ್ದರು. ಗಾಯಕಿಯರಲ್ಲಿ ಕೆಲವರು ರಾಜಕುಮಾರಿಯರಿಗೆ ಓದು ಬರೆಹವನ್ನು ಕಲಿಸುತ್ತಿದ್ದರು. ಜೊತೆಗೆ ಪ್ರೇಮ ಗೀತೆಗಳನ್ನೂ ಕಲಿಸುತ್ತಿದ್ದರು.

ಬಾದಶಾಹನಿಗೆ ಹೊರಗಿನ ಆಡಳಿತ ಕಾರ್ಯಕ್ಕಾಗಿ ಅಧಿಕಾರಿಗಳಿರುವಂತೆ ಜನಾನಾದಲ್ಲೂ ಅಲ್ಲಿಯ ಅಧಿಕಾರಿಗಳಿರುತ್ತಿದ್ದರು. ಬಾದಶಾಹ ಅಂತಃಪುರದಲ್ಲಿರುವಾಗ ಈ ಅಧಿಕಾರಿಗಳ ಮೂಲಕವೇ ಹೊರಗಿನ ಅಧಿಕಾರಿಗಳಿಗೆ ಬಾದಶಾಹನ ಆದೇಶ ತಲುಪುತ್ತಿತ್ತು. ಜನಾನಾದ ಸ್ತ್ರೀ ಅಧಿಕಾರಿಗಳ ಆಯ್ಕೆಯನ್ನು ಬಲು ಎಚ್ಚರದಿಂದ ಮಾಡಲಾಗುತ್ತಿತ್ತು. ಈ ಸ್ತ್ರೀಯರು ಬಲು ಚತುರರಾಗಿರುತ್ತಿದ್ದರು. ರಾಜ್ಯದಲ್ಲಿಯ ಸಕಲ ವಿಚಾರಗಳೂ ಅವರಿಗೆ ಗೊತ್ತಿರುತ್ತಿದ್ದವು. ಬಾದಶಾಹನಿಗೆ ತಿಳಿಯಬೇಕಾದ ಎಲ್ಲ ವಿಷಯ



ಗಳ ವರದಿಯನ್ನೂ ಇವರು ಒಪ್ಪಿಸಬೇಕಾಗುತ್ತಿತ್ತು. ಬಾದಶಾಹನ ನಿರ್ದೇಶದಂತೆ ಅವುಗಳ ಉತ್ತರವನ್ನು ಬರೆದು ಕಳಿಸಬೇಕಾಗುತ್ತಿತ್ತು.

ಔರಂಗಜೇಬ ರಾತ್ರಿ ಬಹಳ ಹೊತ್ತಿನ ವರೆಗೆ ಎಚ್ಚರವಾಗಿದ್ದು ಕೆಲಸದಲ್ಲಿ ತೊಡಗಿರುತ್ತಿದ್ದ. ಆತ ಕೇವಲ ಮೂರು ತಾಸು ಮಾತ್ರ ನಿದ್ದೆ ಮಾಡುತ್ತಿದ್ದ. ಬೆಳಿಗ್ಗೆ ಎದ್ದೊಡನೆ ಒಂದೂವರೆ ತಾಸಿನ ವರೆಗೆ ಪ್ರಾರ್ಥನೆಗಳಲ್ಲಿ ತೊಡಗಿರುತ್ತಿದ್ದ. ಪ್ರತಿವರ್ಷ ೪೦ ದಿನಗಳ ವರೆಗೆ ಪ್ರಾಯಶ್ಚಿತ್ತವನ್ನಾಚರಿಸುತ್ತಿದ್ದ. ಈ ಅವಧಿಯಲ್ಲಿ ಆತ ಉಪವಾಸವಿದ್ದು ನೆಲದ ಮೇಲೆ ಮಲಗುತ್ತಿದ್ದ. ದಾನಧರ್ಮಗಳನ್ನು ಮಾಡುತ್ತಿದ್ದ. ಅಲ್ಲಾ ತನಗೆ ಸದಾ ವಿಜಯವನ್ನು ದಯಪಾಲಿಸಲಿ ಎಂದು ವ್ರತವನ್ನು ಪಾಲಿಸುತ್ತಿದ್ದ. ದಿನಕ್ಕೆ ಒಂದೇ ಸಲ ಊಟ ಮಾಡುತ್ತಿದ್ದ. ಆತ ಮಲಗಿರುವಾಗ ಬಾಗಿಲಲ್ಲಿ ಬಿಲ್ಲು, ಬಾಣ, ಖಡ್ಗ ಮುಂತಾದ ಆಯುಧಗಳ ಪ್ರಯೋಗದಲ್ಲಿ ನಿಷ್ಣಾತರಾದ ಗುಲಾಮ ಸ್ತ್ರೀಯರು ಕಾವಲಿರುತ್ತಿದ್ದರು.

ಬಾದಶಾಹನ ಪಾಕಶಾಲೆಗಾಗಿ ದಿನಾಲು ಒಂದು ಸಾವಿರ ರೂಪಾಯಿ ವೆಚ್ಚ ಬರುತ್ತಿತ್ತು. ಅಲ್ಲಿಯ ಕೆಲಸಗಾರರು ಈ ಹಣದಿಂದ ಎಲ್ಲರ ಅವಶ್ಯಕತೆಗಳನ್ನೂ ಪೂರೈಸಬೇಕಾಗುತ್ತಿತ್ತು. ಬಗೆಬಗೆಯ ಮಾಂಸಾದಿಗಳ ಅಡಿಗೆಯನ್ನೂ ಪಕ್ವಾನ್ನಗಳನ್ನೂ ತಯಾರಿಸಿ ಚೀನೀಮಣ್ಣಿನ ತಾಟುಗಳಲ್ಲಿಟ್ಟು ಆ ತಾಟುಗಳನ್ನು ಚಿನ್ನದ ಪಾತ್ರೆಗಳಲ್ಲಿಟ್ಟು ಬಾದಶಾಹನ ಮುಂದಿರಿಸುತಿದ್ದರು. ಬಾದಶಾಹ ಅನುಗ್ರಹವೆಂದು ಇವುಗಳಲ್ಲಿ ಕೆಲವನ್ನು ತನ್ನ ಬೇಗಮರು, ಕುಮಾರಿಯರು, ಮುಖ್ಯ ಕಾವಲುಗಾರರಿಗೆ ಕಳಿಸಿಕೊಡುತ್ತಿದ್ದ. ಈ ಅನುಗ್ರಹ ಬೇಗಮರಿಗೆ ತುಂಬ ತುಟ್ಟಿ ಬೀಳುತ್ತಿತ್ತು. ಏಕೆಂದರೆ ಅದನ್ನು ತಂದ ನಪುಂಸಕರಿಗೆ ಕೈತುಂಬ ಇನಾಮು ಕೊಡಬೇಕಾಗುತ್ತಿತ್ತು. ಬಾದಶಾಹ ಶತ್ರು ಪ್ರದೇಶದಲ್ಲಿ-

ದ್ದಾಗ ಮಾತ್ರ ಖರ್ಚಿನ ಮೇಲೆ ನಿಯಂತ್ರಣ ವಿರುತ್ತಿರಲಿಲ್ಲ. ಎಷ್ಟೇ ವೆಚ್ಚ ಬಂದರೂ ದಿಲ್ಲಿಯಲ್ಲಿ ತಯಾರಿಸಿದಂತೆಯೆ ಎಲ್ಲ ಅಡಿಗೆ ಮಾಡಬೇಕಾಗುತ್ತಿತ್ತು. ಅಂತಃಪುರದ ಬೇಗಮರು, ಶಾಹಜಾದಿಯರಿಗೆ ಅವರವರ ವೆಚ್ಚಕ್ಕಾಗಿ ಪ್ರತ್ಯೇಕ ಹಣ ದೊರೆಯುತ್ತಿತ್ತು.

ಔರಂಗಜೇಬ ತನ್ನ ಆಳಿಕೆಯ ಆರಂಭದಲ್ಲಿ ಎಲ್ಲ ಬಗೆಯ ಸಂಗೀತವನ್ನು ಪ್ರತಿಬಂಧಿಸಿದ್ದರೂ ತನ್ನ ಬೇಗಮರು ಮತ್ತು ಹೆಣ್ಣುಮಕ್ಕಳ ಮನೋರಂಜನೆಗಾಗಿ ಮಹಲಿನಲ್ಲಿ ಅನೇಕ ನರ್ತಕಿಯರನ್ನೂ ಗಾಯಕಿಯರನ್ನೂ ನೇಮಿಸಿಕೊಂಡಿದ್ದ.

ರಾಜಮಹಲಿನ ವೆಚ್ಚ ವಿಪರೀತವಾಗಿತ್ತು. ವರ್ಷಕ್ಕೆ ಸರಾಸರಿ ಒಂದು ಕೋಟಿ ರೂಪಾಯಿಗಳು ಬೇಕಾಗುತ್ತಿದ್ದವು. ಆದರೆ ಇದರಲ್ಲಿ ಸೇನಾಪತಿಗಳಿಗೆ ಮತ್ತು ಇತರ ಅಧಿಕಾರಿಗಳಿಗೆ ಬಹುಮಾನವಾಗಿ ಕೊಡುವ ವಸ್ತ್ರಾಭರಣಗಳ ವೆಚ್ಚವೂ ಸೇರಿರುತ್ತಿತ್ತು. ಹಿಂದುಸ್ಥಾನದ ಜನರ ಅತ್ತರ್ ಮತ್ತು ಹೂಗಳ ಮೇಲಿನ ಪ್ರೀತಿಯನ್ನು ಗಮನಿಸಿದಾಗ ಈ ವೆಚ್ಚವೇನೂ ಭಾರಿಯೆಂದು ಕಾಣಿಸುವುದಿಲ್ಲ. ಬಗೆ ಬಗೆಯ ಅತ್ತರುಗಳಿಗಾಗಿ ಬಹಳ ಹಣ ಖರ್ಚಾಗುತ್ತಿತ್ತು. ಎಲೆ ಅಡಿಕೆಯ ವೆಚ್ಚವೂ ದೊಡ್ಡದಾಗಿತ್ತು. ನಿತ್ಯವೂ ಹೊಸ ಹೊಸ ಆಭರಣಗಳನ್ನು ಮಾಡಿಕೊಡುವುದಕ್ಕಾಗಿ ಅಕ್ಕಸಾಲಿಗರ ತಂಡವೇ ದುಡಿಯುತ್ತಿತ್ತು.

ತಮ್ಮ ಅಮೌಲ್ಯ ಆಭರಣಗಳನ್ನು ಪುನಃ ಪುನಃ ನೋಡುವುದು, ಜನರಿಗೆ ತೋರಿಸುವುದು ಬೇಗಮ ಮತ್ತು ಶಾಹಜಾದಿಯರಿಗೆ ಒಂದು ಮನೋರಂಜನೆಯ ಸಾಧನವಾಗಿತ್ತು. ಈ ಪ್ರದರ್ಶನಕ್ಕೆ ಇನ್ನೂ ಒಂದು ಕಾರಣವಿರುವುದು ನನಗೆ ಅನುಭವಕ್ಕೆ ಬಂದಿದೆ. ತಮ್ಮ ರೋಗ ಪರೀಕ್ಷೆಗಾಗಿ ಅವರು ನನ್ನನ್ನು ಎಷ್ಟೋ ಸಲ ಕರೆಸಿಕೊಳ್ಳುತ್ತಿದ್ದರು. ( ಆ ಕಾಲದಲ್ಲಿ ಎಲ್ಲ ಫಿರಂಗಿಗಳೂ ಕುಶಲ ಡಾಕ್ಟರರು ಎಂದೇ ಜನ ತಿಳಿಯುತ್ತಿದ್ದರು. ) ನಾನು ಹೋದಾಗ ನನ್ನೊಡನೆ ಮಾತನಾಡಲು ಅನುಕೂಲವಾಗಲೆಂದು ತಮ್ಮ ಎಲ್ಲ ಆಭರಣಗಳನ್ನು ತರಿಸಿಕೊಂಡು ತೋರಿಸುವ ನೆವ ಮಾಡುತ್ತಿದ್ದರು. ಚಿನ್ನದ ತಟ್ಟೆಗಳಲ್ಲಿ ಈ ಆಭರಣಗಳನ್ನಿಟ್ಟು ತರುತ್ತಿದ್ದರು. ಈ ರತ್ನಾದಿಗಳ ಗುಣ, ಬೆಲೆ ಇತ್ಯಾದಿ ವಿಚಾರಗಳನ್ನು ಕುರಿತು ನನ್ನೊಂದಿಗೆ ಮಾತಾಡುತ್ತಿದ್ದರು. ನಾನಲ್ಲಿ ಬಹು ಬೆಲೆಯ ಮುತ್ತು ರತ್ನಗಳನ್ನು ನೋಡಿದೆ. ಮೊದಲನೆಯ ಸಲ ನೋಡಿದಾಗ ಇವು ಬೇರೆ ಬೇರೆ ತರಹದ ಫಲಗಳೆಂದೇ ಭ್ರಮಿಸಿದ್ದೆ. ಎಲ್ಲ ಬೇಗಮರ ಬಳಿ ಎಂಟೆಂಟು ಹತ್ತುಹತ್ತು ಬಗೆಯ ಆಭರಣಗಳ ಮಾಲಿಕೆ ಇರುತ್ತಿತ್ತು. ಅವರ ಉಡುಪು ಬಲು ಬೆಲೆಯುಳ್ಳದ್ದಾಗಿರುತ್ತಿತ್ತು. ದಿನಕ್ಕೆ ಹಲವಾರು ಸಲ ಅವರು ಉಡುಪು ಬದಲಾಯಿಸುತ್ತಿದ್ದರು. ರಾತ್ರಿ ಕಾಲದಲ್ಲಿ ಇವರ ಮನೋರಂಜನೆಗಾಗಿ ಮದ್ದು ಸುಡುವುದು, ದೊಡ್ಡ ದೊಡ್ಡ ಹಿಲಾಲುಗಳನ್ನುರಿಸುವುದು ನಡೆಯುತ್ತಿತ್ತು. ಇದಕ್ಕಾಗಿಯೇ ವರ್ಷಕ್ಕೆ ಒಂದೂವರೆ ಲಕ್ಷ ರೂಪಾಯಿ ಖರ್ಚಾಗುತ್ತಿತ್ತು. ಬಾದಶಾಹನ ಅಪ್ಪಣೆ ಪಡೆದು ಕೆಲ ಬೇಗಮರು ಮತ್ತು ಶಾಹಜಾದಿಯರು ತಲೆಗೆ ರುಮಾಲು ಕಟ್ಟುತ್ತಿದ್ದರು. ಅದಕ್ಕೆ ಬೆಲೆಯುಳ್ಳ ಮುತ್ತುರತ್ನಗಳ ಗುಚ್ಛವನ್ನು ಹಚ್ಚಿಕೊಳ್ಳುತ್ತಿದ್ದರು.

ಒಮ್ಮೆ ಔರಂಗಜೇಬನಿಗೆ ವಿಪರೀತ ಜ್ವರ ಬಂದು ಅದರ ಅಮಲಿನಲ್ಲಿ ಆತ ಬಡಬಡಿಸ ತೊಡಗಿದ. ಔಷಧಿಗಳಿಂದ ಜ್ವರವಿಳಿಸುವುದು ಸಾಧ್ಯವಾಗದ್ದರಿಂದ ಹಕೀಮರು ಅವನ ಮೈ-ಯಿಂದ ರಕ್ತ ತೆಗೆದರು. ಆದರೆ ಜ್ವರದ ತಾಪದಲ್ಲಿ ಔರಂಗಜೇಬ ಹಾಸಿಗೆಯ ಮೇಲೆ ಅತ್ತಿತ್ತ ಹೊರಳಾಡುವಾಗ ಗಾಯಕ್ಕೆ ಕಟ್ಟಿದ್ದ ಪಟ್ಟಿ ಬಿಚ್ಚಿ ಹೋಯಿತು. ಹಕೀಮರು ಬಂದು ಮತ್ತೆ ಪಟ್ಟಿ ಕಟ್ಟುವುದರೊಳಗಾಗಿ ತುಂಬಾ ರಕ

ಸ್ರಾವವಾಯಿತು.

ಜ್ವರದ ಕಾವಿನಿಂದ ಕಂಗಾಲಾದ ಔರಂಗಜೇಬ ಕರಬೂಜ ಹಣ್ಣನ್ನು ತಿನ್ನಬಯಸಿದ. ಹಕೀಮನು ಮೂರ್ಖತನದಿಂದ ಆಗಬಹುದು ಎಂದ. ಕರಬೂಜ ತಿಂದಿದ್ದರಿಂದ ಔರಂಗಜೇಬನ ನಾಲಿಗೆಗೆ ವಾತವಿಕಾರವಾಗಿ ಆತ ಮಾತನಾಡುವುದೇ ನಿಂತುಹೋಯಿತು. ಗುಣ ಹೊಂದುತ್ತಾನೊ ಇಲ್ಲವೊ ಎಂಬ ಸಂದೇಹ ಮೂಡಿತು.

ತನ್ನ ಅಣ್ಣ ಇನ್ನು ಬದುಕುವುದಿಲ್ಲವೆಂದು ಯೋಚಿಸಿ ರೋಶನಾರಾ ಬೇಗಮಳು ರಾಜಮುದ್ರೆಯನ್ನು ವಶಪಡಿಸಿಕೊಂಡು ಔರಂಗಜೇಬನ ಮೂರನೆಯ ಮಗ ಆಜಮನ ಹೆಸರಿನಲ್ಲಿ ಸೇನಾಪತಿಗಳು ಮತ್ತು ಆಶ್ರಿತ ರಾಜರಿಗೆ ಪತ್ರಗಳನ್ನು ಬರೆದಳು. ಆಗ ಆಜಮನಿಗೆ ಕೇವಲ ಒಂಭತ್ತು ವರ್ಷಗಳಾಗಿದ್ದು ಆತ ಜನಾನಖಾನೆಯಲ್ಲಿಯೆ ಇರುತ್ತಿದ್ದ. ಔರಂಗಜೇಬನ ಎರಡನೆಯ ಮಗ ಸುಲ್ತಾನ ಮುಅಜ್ಜಮ (ಇವನನ್ನು ಶಾಹ ಆಲಂ ಎಂದೂ ಕರೆಯುತ್ತಿದ್ದರು) ನ ತಾಯಿಗೆ ಈ ಸಂಗತಿ ಗೊತ್ತಾಗಿ ಅವಳು "ನೀನು ಹೀಗೆ ಮಾಡುವುದು ಒಳಿತಲ್ಲ." ಎಂದು ರೋಶನಾರಾಳಿಗೆ ಹೇಳಿದಳು. ಔರಂಗಜೇಬ ಬದುಕುವ ಆಶೆ ಇರುವಾಗ ಸೇನಾಪತಿಗಳನ್ನೂ ಆಶ್ರಿತ ರಾಜರನ್ನೂ ಅವನ ವಿರುದ್ಧ ಎತ್ತಿ ಕಟ್ಟುವುದು ಯೋಗ್ಯವಲ್ಲೆಂದು ಹೇಳಿ ಆಕೆ ಔರಂಗಜೇಬನ ಮಂಚದ ಬಳಿ ಹೋಗತೊಡಗಲು ರೋಶನಾರಾ ಅವಳ ಕೂದಲನ್ನು ಹಿಡಿದೆಳೆದು ಕೋಣೆಯಿಂದ ಹೊರಗೆ ದಬ್ಬಿದಳು. ಬೇಗಮಳು ಆಗ ತನ್ನ ರೋಗಿ ಗಂಡನಿಗೆ ಇದೆಲ್ಲ ಗೊತ್ತಾಗಿ ಕಷ್ಟವಾಗದಿರಲಿ ಎಂದು

ಎಲ್ಲವನ್ನೂ ಸಹಿಸಿಕೊಂಡಳು.

ಈ ಅವಧಿಯಲ್ಲಿ ದಿಲ್ಲಿಯಲ್ಲಿ ತುಂಬ ಗೊಂದಲ ವೆದ್ದಿತು. ಬಾದಶಾಹ ಸತ್ತನೆಂಬ ಸುದ್ದಿ ಹಬ್ಬಿ ಜನ ತಂತಮ್ಮ ಹಿತಸಾಧನೆಯಲ್ಲಿ ಮಗ್ನರಾದರು. ಬಾದಶಾಹ ಇನ್ನೂ ಬದುಕಿದ್ದಾನೆ, ಆದರೆ ಆತ ಗುಣ ಹೊಂದುವ ಆಶೆಯೇನೂ ಇಲ್ಲ,ಶಾಹಜಹಾನನನ್ನು ಬಿಡಿಸಿಕೊಂಡು ಬರಲು ರಾಜಾ ಜಸವಂತ ಸಿಂಹ ಬರುತ್ತಿದ್ದಾನೆ ಎಂದು ಕೆಲವರು ಹೇಳುತ್ತಿದ್ದರು. ಇದೇ ಕೆಲಸಕ್ಕಾಗಿ ಮೊಹಬತ ಖಾನ ಬರುತ್ತಿದ್ದಾನೆಂದೂ ಇನ್ನು ಕೆಲವರು ಅಂದರು.

ತಾನು ಬದುಕುವ ಆಶೆಯಿಲ್ಲವೆಂದು ಬಗೆದು ಔರಂಗಜೇಬನು ತನ್ನ ವಿಶ್ವಾಸಪಾತ್ರನಾದ ನಪುಂಸಕ ಪ್ರಮುಖ ದಾನಿಶನನ್ನು ಕರೆದು ಸುಲ್ತಾನ ಆಜಮನ ಹಿತರಕ್ಷಣೆ ಮಾಡಲು ಅವನಿಗೆ ಹೇಳಿದ. ತಾನು ಸತ್ತರೆ ಸುಲ್ತಾನ ಆಜಮನನ್ನು ಶಾಹಿಸ್ತೆಖಾನನ ಕೈಗೆ ಒಪ್ಪಿಸಬೇಕೆಂದು ಆತ ಆಜ್ಞೆ ಮಾಡಿದ. ಶಾಹಿಸ್ತೆಖಾನ ಇರಾಣಿಯಾದುದರಿಂದ ಈ ರಾಜಕುಮಾರನ ಹಿತ ಸಾಧಿಸಬಹುದೆಂದು ಆತ ಬಗೆದಿದ್ದ. ಸುಲ್ತಾನ ಮುಅಜ್ಜಮನು ದೊಡ್ಡವನಾಗಿದ್ದ. ಅವನ ತಾಯಿ ಮತ್ತು ದೊಡ್ಡ ದೊಡ್ಡ ಸೇನಾಪತಿಗಳು ಅವನ ಪಕ್ಷದವರಾಗಿದ್ದರು. ಇನ್ನೂ ತೀರ ಚಿಕ್ಕವನಾಗಿದ್ದ ಸುಲ್ತಾನ ಆಜಮನ ತಮ್ಮ ಶಾಹಜಾದೆ ಅಕಬರನ ಬಗ್ಗೆ ಔರಂಗಜೇಬ ಏನನ್ನೂ ಹೇಳಲಿಲ್ಲ.

ಔರಂಗಜೇಬನ ಭೀಕರ ಬೇನೆಯ ಸುದ್ದಿ ಆಗ್ರಾವನ್ನು ತಲುಪಿದಾಗ ಶಾಹಜಹಾನನ ಮೇಲಿದ್ದ ಕಾವಲಿನ ಪ್ರಮುಖನಾದ ಇತಬಾರ ಖಾನ ತುಂಬಾ ಹೆದರಿಹೋದ. ಶಾಹಜಹಾನನನ್ನುಬಿಡಿಸಿಕೊಂಡು ಹೋಗಲು ಜಸವಂತಸಿಂಹ ಮತ್ತು ಮೊಹಬತ ಖಾನರು ಬರುತ್ತಿದ್ದಾರೆಂದು ಕೇಳಿ ಆತನ ಭಯ ಇನ್ನಿಷ್ಟು ಹೆಚ್ಚಿತ್ತು. ಶಾಹಜಹಾನನಿಗೆ ತಾನು ಎಸಗಿದ ದ್ರೋಹದ ಕಲ್ಪನೆ ಅವನಿಗೆ ಬಂದು ತನಗಿನ್ನು ಉಳಿಗಾಲವಿಲ್ಲವೆಂದೇ ಆತ ತಿಳಿದುಕೊಂಡ. ತನಗೆ ಒದಗಬಹುದಾದ ಭಯಾನಕ ಮೃತ್ಯುವಿನ ಕಲ್ಪನೆಯಿಂದ ಆತ ನಡುಗಿ ಪ್ರಸಂಗವಶಾತ್ ಉಪಯೋಗಕ್ಕೆ ಬರಲೆಂದು ವಿಷವನ್ನು ತರಿಸಿಟ್ಟುಕೊಂಡ. ಔರಂಗಜೇಬ ಬದುಕಿರುವನೇ ಸತ್ತನೇ ಎಂದು ತಿಳಿಯುಕೊಳ್ಳಲು ಆತ ಪ್ರತಿನಿತ್ಯ ದಿಲ್ಲಿಗೆ ಆಳನ್ನು ಅಟ್ಟುತ್ತಿದ್ದ.

ಔರಂಗಜೇಬ ತಾನು ಬದುಕಿರುವುದನ್ನು ಜಾಹೀರು ಮಾಡುವುದು ಅಗತ್ಯವಾಗಿತ್ತಾದ್ದರಿಂದ ಆಗಾಗ ಆಜ್ಞೆಗಳನ್ನು ಹೊರಡಿಸುತ್ತಲೇ ಇದ್ದ. ಶಾಹಜಹಾನನ ಮೇಲಿನ ಕಾವಲನ್ನು ಬಿಗಿಪಡಿಸಬೇಕು ಎಂದು ಆತ ಇತಬಾರ ಖಾನನಿಗೂ ಆಜ್ಞೆ ಕಳುಹಿಸಿದ. ತನ್ನ ಪತ್ರಗಳ ಮೇಲೆ ಮುದ್ರೆ ಒತ್ತಲು ಆತ ಮುದ್ರೆಯನ್ನು ತರಹೇಳಿದಾಗ ಅದು ಸಿಗಲಿಲ್ಲ. ತನ್ನ ಮುದ್ರೆಯುಂಗುರ ಎಲ್ಲಿ ಎಂದು ಕೇಳಿದಾಗ ರೋಶನಾರಾ ಬೇಗಮಳು "ನೀನು ಮೂರ್ಛಾವಸ್ಥೆಯಲ್ಲಿದ್ದಾಗ ಒಂದು ದಿನ ಆ ಉಂಗುರ ನಿನ್ನ ಬೆರಳಿನಿಂದ ಕಳಚಿ ಬಿತ್ತು. ನಾನದನ್ನು ಜತನವಾಗಿಟ್ಟಿದ್ದೇನೆ," ಎಂದು ಹೇಳಿ ಅದನ್ನು ತಂದು ಕೊಟ್ಟಳು. ಔರಂಗಜೇಬ ಆಗ ಏನೂ ಮಾತಾಡದಿದ್ದರೂ ಗುಣವಾದ ಬಳಿಕ ಈ ಪ್ರಕರಣದ ಶೋಧ ಮಾಡಲು ಮನದಲ್ಲೆ ನಿರ್ಧರಿಸಿದ.

ಕೆಲ ದಿನಗಳ ನಂತರ ಪ್ರಕೃತಿ ತುಸು ಸುಧಾರಿಸಲು ಆತ ರಾಜಾ ಜಯಸಿಂಹ, ಜಾಫರಖಾನ ಮತ್ತು ಮುಹಮ್ಮದ ಅಮೀನರನ್ನು ತನ್ನ ಬಳಿಗೆ ಕರೆಸಿಕೊಂಡ. ಔರಂಗಜೇಬ ಸತ್ತಿದ್ದಾನೆಂದು ಸುದ್ದಿ ಹಬ್ಬಿತ್ತಾದ್ದರಿಂದ ತಾನು ಬದುಕಿರುವುದನ್ನು ಅವನು ಖಾತ್ರಿಮಾಡಿಕೊಡಬೇಕಾಗಿತ್ತು. ದಿನಗಳೆದಂತೆ ಔರಂಗಜೇಬನ ಪ್ರಕೃತಿ ಸುಧಾರಿಸಿದರೂ ಕರಬೂಜ ತಿಂದಿದ್ದರಿಂದ ಅವನ ನಾಲಿಗೆಗೆ ಬಡಿದ ಪಾರ್ಶ್ವವಾಯುವಿಕಾರ ಬಹುದಿನಗಳ ವರೆಗೂ ಕಡಿಮೆಯಾಗಲಿಲ್ಲ. ಅವನಿಗೆ

ಸ್ಪಷ್ಟವಾಗಿ ಮಾತಾಡಲು ಬರುತ್ತಿರಲಿಲ್ಲ.

ಪೂರ್ಣ ಗುಣವಾದ ಬಳಿಕ ಆತ ನಪುಂಸಕ ಪ್ರಮುಖರಿಂದ ತನ್ನಬೇನೆಯ ಕಾಲದಲ್ಲಿ ರೋಶನಾರಾ ಬೇಗಮಳು ನಡೆಸಿದ ಕುತಂತ್ರಗಳ ವಿವರಗಳನ್ನೆಲ್ಲ ಕೇಳಿಕೊಂಡ. ರೋಶನಾರಾ ಸುಲ್ತಾನ ಆಜಮನ ಪರವಾಗಿ ಸೇನಾಪತಿ ಮೊದಲಾದವರಿಗೆ ಪತ್ರ ಬರೆದದ್ದನ್ನೂ ಅವಕ್ಕೆ ರಾಜಮುದ್ರೆಯೊತ್ತಿದ್ದನ್ನೂ ಕೇಳಿ ಅವನಿಗೆ ವಿಪರೀತ ಕೋಪ ಬಂತು. ಸುಲ್ತಾನ ಮುಅಜ್ಜಮನ ತಾಯಿಯನ್ನು ರೋಶನಾರಾ ಹೀನವಾಗಿ ನಡೆಸಿಕೊಂಡಿದ್ದನ್ನೂ ಅವಳು ಈ ಅಪಮಾನವನ್ನು ಸಹಿಸಿಕೊಂಡಿದ್ದನ್ನೂ ಕೇಳಿ ಆತ ತುಂಬ ವ್ಯಥೆಪಟ್ಟುಕೊಂಡ. ಆ ಬೇಗಮಳ ಬಗ್ಗೆ ಅವನಲ್ಲಿ ಗೌರವ ಹೆಚ್ಚಿ ಅವಳಿಗೆ "ನವಾಬ ಬಾಯೀಜಿ" ಎಂಬ ಬಿರುದನ್ನು ದಯಪಾಲಿಸಿದ. ರೋಶನಾರಾಳ ಮೇಲಿನ ಅವನ ಅಸಂತುಷ್ಟಿ ಹೆಚ್ಚಿತು.

ಔರಂಗಜೇಬನಿಗೆ ಗುಣವಾದರೂ ಆತನಿನ್ನೂ ತುಂಬ ಅಶಕ್ತನಾಗಿಯೆ ಇದ್ದ. ಆತ ಆರೋಗ್ಯ ಲಾಭಕ್ಕಾಗಿ ಹವಾ ಬದಲಾವಣೆ ಮಾಡಬೇಕೆಂದು ಹಕೀಮರು ಸಲಹೆಯಿತ್ತರು. ರೋಶನಾರಾಳೂ ಅದೇ ರೀತಿ ಸಲಹೆಯಿತ್ತಳು. ಬಾದಶಾಹನ ಇಂಥ ಯಾತ್ರೆಯ ಕಾಲದಲ್ಲಿ ಅವನ ಸೈನ್ಯ ಹಾಗೂ ಬೇಗಮರೇ ಇತ್ಯಾದಿಯಾಗಿ ಎಲ್ಲರೂ ಸಂಗಡ ಹೊರಡುತ್ತಿದ್ದರು. ಹೀಗೆ ಎಲ್ಲರೂ ಹೋದ ಬಳಿಕ ಕೆಲ ದಿನವಾದರೂ ಕಠೋರ ನಿರ್ಬಂಧಗಳಿಂದ ಮುಕ್ತಳಾಗಿರಬಹುದು, ಮನಬಂದಂತೆ ಮಾಡಬಹುದು, ತನ್ನ ಇಚ್ಛೆಗಳನ್ನೆಲ್ಲ ಪೂರೈಸಿಕೊಳ್ಳಬಹುದು ಎಂದು ರೋಶನಾರಾ ಭಾವಿಸಿದ್ದಳು.

ಕಾಶ್ಮೀರಕ್ಕೆ ಹೋಗುವುದನ್ನು ನಿಶ್ಚಯಿಸಿದ ಬಳಿಕ ಔರಂಗಜೇಬನು ತನ್ನ ನಿಷ್ಠಾವಂತ ಸರದಾರ ಹೋಶದಾರಖಾನನನ್ನು ಆಗ್ರಾದ ಗವ-

# ಗ್ಲಾಸ್ ಪುಡಿಯಾಗಿ ಗಾಯವಾಯಿತೆಂದು ನಿಮ್ಮ ಪಿಕ್‌ನಿಕಿಗೆ ತೊಂದರೆಯಾಗ ಬೇಕಾಗಿಲ್ಲ, ಕೂಡಲೇ



## ಬರ್ನಾಲ್ ಹಚ್ಚಿರಿ

ವಿನೋದವನ್ನು ಸಂಪೂರ್ಣವಾಗಿ ಭೋಗಿಸಿರಿ. ಬರ್ನಾಲ್ ಕೂಡಲೇ ಆರಾಮವನ್ನೀಯುತ್ತದಲ್ಲದೆ, ಅದು ಶೀಘ್ರ ಗುಣ ಪಡಿಸುತ್ತದೆ. ಕಡಿತ, ಸುಟ್ಟಗಾಯ, ಕೀಟಗಳ ಚುಚ್ಚುವಿಕೆ ಮತ್ತು ಜಜ್ಜಿದ ಗಾಯಗಳಿಗೆ ಬರ್ನಾಲ್ ಆದರ್ಶವಾದ ಎಂಟಿಸೆಪ್ಟಿಕ್ ಮುಲಾಮು ಆಗಿರುತ್ತದೆ. ಇನ್ನು ಮುಂದೆ ನೀವು ಪಿಕ್‌ನಿಕ್ ಅಥವಾ ಪ್ರಯಾಣವನ್ನು ಮಾಡುವಾಗ ಈ ಬರ್ನಾಲಿನ ಟ್ಯೂಬನ್ನು ಸದಾ ಇಟ್ಟುಕೊಳ್ಳಿರಿ—ಇದು ತುಂಬಾ ಉಪಯುಕ್ತವಾದ ತಯಾರಿಕೆಯಾಗಿದೆ.




# ಬರ್ನಾಲ್

ಬರ್ನಾಲ್ - ಆದರ್ಶವಾದ ಎಂಟಿಸೆಪ್ಟಿಕ್ ಮುಲಾಮು — 20 ವರ್ಷಗಳಿಗಿಂತ ಹೆಚ್ಚು ಕಾಲದಿಂದ ಪ್ರಖ್ಯಾತವಾಗಿರುತ್ತದೆ.

ಫಿನೊಕ್ಸ್ ಮತ್ತು ಗ್ಲೈಮಿಕ್ಸ್ ತಯಾರಕರಾದ *Boots* ಬೂಟ್ಸ್‌ರವರ ಒಂದು ಉತ್ಕೃಷ್ಟವಾದ ತಯಾರಿಕೆ.

**ಉಚಿತ** ನೀವು ಕೊಳ್ಳುವ ಪ್ರತಿಯೊಂದು ಬರ್ನಾಲ್ ಟ್ಯೂಬಿನೊಡನೆ ಸುಂದರವಾದ ಒಂದು ಫೂಟ್‌ರೂಲನ್ನು ಉಚಿತವಾಗಿ ಕೊಡಲಾಗುವುದು.

NATIONAL BB-161

ರ್ಗರನನ್ನಾಗಿ ನಿಯಮಿಸಿದ. ತನ್ನ ಸಂಗಡ ಹೊರಡುವ ಸೈನ್ಯಕ್ಕೆ ಮುರ್ತಜಾಖಾನನನ್ನು ಸೇನಾಪತಿಯನ್ನಾಗಿ ಮಾಡಿದ. ಶಾಹಜಹಾನನ ಮೇಲೆ ಬಲವಾದ ಕಾವಲನ್ನಿಡಬೇಕೆಂದು ಇತಬಾರಖಾನನಿಗೆ ಪುನಃ ಎಚ್ಚರಿಕೆ ಕಳಿಸಿದ.

೧೬೬೨ ಡಿಸೆಂಬರ ೬ ರಂದು ಔರಂಗಜೇಬ ದಿಲ್ಲಿಯಿಂದ ಹೊರಟ. ಔರಂಗಜೇಬನ ಈ ಯಾತ್ರೆ, ಕಾಶ್ಮೀರಯಾತ್ರೆಯಾಗಿರದೆ ಫಾರಸಿ ಶಾಹನ ವಶದಲ್ಲಿದ್ದ ಕಂಧಾರಕೋಟೆಯ ಮೇಲಿನ ಆಕ್ರಮಣ ಯಾತ್ರೆ ಎಂದೊಂದು ವದಂತಿ ಆಗ ಹಬ್ಬಿತ್ತು. ಆದರೆ ಇದು ತೀರ ಸುಳ್ಳಾಗಿತ್ತು. ದಿಲ್ಲಿಯಿಂದ ಹೊರಟ ದಿನ ರಾತ್ರಿ ಔರಂಗಜೇಬನು ಐದು ಮೈಲು ದೂರದಲ್ಲಿ, ತನ್ನ ವಿಹಾರಕ್ಕಾಗಿ ಶಾಹಜಹಾನ ಕಟ್ಟಿಸಿದ್ದ ಶಾಲಿಮಾರ್ ಉಪವನದಲ್ಲಿ ತಂಗಿದ. ಇಲ್ಲಿ ಆತ ಆರು ದಿನಗಳ ವರೆಗೆ ಉಳಿದ, ಯಾತ್ರೆಯ ಸಿದ್ಧತೆಯನ್ನೆಲ್ಲ ತನ್ನ ಪರಿವಾರದವರು ಸರಿಯಾಗಿ ಮಾಡಿಕೊಳ್ಳಲಿ ಎಂದು.

ಸೈನ್ಯವು ಬಯಲಿನಲ್ಲಿ ಶಿಬಿರ ಹೂಡಿದಾಗ ರಾತ್ರಿ ಒಂಭತ್ತು ಗಂಟೆಗೆ ಕಹಳೆ ಊದುವುದು ಮೊಗಲರ ಪರಿಪಾಠವಾಗಿತ್ತು. ಈ ಕಹಳೆಯ ಧ್ವನಿ ಮರುದಿನ ಪ್ರಾತಃಕಾಲ ಸೈನ್ಯ ತಳ ಕೀಳುವುದಿಲ್ಲ ಎಂಬುದರ ಸಂಕೇತವಾಗಿತ್ತು. ಆರನೆಯ ದಿನ ರಾತ್ರಿ ಕಹಳೆ ಊದಲಿಲ್ಲ. ಡೇರೆ ಮೊದಲಾದವುಗಳನ್ನು ಹೊತ್ತೊಯ್ಯುವ ದಲ ಮುಂದಕ್ಕೆ ಪ್ರಯಾಣ ಮಾಡಿತು. ಮೊಗಲ ಬಾದಶಾಹರು ಇಂಥ ಪ್ರಸಂಗಗಳಲ್ಲಿ ಎರಡು ಡೇರೆಯ ಗಂಟುಗಳನ್ನು ಸಂಗಡ ಒಯ್ಯುತ್ತಿದ್ದರು. ಒಂದೆಡೆ ಒಂದು ಡೇರೆ ಹಾಕಿದಾಗ ಇನ್ನೊಂದು ಡೇರೆಯನ್ನು ಮುಂದಿನ ವಸತಿ ಸ್ಥಾನಕ್ಕೆ ಕಳಿಸುತ್ತಿದ್ದರು. ಬಾದಶಾಹ ಮತ್ತು ಅವನ ಸೈನ್ಯ-ಪರಿವಾರಗಳಿಗಾಗಿ ಬೇಕಾಗುವ ಡೇರೆಗಳನ್ನು ಹೊತ್ತೊಯ್ಯಲು ಎರಡು ನೂರು ಒಂಟೆ ಮತ್ತು ಐವತ್ತು ಆನೆಗಳು ಇರುತ್ತಿದ್ದವು.

ಏಳನೆಯ ದಿನ ನಸುಕಿನ ಮೂರು ಗಂಟೆಗೆ ಶಿಬಿರ ತಳ ಕಿತ್ತಿತು. ಎಲ್ಲಕ್ಕೂ ಮುಂದೆ ತೋಫುಖಾನೆ. ಅದರ ಜೊತೆಯಲ್ಲಿ ಒಂದು ವಿಶಾಲ ಚಕ್ಕಡಿಯ ಮೇಲೆ ಸುಂದರವಾದ ಒಂದು ದೋಣಿ ಇತ್ತು. ಹಾದಿಯಲ್ಲಿ ಎಲ್ಲಾದರೂ ನದಿ ಹತ್ತಿದರೆ ಬಾದಶಾಹನಿಗೆ ಅದನ್ನು ದಾಟಲು ಈ ದೋಣಿಯನ್ನು ಉಪಯೋಗಿಸುತ್ತಿದ್ದರು. ತೋಫುಖಾನೆಯ ಹಿಂದಿಂದೆ ಸಾಮಾನುಗಳನ್ನು ಹೊತ್ತೊಯ್ಯುವವರಿದ್ದರು. ಬೆಳಗಾದಾಗ ಶಿಬಿರದಲ್ಲಿ ಕುದುರೆ ಸವಾರರು ಮತ್ತು ಕಾಲ್ದಳದವರು ಮಾತ್ರ ಇದ್ದರು. ಸಾಮಾನುಗಳ ಜೊತೆಯಲ್ಲಿ ಎರಡು ನೂರು ಒಂಟೆಗಳು ಬೆಳ್ಳಿಯ ರೂಪಾಯಿಗಳ ಚೀಲಗಳನ್ನು ಹೊತ್ತುಕೊಂಡು ನಡೆದವು. ಪ್ರತಿ ಒಂಟೆಯ ಮೇಲೆ ೪೮೦ ಪೌಂಡು ಬೆಳ್ಳಿಯ ರೂಪಾಯಿಗಳಿದ್ದವು. ನೂರು ಒಂಟೆಗಳ ಮೇಲೆ ಪ್ರತಿಯೊಂದರ ಮೇಲೂ ಇಷ್ಟೇ ತೂಕದ ಚಿನ್ನದ ಮೊಹರುಗಳನ್ನು ಹೇರಿ ಕಳಿಸಿದರು. ೧೩೦ ಒಂಟೆಗಳ ಮೇಲೆ ಹುಲಿ-ಸಿಂಹ ಮೊದಲಾದ ಕಾಡುಮೃಗಗಳ ಬೇಟೆಗೆ ಬೇಕಾದ ಸಾಮಗ್ರಿಗಳಿದ್ದವು.

ಬಾದಶಾಹ ಪ್ರಯಾಣಕ್ಕೆ ಸಿದ್ಧನಾಗಿ ಡೇರೆಯಿಂದ ಹೊರಬಂದೊಡನೆ ರಾಜಕುಮಾರರು, ಸರದಾರರು, ಸೇನಾಪತಿಗಳು ಅವನನ್ನು ಸುತ್ತುಗಟ್ಟಿ ನಿಂತು ಗೌರವ ರಕ್ಷೆಯನ್ನರ್ಪಿಸುತ್ತಿದ್ದರು. ಅದೇ ಸಮಯದಲ್ಲಿ ಜನರು ಅವನೆದುರು ತಮ್ಮ ಸುಖದುಃಖಗಳನ್ನು ತೋಡಿಕೊಳುತ್ತಿದ್ದರು. ಅವರೆಲ್ಲರಿಗೂ ಬಾದಶಾಹ ಸಮರ್ಪಕ ಉತ್ತರವನ್ನೀಯುತ್ತಿದ್ದ. ಬಾದಶಾಹನೊಂದಿಗೆ ಪರಿವಾರ ಶಿಬಿರದ ಅಂಚಿನ ವರೆಗೂ ಹೋಗಿ ಆ ಮೇಲೆ ತಿರುಗಿ ಸ್ವಸ್ಥಾನಕ್ಕೆ ಬರುತ್ತಿತ್ತು. ಬಾದಶಾಹ ತನ್ನ ಬೇಟೆಗಾರರ ಬಳಿಗೆ ಹೋಗಿ ತಾನು ಅಂದು ಬೇಟೆಯಾಡಬಯಸುತ್ತೇನೆ ಅಥವಾ ಇಲ್ಲವೆಂದು ತಿಳಿಸುತ್ತಿದ್ದ. ಆತ ಬೇಟೆಗೆ ಹೊರಟರೆ ಅವನೊಂದಿಗೆ ಅಂಗರಕ್ಷಕರು ಮತ್ತು ಕಾಲ್ದ-

ಳದವರು ಮಾತ್ರ ಇರುತ್ತಿದ್ದರು. ಉಳಿದವರೆಲ್ಲ ಪ್ರಯಾಣವನ್ನು ಸಾವಕಾಶವಾಗಿ ಮುಂದುವರಿಸುತ್ತಿದ್ದರು. ಬಾದಶಾಹ ಬೇಟೆಗೆ ಹೋಗದೆ ಪ್ರಯಾಣ ಮುಂಬರಿಸಿದರೆ ಮುಂದಿನ ಶಿಬಿರವನ್ನು ಪ್ರವೇಶಿಸುವ ವರೆಗೂ ವಾದ್ಯಗಳು ಮೊಳಗುತ್ತಿದ್ದವು. ಆ ಮೇಲೆ ತೋಪುಗಳು ಹಾರಿಸಲ್ಪಡುತ್ತಿದ್ದವು. ಬಾದಶಾಹ ಸುಖರೂಪವಾಗಿ ಬಂದು ತಲುಪಿದ್ದಕ್ಕಾಗಿ ಬೇಗಮ ಜನರೂ ಇತರ ಮಹಿಳೆಯರೂ ದೇವರಿಗೆ ಧನ್ಯವಾದಗಳನ್ನರ್ಪಿಸುತ್ತಿದ್ದರು.

ಇಲ್ಲಿ ಒಂದು ಮಾತು ಹೇಳಬೇಕು. ಬೇಗಮ ಜನರೂ ಇತರ ಸ್ತ್ರೀಯರೂ ಎಲ್ಲರಿಗಿಂತ ಹಿಂದಿನಿಂದ ಹೊರಟರೂ ಮುಂದಿನ ಶಿಬಿರವನ್ನು ಎಲ್ಲರಿಗಿಂತ ಮೊದಲು ತಲುಪುತ್ತಿದ್ದರು. ಅವರು ಒಳಹಾದಿಯಿಂದ ಪ್ರಯಾಣ ಮಾಡುತ್ತಿದ್ದುದೇ ಇದಕ್ಕೆ ಕಾರಣವಾಗಿತ್ತು. ರೋಶನಾರಾ ಬೇಗಮ್ ಈ ಪ್ರಯಾಣ ಕಾಲದಲ್ಲಿ ತನ್ನ ಪಲ್ಲಕ್ಕಿಯಲ್ಲಿ ತನ್ನ ಬಾಂದಿಯನ್ನು ಕೂಡ್ರಿಸಿಕೊಳ್ಳದೆ ಬಾಂದಿಯ ವೇಷ ಧರಿಸಿದ ಒಬ್ಬ ತರುಣನನ್ನು ಕೂಡ್ರಿಸಿಕೊಂಡಿದ್ದಳು ಎಂದು ನನಗೆ ಗೊತ್ತಿತ್ತು.

ಕುತೂಹಲದಿಂದ ನಾನೂ ಕಾಶ್ಮೀರ ಯಾತ್ರೆಗೆ ಹೊರಟಿದ್ದೆ. ಆದರೆ ಮೂರೇಮೂರು ದಿನಗಳ ನಂತರ ದಿಲ್ಲಿಗೆ ತಿರುಗಿ ಬಂದೆ. ಯಾವ ನೌಕರಿಯೂ ಇಲ್ಲದಿರುವಾಗ ಕಾಶ್ಮೀರಕ್ಕೆ ಹೋಗುವುದು ಸರಿಯಲ್ಲ ಎಂದು ತಿಳಿದೆ. ಸಂಪನ್ನ ದೇಶವಾದ ಬಂಗಾಲಕ್ಕೆ ನಾನು ಹೋಗಬಯಸಿದ್ದೆ. ಅಲ್ಲಿ ಜೀವನ ವೆಚ್ಚ ಅಗ್ಗವಾಗಿಯೂ ಇತ್ತು. ಯುರೋಪಿಯನ್ನರು ಕೂಡ ಅಲ್ಲಿ ಸುಖದಿಂದಲೇ ಇದ್ದರು.

ದಿಲ್ಲಿಯಿಂದ ಆಗ್ರಾ, ಅಲ್ಲಿಂದ ಮುಂದೆ ಹನ್ನೆರಡು ದಿನಗಳ ಪ್ರಯಾಣದ ನಂತರ ಅಲಹಾಬಾದನ್ನು ತಲುಪಿದೆ. ಈ ನಗರದ ಪೂರ್ವ ಭಾಗದಲ್ಲಿ ಶಾಹಂಶಾಹ ಅಕಬರ ಕೆಂಪು ಕಲ್ಲಿನಿಂದ ಕಟ್ಟಿಸಿದ ಒಂದು ಕೋಟೆಯಿದೆ. ಈ ಕೋಟೆ ಬಲು ಸುಂದರವೂ ಭದ್ರವೂ ಆಗಿದೆ. ಕೋಟೆಯ ಒಲ ಬದಿಯಲ್ಲಿ ಗಂಗಾನದಿ ಉತ್ತರದಿಂದ ದಕ್ಷಿಣಕ್ಕೆ ಹರಿಯುತ್ತಿದೆ. ಯಮುನಾ ನದಿ ಎಡಗಡೆಗೆ ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತಿದೆ. ಎರಡೂ ನದಿಗಳು ಕೋಟೆಯ ಹೆಬ್ಬಾಗಿಲ ಕೆಳಗಡೆ ಸರಿಯಾಗಿ ಕೂಡಿವೆ. ಇದಲ್ಲದೆ ಯಾವ ಕಲ್ಲುಬಂಡೆಗಳ ದಿನ್ನೆಯ ಮೇಲೆ ಈ ಕೋಟೆಯನ್ನು ಕಟ್ಟಿವಾರೆಯೊ ಆ ದಿನ್ನೆಯಿಂದ ಮೂರನೆಯದೊಂದು ಸಣ್ಣ ನದಿ ಉಗಮವಾಗಿ ಹರಿಯುತ್ತಿದೆ. ಇದರ ನೀರು ನೀಲಿ ಬಣ್ಣದ್ದಿದ್ದು ಇದನ್ನು ತೀರ್ಥವೆಂದು ಕರೆಯುತ್ತಾರೆ. ಗಂಗೆ ಯಮುನೆಗಳ ನಡುವೆ ಈ ನದಿ ನಾಲಿಗೆಯಂತೆ ನೆಟ್ಟಗೆ ಹರಿದು ಮುಂದೆ ಅವನ್ನು ಕೂಡಿಕೊಳ್ಳುತ್ತದೆ ಗಂಗೆ ಯಮುನೆಯರು ಈ ನದಿಯ ನೀರನ್ನು ತುಂಬ ಗೌರವದಿಂದ ಕಾಣುವಂತೆ ತೋರುತ್ತದೆ. ಏಕೆಂದರೆ ಈ ನದಿಯ ಉಗಮ ತುಂಬ ಪವಿತ್ರವಾದದ್ದು. ಬಹುದೂರದ ವರೆಗೂ ಈ ನದಿಯ ನೀರನ್ನು ತಮ್ಮ ನೀರಿನೊಂದಿಗೆ ಗಂಗೆ ಯಮುನೆಯರು ಕೂಡಿಸಿಕೊಳ್ಳುವುದಿಲ್ಲ. ಗಂಗೆ ಯಮುನೆಯರ ನೀರಿನ ನಡುವೆ ಈ ನದಿಯ ನೀಲಿ ನೀರು ಬಹು ಸ್ಪಷ್ಟವಾಗಿ ಪ್ರತ್ಯೇಕವಾಗಿ ಕಾಣಿಸುತ್ತದೆ.

ನಾನು ಮತ್ತು ನನ್ನ ಜೊತೆಗಾರರಾದ ಇಬ್ಬರು ಪೋರ್ತುಗೀಸ್ ಪಾದ್ರಿಗಳು ಅಲಹಾಬಾದಿನಲ್ಲಿ ಮೂರು ದಿನ ಉಳಿದೆವು. ನಾಲ್ಕನೆಯ ದಿನ ಕಾಶಿಗೆ ಹೊರಟೆವು. ಹಾದಿ ಬಯಲಿನಲ್ಲಿ ಸಾಗಿತ್ತು. ಎಂಟು ದಿನಗಳ ನಂತರ ಕಾಶಿಯನ್ನು ತಲುಪಿ ಅಲ್ಲಿ ಕೆಲ ದಿನ ತಂಗಿದೆವು. ಕಾಶಿ ಸಣ್ಣ ನಗರವಾದರೂ ಬಹು ಪ್ರಾಚೀನವಾದದ್ದು. ಹಿಂದುಗಳಿಗೆ ಬಹು ಪವಿತ್ರವಾದದ್ದು. ಇಲ್ಲಿಯ ಒಂದು ಮಂದಿರದಲ್ಲಿ ಅತ್ಯಂತ ಪ್ರಾಚೀನ ಮೂರ್ತಿಯೊಂದಿದೆ. ನಾನಿಲ್ಲಿಗೆ ಬಂದ ಕೆಲ ವರ್ಷಗಳ ನಂತರ ಈ ಮಂದಿರವನ್ನು ನಾಶ ಮಾಡಲು ಔರಂಗಜೇಬ ಅಪ್ಪಣೆ ಮಾಡಿದ. ಆಗ ಆತ ಹಿಂದುಸ್ಥಾನದಲ್ಲೆಲ್ಲ ಮಂದಿರಗಳನ್ನು ಕೆಡವಿಸತೊಡಗಿದ್ದ.

ಕಾಶಿಯಲ್ಲಿ ಚಿನ್ನ ಬೆಳ್ಳಿಗಳ ಜರಿ ಕೆಲಸ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿತ್ತು. ಇಲ್ಲಿಂದಲೇ ಜರಿಯ ಬಟ್ಟೆಗಳು ಮೊಗಲ ಸಾಮ್ರಾಜ್ಯದಲ್ಲಿ ಎಲ್ಲೆಡೆಗೆ ಮತ್ತು ಜಗತ್ತಿನ ಅನೇಕ ಭಾಗಗಳಿಗೆ ಹೋಗುತ್ತವೆ. ಇಲ್ಲಿ ನಾನು ಕಾಯದೆಯಂತೆ ಅಲಹಾಬಾದಿನ ಪಾಸ್‌ಪೋರ್ಟ್ ತೋರಿಸಿ ಗಂಗಾ ನದಿಯನ್ನು ದಾಟಿ ನಾಲ್ಕು ದಿನಗಳಲ್ಲಿ ಪಾಟ್ನಾವನ್ನು ತಲುಪಿದೆ. ಇದು ದೊಡ್ಡ ನಗರವಾಗಿತ್ತು. ಇಲ್ಲಿ ದೊಡ್ಡ ದೊಡ್ಡ ಪೇಟೆಗಳಿದ್ದು ಹೆಚ್ಚಿನ ಮನೆಗಳು ಮಾಳಿಗೆಯವಾಗಿದ್ದವು. ಇಲ್ಲಿ ಶ್ರೇಷ್ಠ ಮಲಮಲ್ ತಯಾರಾಗುತ್ತಿದ್ದುದರಿಂದ ಇಲ್ಲಿ ಅಸಂಖ್ಯ ವ್ಯಾಪಾರಿಗಳಿದ್ದರು. ಪಾಟ್ನಾದಲ್ಲಿ ಇಂಗ್ಲೀಷರದೊಂದು ಮತ್ತು ಹಾಲಂಡಿನವರದೊಂದು ಹೀಗೆ ಎರಡು ಕಾರಖಾನೆಗಳಿದ್ದವು. ಇವುಗಳಲ್ಲಿ ನೂಲಿನ ಮತ್ತು ರೇಶಿಮೆ ಬಟ್ಟೆಗಳು ತಯಾರಾಗಿ ಬಂಗಾಲಕ್ಕೆ ಕಳಿಸಲ್ಪಡುತ್ತಿದ್ದವು. ಅಲ್ಲಿಂದ ಹಡಗುಗಳಲ್ಲಿ ಅವನ್ನು ಯುರೋಪಿನ ಬೇರೆ ಬೇರೆ ದೇಶಗಳಿಗೆ ಕಳಿಸುತ್ತಿದ್ದರು. ಇಲ್ಲಿ ಬಾಟ್ಲಿಗಳೂ ತಯಾರಾಗುತ್ತಿದ್ದವು. ಗ್ಲಾಸಿಗಿಂತಲೂ ಗಟ್ಟಿಯಾದ, ಕಾಗದಕ್ಕಿಂತಲೂ ಹಗುರಾದ ಮತ್ತು ಸುವಾಸಿತವಾದ ಮಣ್ಣಿನ ಪಾತ್ರೆಗಳು ತಯಾರಾಗುತ್ತಿದ್ದವು. ದುರ್ಲಭ ವಸ್ತುಗಳ ಮಾಲಿಕೆಯಲ್ಲಿದ್ದ ಈ ಪಾತ್ರೆಗಳನ್ನು ಜಗತ್ತಿನ ಸಕಲ ಭಾಗಗಳಿಗೆ ಕಳಿಸಿಕೊಡುತ್ತಿದ್ದರು.

ದಕ್ಷಿಣದಲ್ಲಿ ಶಿವಾಜಿಯ ಪ್ರಾಬಲ್ಯ ಹೆಚ್ಚುತ್ತಿ-

ರುವುದನ್ನು ಕಂಡ ಔರಂಗಜೇಬ ಬಲು ಗಾಬರಿಯಾದ. ಆತ ತನ್ನ ವಿಶ್ವಾಸದ ಸೇನಾಪತಿ ರಾಜಾ ಜಯಸಿಂಹನನ್ನು ಕರೆಸಿ ದೊಡ್ಡ ಸೈನ್ಯದೊಂದಿಗೆ ಹೋಗಿ ಶಿವಾಜಿಯನ್ನು ಹಣ್ಣು ಮಾಡಲು ತಿಳಿಸಿದ. ಶಿವಾಜಿಯನ್ನು ಬಂಧಿಸಿ ತರುವೆನೆಂದು ಜಯಸಿಂಹ ಹೊರಟ.

ಆಗ ನಾನು ಬಂಗಾಲದಿಂದ ತಿರುಗಿ ದಿಲ್ಲಿಗೆ ಬಂದಿದ್ದೆ. ರಾಜಾ ಜಯಸಿಂಹನ ಸೈನ್ಯದಲ್ಲಿ ನಾನು ತೋಫುಗಾರನಾಗಿ ಕೆಲಸಕ್ಕೆ ಸೇರಿಕೊಂಡೆ. ಜಯಸಿಂಹನ ದಕ್ಷಿಣದ ದಂಡಯಾತ್ರೆಯಲ್ಲಿ ಅವನೊಂದಿಗೆ ಹೋದೆ. ೧೬೬೪ ರಲ್ಲಿ ನಾವು ದಿಲ್ಲಿಯಿಂದ ಹೊರಟೆವು.

ರಾಜಾ ಜಯಸಿಂಹನು ಬರಹಾನಪುರದಲ್ಲಿ ಶಿಬಿರ ಹೂಡಿ ದಿಲ್ಲಿಯಿಂದ ಬರುವ ತನ್ನ ಸೈನ್ಯದ ಹಾದಿಯನ್ನು ಕಾಯುತ್ತಿದ್ದಾಗ ಅವನಿಗೆ ಶಾಹಜಹಾನನ ಮರಣದ ವಾರ್ತೆ ತಲುಪಿತು. ಶಾಹಜಹಾನನ ಬೇಗಮ್ ಔರಂಗಾಬಾದಿಯ ಬಳಿ ಆಫತಾಬ ಮತ್ತು ಮೆಹತಾಬ ಎಂಬ ಇಬ್ಬರು ಸುಂದರ ದಾಸಿಯರಿದ್ದರು. ಶಾಹಜಹಾನ ಅವರ ಮೇಲೆ ಮೋಹಗೊಂಡುದನ್ನು ಗಮನಿಸಿದ ಔರಂಗಾಬಾದಿ ಬೇಗಮ ಅವರನ್ನು ಅವನ ಸೇವೆಗೆ ಒಪ್ಪಿಸಿದ್ದಳು.

ಒಂದು ದಿನ ಶಾಹಜಹಾನ ಕನ್ನಡಿಯ ಎದುರು ನಿಂತು ಮೀಸೆ ಹುರಿ ಮಾಡುತ್ತಿದ್ದಾಗ ಈ ಇಬ್ಬರೂ ದಾಸಿಯರು ಅವನ ಹಿಂದೆ ನಿಂತಿದ್ದರು. ಅವರಲ್ಲೊಬ್ಬಳು ಮುದುಕನನ್ನು ಚೇಷ್ಟೆ ಮಾಡುವ ಸಂಜ್ಞೆಯೊಂದನ್ನು ಇನ್ನೊಬ್ಬಳಿಗೆ ಮಾಡಿದಳು. ಶಾಹಜಹಾನನ ಕಣ್ಣಿಗೆ ಇದು ಬೀಳಲು ಆತ ತುಂಬಾ ಮನಸ್ಸಿಗೆ ಹಚ್ಚಿಕೊಂಡ. ತಾರುಣ್ಯ ಪ್ರಾಪ್ತಿಗಾಗಿ ಆತ ನಾನಾ ಬಗೆಯ

ಔಷಧಿಗಳನ್ನು ಸೇವಿಸತೊಡಗಿದ. ಇದರಿಂದ ಆತನ ಮೂತ್ರಪಿಂಡ ಕೆಟ್ಟು ಮೂತ್ರ ಬರುವುದೇ ನಿಂತುಹೋಯಿತು. ಬಾದಶಾಹ ತುಂಬ ಮುದುಕನಾಗಿದ್ದು ಬಲು ಅಶಕ್ತನಾಗಿದ್ದ. ಈ ಸಮಯದಲ್ಲಿ ಆತನಿಗೆ ಅವನ ಬಾಲ್ಯದಲ್ಲಿ ಫಕೀರನೊಬ್ಬ ಹೇಳಿದ್ದ ಮಾತು ನೆನಪಿಗೆ ಬಂತು. ಮರಣ ಸನ್ನಿಹಿತವಾದಾಗ ಕೈಲಿ ಹಿಡಿದ ಸೇಬು ಹಣ್ಣಿನ ವಾಸನೆ ತಿಳಿಯವುದಿಲ್ಲವೆಂದು ಆ ಫಕೀರ ಹೇಳಿದ್ದ. ಸೇಬು ಹಣ್ಣಿನ ವಾಸನೆ ತನಗೆ ತಿಳಿಯದಂತಾಗಲು ಶಾಹಜಹಾನ ಬದುಕುವ ಆಶೆಯನ್ನು ಬಿಟ್ಟ. ಮುಂದೆ ಕೆಲವೇ ದಿನಗಳಲ್ಲಿ ಆತ ಸತ್ತ.

ಇತಬಾರ ಖಾನನಿಂದ ಈ ಸುದ್ದಿ ತಿಳಿದಾಗ ಔರಂಗಜೇಬನಿಗೆ ಶಾಹಜಹಾನ ಹಿಂದೊಮ್ಮೆ ಹೂಡಿದ್ದ ಗತ್ತು ನೆನಪಿಗೆ ಬಂತು. ಆಗ ಶಾಹಜಹಾನನಿನ್ನೂ ರಾಜಕುಮಾರ ಖುರ್ರಮನಾಗಿದ್ದ. ಖುರ್ರಮ ಸತ್ತ ಎಂದು ಸುಳ್ಳೇ ಸುದ್ದಿ ಹಬ್ಬಿಸಿ ಆತ ಸಿಂಹಾಸನವನ್ನು ಆಕ್ರಮಿಸಿಕೊಂಡಿದ್ದ. ಈಗಲೂ ಜೇಲಿನಿಂದ ಪಾರಾಗಿ ರಾಜ್ಯವನ್ನು ಗೆದ್ದುಕೊಳ್ಳಲು ಶಾಹಜಹಾನ ಅಂಥದೇ ಗತ್ತು ಹೂಡಿರುವ ಸಂಭವವಿತ್ತು. ಆದ್ದರಿಂದ ಔರಂಗಜೇಬ ತನ್ನೊಬ್ಬ ವಿಶ್ವಾಸಿಕ ಮನುಷ್ಯನನ್ನು ಆಗ್ರಾಕ್ಕೆ ಕಳಿಸಿದ. ಶಾಹಜಹಾನನ ಪಾದಗಳ ಮೇಲೆ ಕಾದುಕೆಂಪಗಾದ ಸರಳನ್ನು ಇಡಬೇಕು, ದೇಹವೇನಾದರೂ ಅದರಿಂದ ಅಲುಗಾಡದಿದ್ದಲ್ಲಿ ಆ ಸರಳನ್ನು ತಲೆಯಲ್ಲಿ ಚುಚ್ಚಿ ಕುತ್ತಿಗೆಯ ವರೆಗೆ ದೂಡಿ ಶಾಹಜಹಾನ ಸತ್ತಿರುವುದನ್ನು ಖಾತ್ರಿ ಮಾಡಿಕೊಳ್ಳಬೇಕು ಎಂದು ಆತನಿಗೆ ಔರಂಗಜೇಬ ವಿಧಿಸಿದ್ದ. ತಾನು ಬರುವ ವರೆಗೆ ಶವವನ್ನು ಹೂಳಲಾಗದು ಎಂದು ಇತಬಾರ ಖಾನನಿಗೆ ಅಪ್ಪಣೆ ಕಳಿಸಿ ಔರಂಗಜೇಬ ಲಗುಬಗೆಯಿಂದ ಸ್ವತಃ ಆಗ್ರಾಕ್ಕೆ ತೆರಳಿದ. ಜನರಲ್ಲಿ ಕ್ಷೋಭೆಯೇಳದಿರಲಿ ಎಂದು ಸುಳ್ಳೇ ದುಃಖ ಪ್ರದರ್ಶಿಸಿದ.

ಆಗ್ರಾದಲ್ಲಿ ಆತ ತಾಜಮಹಾಲಿನಲ್ಲಿಳಿದುಕೊಂಡು ತಂದೆಯ ಶವದ ಪ್ರತೀಕ್ಷೆ ಮಾಡುತ್ತ ಕುಳಿತ. ಶವವನ್ನು ಬಾಗಿಲಿಂದ ಹೊರಗೆ ತರದೆ ಗೋಡೆಯಲ್ಲಿ ಕೊರೆದ ಕಿಂಡಿಯಿಂದ ಹೊರಗೆ ತಂದರು. ಬಡವರಿಗೆ ಹಂಚಲೆಂದು ಶಾಹಜಹಾನನ ಬೇಗಮ್ ಜನರು ಕಳಿಸಿದ ೨,೦೦೦ ಚಿನ್ನದ ನಾಣ್ಯಗಳನ್ನು, ಕೈದಿಗಳು ಯಾವ ದಾನವನ್ನೂ ಮಾಡಲಾರರು ಎಂದು ಹೇಳಿ ಕಾವಲುಗಾರರು ಜಪ್ತು ಮಾಡಿದರು. ಗೋರಿಯ ಬಳಿ ಶವ ಬಂದಾಗ ಔರಂಗಜೇಬ ಪ್ರಾರ್ಥನೆಯನ್ನು ಸಲ್ಲಿಸಿ ಅಳುತ್ತಿರುವವನಂತೆ ಕಣ್ಣುಗಳನ್ನು ಒರೆಸಿಕೊಂಡ. ನಿಜವಾಗಿಯೂ ಎಂದು ತಂದೆ ಸತ್ತಾನೊ ಎಂದು ಕಾಯ್ದಿದ್ದ ಆತನಿಗೆ ಬಲು ಸಂತೋಷವಾಗಿತ್ತು. ತಂದೆಯ ಮರಣಕ್ಕಾಗಿ ಆತ ಎಷ್ಟೋ ತಂತ್ರಗಳನ್ನು ಯೋಜಿಸಿದ್ದ.

ಅಂತ್ಯಕ್ರಿಯೆಯ ನಂತರ ಔರಂಗಜೇಬ ಕೋಟೆಯೊಳಗೆ ಹೋದ. ಅಲ್ಲಿ ಶಾಹಜಹಾನನ ಬೇಗಮರು ಅವನನ್ನು ಭೆಟ್ಟಿಯಾದರು. ಅವರು ಶಾಹಜಹಾನನ ಕ್ಷಮಾಪತ್ರವನ್ನು ಔರಂಗಜೇಬನಿಗೆ ಕೊಟ್ಟರು. ತಾವು ಇದನ್ನು ಹೇಳಿ ಬರೆಸಿದ್ದಾಗಿ ತಿಳಿಸಿದರು. ಶಾಹಜಹಾನ ತನ್ನ ಬಳಿ ಇಟ್ಟುಕೊಂಡಿದ್ದ ಆಭರಣಾದಿಗಳನ್ನೂ ಅವರು ಔರಂಗಜೇಬನಿಗೆ ಒಪ್ಪಿಸಿದರು. ಇವನ್ನೆಲ್ಲ ಪಡೆದು ಔರಂಗಜೇಬನಿಗೆ ಆನಂದವಾದರೂ ಕ್ಷಮಾಪತ್ರ ಖೊಟ್ಟಿಯಾಗಿರಬಾರದೇಕೆ ಎಂಬ ಸಂಶಯ ಮೂಡದಿರಲಿಲ್ಲ. ಆದರೂ ಈ ಪತ್ರದ ಆಧಾರದಿಂದ ಸಾಯುವ ಸಮಯದಲ್ಲಿ ತಂದೆ ತನ್ನನ್ನು ಕ್ಷಮಿಸಿದ್ದನೆಂದು ಜನರಿಗೆ ಹೇಳಿ ಅವರ ಬಾಯನ್ನು ಮುಚ್ಚಿಸಲು ಸಾಧ್ಯವಿದೆ ಎಂದು ಅವನಿಗನಿಸಿತು. ಶಾಹಜಹಾನನ ದಾಸಿಯರು ಮತ್ತು ಉಪಪತ್ನಿಯರಿಗೆ ಆತ ಬೇಕಾದವರೊಡನೆ ಲಗ್ನವಾಗಲು ಅನುಮತಿಯಿತ್ತ. ಜಹಾನಾರಾಳನ್ನು ದಿಲ್ಲಿಗೆ ಕರೆದೊಯ್ದು ಬಾದಶಾಹ ಬೇಗಮ ಎಂಬ ಬಿರುದನ್ನು ಕೊಟ್ಟ.

ಅವಳಿಗೆ ಅವಳ ಮೊದಲಿನ ಮಹಲಿನಲ್ಲಿ ಇರಲು ಹೇಳಿದ. ಶಾಹಜಹಾನನ ಹೆಂಡಂದಿರು ಅರಮನೆಯಲ್ಲಿ ವಿಧವೆಯರಂತೆ ದಿನಗಳೆಯತೊಡಗಿದರು.

ದಕ್ಷಿಣವನ್ನು ತಲುಪಿದ ಮೇಲೆ ರಾಜಾ ಜಯಸಿಂಹನು ಶಿವಾಜಿಗೆ ಅನೇಕ ಪತ್ರಗಳನ್ನು ಬರೆದ. ತನ್ನ ಮಾತು ಕೇಳಿ ದಿಲ್ಲಿಗೆ ಹೋಗಿ ಔರಂಗಜೇಬನೊಂದಿಗೆ ಸಂಧಾನ ಮಾಡಿಕೊಂಡರೆ ದಕ್ಷಿಣದ ಸುಬೇದಾರನನ್ನಾಗಿ ಮಾಡಿಸುವೆನೆಂದು ತಿಳಿಸಿದ. ಜಯಸಿಂಹ ತನ್ನ ವಚನ ಪೂರೈಸುವ ಹೊಣೆ ಹೊತ್ತಲ್ಲಿ ತಾನು ದಿಲ್ಲಿಗೆ ಬರುವುದಾಗಿ ಶಿವಾಜಿ ಕೊನೆಗೆ ಒಪ್ಪಿದ.

ಹೀಗೆ ೧೬೬೫ ಜುಲೈ ತಿಂಗಳಲ್ಲಿ ಶಿವಾಜಿ ನಮ್ಮ ಶಿಬಿರಕ್ಕೆ ಬಂದ. ಒಂದು ದಿನ ರಾತ್ರಿ ನಾನು ರಾಜಾ ಜಯಸಿಂಹನ ಡೇರೆಯಲ್ಲಿ ಅವನೊಂದಿಗೆ ಇಸ್ಪೀಟು ಆಡುತ್ತ ಕುಳಿತಿದ್ದಾಗ ಶಿವಾಜಿ ಬಂದ. ನಾವೆಲ್ಲ ಎದ್ದುನಿಂತೆವು. ನನ್ನಂಥ ಸುಂದರ ಯುವಕನನ್ನು ಮೊದಲೆಂದೂ ಕಂಡಿರದ ಶಿವಾಜಿ ನಾನು ಯಾವ ದೇಶದ ರಾಜ ಎಂದು ಕೇಳಿದ. ನಾನು ಫಿರಂಗಿರಾಜನೆಂದು ಜಯಸಿಂಹ ಹೇಳಲು ಶಿವಾಜಿಗೆ ಆಶ್ಚರ್ಯವಾಯಿತು. ತನ್ನ ಬಳಿಯಲ್ಲಿ ಅನೇಕ ಫಿರಂಗಿಗಳು ನೌಕರಿಗಿದ್ದಾರೆಂದು ಆತ ತಿಳಿಸಿದ.

ಜಯಸಿಂಹನ ಉಪಸೇನಾಪತಿ ದಿಲೇರಖಾನ ಪಕ್ಕಾ ಮೋಸಗಾರನಾಗಿದ್ದ. ಆತ ಎಷ್ಟೋ ಸಲ ಶಿವಾಜಿಯನ್ನು ಕೊಲ್ಲಲು ಯತ್ನಿಸಿದ. ಶಿವಾಜಿಯನ್ನು ನೀವೇ ಕೊಂದುಹಾಕಿ, ಇಲ್ಲವೆ ನನಗಾದರೂ ಅಪ್ಪಣೆ ಕೊಡಿ ಎಂದಾತ ಜಯಸಿಂಹನಿಗೆ ಹೇಳಿದ. ಶಿವಾಜಿಯ ಧೈರ್ಯ-ಸಾಹಸಗಳ ಮೂಲಕ ಔರಂಗಜೇಬನಿಗೆ ಎಂದೂ ನೆಮ್ಮದಿ ಇರಲಾರದಾದ್ದರಿಂದ ತಾವು ಶಿವಾಜಿಯನ್ನು ಕೊಂದರೆ ಆತ ಬಲು ಸಂತುಷ್ಟನಾಗುವನು ಎಂದು ದಿಲೇರಖಾನ ಹೇಳಿದ. ಆದರೆ ಶಿವಾಜಿಯ ಕೊಲೆಯಾಗದಂತೆ ಮತ್ತು ಬಾದಶಹ ಆತನೊಂದಿಗೆ ಗೌರವದಿಂದ ನಡೆದುಕೊಳ್ಳುವಂತೆ ನೋಡಿಕೊಳ್ಳುವ ವಚನವಿತ್ತಿದ್ದ ಜಯಸಿಂಹ ಇದೊಂದು ಮಾತನ್ನೂ ಕಿವಿಗೆ ಹಾಕಿಕೊಳ್ಳಲಿಲ್ಲ. ಶಿವಾಜಿ ಸುರಕ್ಷಿತನಾಗಿ ದಿಲ್ಲಿಗೆ ಮುಟ್ಟುವಂತೆ ಆತ ವ್ಯವಸ್ಥೆ ಮಾಡಿದ್ದಲ್ಲದೆ ದಿಲ್ಲಿಯಲ್ಲಿದ್ದ ತನ್ನ ಮಗ ರಾಮಸಿಂಹನಿಗೆ ಬಾದಶಾಹ ಶಿವಾಜಿಯನ್ನು ಕೊಲ್ಲಿಸದಂತೆ ಎಚ್ಚರಿಕೆ ವಹಿಸಬೇಕು ಎಂದು ಬರೆದು ತಿಳಿಸಿದ. ತನ್ನ ಸರ್ವನಾಶವಾದರೂ ಸರಿ, ಔರಂಗಜೇಬನಿಂದ ಶಿವಾಜಿಗೆ ವಿಶ್ವಾಸಘಾತವಾಗಗೊಡೆ ಎಂದು ಜಯಸಿಂಹ ಹೇಳಿದ.

ದಿಲ್ಲಿಯನ್ನು ಮುಟ್ಟಿದ ಮೇಲೆ ಶಿವಾಜಿಯನ್ನು ಔರಂಗಜೇಬ ದರಬಾರಕ್ಕೆ ಕರೆಸಿಕೊಂಡ. ಆದರೆ ತನ್ನ ಮಾತಿನಂತೆ ಅವನಿಗೆ ಉಚ್ಚ ಸ್ಥಾನವನ್ನೀಯದೆ ತೀರ ಕೆಳಗಿನ ಸರದಾರರ ಸ್ಥಾನವನ್ನಿತ್ತ. ಶಿವಾಜಿ ಇದರಿಂದ ತುಂಬಾ ಕ್ಷುಬ್ಧನಾದ. ಆತ ನಿರ್ಭೀತಿಯಿಂದ ತನ್ನನ್ನು ಈ ರೀತಿ ನಡೆಸಿಕೊಂಡಿದ್ದು ಔರಂಗಜೇಬ ಅಥವಾ ಜಯಸಿಂಹನಿತ್ತ ವಚನಕ್ಕನುಸಾರವಾಗಿಲ್ಲವೆಂದ. ಈ ಮೊದಲ ಸ್ವಾಗತದಿಂದಲೇ ಶಿವಾಜಿಗೆ ತನ್ನ ಭವಿಷ್ಯದ ಕಲ್ಪನೆ ಬಂತು. ಆದರೂ ಆತ ನಿರ್ಭೀತಿಯಿಂದ ಔರಂಗಜೇಬನಿಗೆ " ಒಂದು ಮಾತನ್ನು ತಾವು ಅರಿಯಬೇಕು. ಶೂರನಾದ ನಾಯದಾರಖಾನನನ್ನು ಬಿಟ್ಟರೆ ನಿಮ್ಮ ಎದುರಿನಲ್ಲಿ ಕುಳಿತಿರುವ ಈ ಸೇನಾಪತಿಗಳೆಲ್ಲ ಕೈಲಾಗದ ಮುದುಕಿಯರಂತಿದ್ದಾರೆ. ಇವರನ್ನೆಲ್ಲ ನಾನು ರಣರಂಗದಲ್ಲಿ ಬಹು ಸುಲಭದಲ್ಲಿ ಸೋಲಿಸಿದ್ದೇನೆ. ಅವರಿಗಿತ್ತಿರುವ ಮಾನ-ಮರ್ಯಾದೆಗೆ ಅವರು ಅರ್ಹರಲ್ಲ, " ಎಂದಂದು ಸಿಟ್ಟಿನಿಂದ ದರಬಾರದಿಂದೆದ್ದು ಹೋಗಿಬಿಟ್ಟ.

ಶಿವಾಜಿಯ ಈ ವರ್ತನೆಯನ್ನು ಕಂಡವರೆಲ್ಲರೂ ಔರಂಗಜೇಬನು ಕೂಡಲೆ ಅವನನ್ನು ಕೊಲ್ಲಿಸುತ್ತಾನೆಂದೇ ತಿಳಿದರು. ಆದರೆ ಔರಂಗಜೇಬ ಎಂದೂ ಬಹಿರಂಗದಲ್ಲಿ ತನ್ನ ಕೋಪವನ್ನು

ಪ್ರದರ್ಶಿಸುತ್ತಿರಲಿಲ್ಲ. ತನ್ನೆಲ್ಲ ಕುಟಿಲ ಕಾರ್ಯಗಳನ್ನೂ ಆತ ಮುಸುಕಿನಲ್ಲಿಯೆ ಮಾಡುತ್ತಿದ್ದ. ಶಿವಾಜಿಯನ್ನು ಅವನ ಶಿಬಿರಕ್ಕೊಯ್ಯಬೇಕು, ಅವನನ್ನು ಕಾಯಲು ಕಾವಲುಗಾರರ ಮೂರು ತಂಡಗಳನ್ನು ನೇಮಿಸಬೇಕು, ಶಿವಾಜಿಗಾಗಿ ಬೇರೊಂದು ಯೋಗ್ಯ ಸ್ಥಳ ದೊರೆಯುವ ವರೆಗೂ ಆತ ಶಿಬಿರದಲ್ಲಿಯೆ ಇರಬೇಕು ಎಂದಾತ ಆಜ್ಞೆ ಮಾಡಿದ. ಹೀಗಾಗಿ ಶಿವಾಜಿ ಎಷ್ಟೋ ತಿಂಗಳ ವರೆಗೆ ಡೇರೆಯಲ್ಲಿಯೆ ಇರಬೇಕಾಯಿತು. ಔರಂಗಜೇಬ ತನ್ನ ಮಾತಿನಂತೆ ತನಗೆ ಉಚಿತ ಸ್ಥಾನವನ್ನೂ ಕೊಡುತ್ತಿಲ್ಲ, ಓಡಿಹೋಗುವುದಕ್ಕೆ ಅವಕಾಶವೂ ಸಿಗುತ್ತಿಲ್ಲ ಎಂದು ಕಂಡುಕೊಂಡ ಶಿವಾಜಿ ತನ್ನ ಸೇನಾಪತಿ ಮತ್ತು ಸೈನಿಕರಿಗೆ ಮರಳಿ ಹೋಗಲು ಅಪ್ಪಣೆ ಕೊಡಬೇಕೆಂದು ಔರಂಗಜೇಬನನ್ನು ಕೇಳಿಕೊಂಡ. ಔರಂಗಜೇಬ ಒಪ್ಪಿದ. ಶಿವಾಜಿ, ಅವನ ಮಗ ಸಂಭಾಜಿ, ಶಿವಾಜಿಯ ಪ್ರಖ್ಯಾತ ಸೇನಾಪತಿ ನೇತಾಜಿ ಇವರನ್ನಷ್ಟೇ ಬಂಧನದಲ್ಲಿಟ್ಟು ಔರಂಗಜೇಬ ಸಂತುಷ್ಟನಾದ.

ರಾಜಾ ಜಯಸಿಂಹನ ಮಗ ರಾಮಸಿಂಹನ ಸಲಹೆಯಂತೆ ಶಿವಾಜಿಯು ವಾರದಲ್ಲಿ ಅನೇಕ ಸಲ ಮಿಠಾಯಿ ತುಂಬಿದ ಬುಟ್ಟಿಗಳನ್ನು ತನ್ನ ಮೇಲಿನ ಕಾವಲುಗಾರರ ಕಪ್ತಾನನಿಗೆ ಕಳಿಸಿಕೊಡುತ್ತಿದ್ದ. ಈ ಮಿಠಾಯಿ ಅಧಿಕಾರಿಗಳು ಮತ್ತು ಇತರರಲ್ಲಿ ಹಂಚಲ್ಪಡುತ್ತಿತ್ತು. ಔರಂಗಜೇಬ ತುಂಬಾ ಧೂರ್ತನಾಗಿದ್ದರೂ ಈ ವಿಷಯದಲ್ಲಿ ಜಾಗರೂಕತೆ ವಹಿಸಲಿಲ್ಲ. ಶಿವಾಜಿ ತನ್ನ ಬಿಡುಗಡೆಯಾಗಲೆಂದು ಈಶ್ವರನಲ್ಲಿ ಪ್ರಾರ್ಥಿಸಿಕೊಂಡು ದಾನಧರ್ಮವೆಂದು ಈ ಮಿಠಾಯಿಯನ್ನು ಹಂಚುತ್ತಾನೆಂದು ಆತ ತಿಳಿದಿದ್ದ. ಫಿದಯಿ ಖಾನನ ಮಹಲು ತಯಾರಾದೊಡನೆ ಶಿವಾಜಿಯನ್ನು ಗೌರವಿಸುವ ನೆಪದಲ್ಲಿ ಆತನನ್ನು ಮರುದಿನ ಬೆಳಿಗ್ಗೆ ಈ ಮಹಲಿಗೆ ಕರೆದೊಯ್ಯಬೇಕು ಎಂದು ಔರಂಗಜೇಬ ಅಪ್ಪಣೆಯಿತ್ತ. ಮಹಲನ್ನು ಮುಟ್ಟಿದೊಡನೆ ಶಿವಾಜಿಯನ್ನು ಕೊಂದು ಅಲ್ಲೇ ಅವನನ್ನು ಹೂಳಿಬಿಡಬೇಕು ಎಂದು ಅವನ ಅಂತರಂಗದ ಉದ್ದೇಶವಾಗಿತ್ತು.

ತಂದೆಯ ಆದೇಶವನ್ನು ಅಕ್ಷರಶಃ ಪಾಲಿಸುತ್ತಿದ್ದ ರಾಮಸಿಂಹನು ಔರಂಗಜೇಬನ ಸ್ವಭಾವವನ್ನು ಚೆನ್ನಾಗಿ ಅರಿತವನಾದ್ದರಿಂದ ಶಿವಾಜಿಯ ಬಗ್ಗೆ ಹೊರಡುತ್ತಿದ್ದ ನಿಜ ಹುಕುಮುಗಳನ್ನು ತಿಳಿಯಲು ತುಂಬಾ ಹಣ ಖರ್ಚು ಮಾಡಿದ್ದ. ಬಾದಶಾಹನ ಈ ಆಜ್ಞೆಯ ನಿಜಾಂಶವೂ ಅವನಿಗೆ ತಿಳಿಯಿತು. ಆತ ಶಿವಾಜಿಗೆ ಕೂಡಲೆ ಈ ವಿಷಯವನ್ನು ತಿಳಿಸಿದ. ಶಿವಾಜಿ ಎಂದಿನಂತೆ ಮಿಠಾಯಿಯ ದೊಡ್ಡ ದೊಡ್ಡ ಬುಟ್ಟಿಗಳನ್ನು ತರಿಸಿದ. ಒಂದರಲ್ಲಿ ಅವನೂ ಇನ್ನೊಂದರಲ್ಲಿ ಸಂಭಾಜಿಯೂ ಕುಳಿತುಕೊಂ-

ಡರು. ಅಲ್ಲಿಂದ ಅವರಿಬ್ಬರೂ ಶೀಘ್ರಗಾಮಿ ಕುದುರೆಗಳ ಮೇಲೆ ಕುಳಿತು ಸ್ವದೇಶಕ್ಕೆ ಪಲಾಯನ ಮಾಡಬಹುದಾದಂಥ ಸುರಕ್ಷಿತ ಸ್ಥಳವೊಂದಕ್ಕೆ ಈ ಮಿಠಾಯಿಯ ಬುಟ್ಟಿಗಳನ್ನು ಒಯ್ಯಲಾಯಿತು.

ಮರುದಿನ ಶಿವಾಜಿಯನ್ನು ಫಿದಾಯಿಖಾನನ ಮಹಲಿಗೆ ಕರೆದೊಯ್ಯಲು ಬಂದವರು ಡೇರೆಯೊಳಗೆ ಹೋದಾಗ ಮಂಚದ ಬಳಿ ಒಂದು ಪಗಡಿಯನ್ನು ಕಂಡರು. ಅದರಿಂದ ಶಿವಾಜಿ ಇನ್ನೂ ಮಲಗಿದ್ದಾನೆಂದೇ ಅವರು ತಿಳಿದು ಕೆಲ ಹೊತ್ತು ಹಾದಿಕಾಯ್ದರು. ಆಮೇಲೆ ಮತ್ತೊಮ್ಮೆ ಒಳಗೆ ಹೋಗಿ ನೋಡಿದರೆ ಮಂಚದ ಮೇಲಿದ್ದ ವಸ್ತು ಅಲ್ಲಾಡದಿರುವುದೂ ಶ್ವಾಸೋಚ್ಛ್ವಾಸದ ಶಬ್ದ ಕೇಳಿಬಾರದಿರುವುದೂ ಅವರ ಗಮನಕ್ಕೆ ಬಂತು. ಅವರು ಶಿವಾಜಿ ಸತ್ತಿದ್ದಾನೆಯೇ ಬದುಕಿದ್ದಾನೆಯೆ ಎಂದು ನೋಡಲು ಚಾದರವನ್ನು ಮೆಲ್ಲಗೆ ಸರಿಸಿದರು. ಚಾದರ ಸರಿಸಿದ ಮೇಲೆ ಮಂಚದ ಮೇಲೆ ಯಾರೂ ಇಲ್ಲದ್ದನ್ನು ಕಂಡು ಅವರಿಗೆ ಆಶ್ಚರ್ಯವಾಯಿತು. ಅವರು ಕೂಡಲೆ ಈ ಸಂಗತಿಯನ್ನು ರಾಮಸಿಂಹನಿಗೆ ತಿಳಿಸಿದರು. ಆತ ಯಾರೊಂದಿಗೂ ಏನೂ ಹೇಳದೆ ಸೆಟ್ಟಗೆ ಹೋಗಿ ಬಾದಶಾಹನಿಗೆ ಈ ಸುದ್ದಿ ತಿಳಿಸಿದ.

ಔರಂಗಜೇಬನಿಗೆ ಸಿಡಿಲು ಬಡಿದಂತಾಯಿತು. ಆತ ತಲೆಯ ಮೇಲೆ ಕೈ ಹೊತ್ತುಕೊಂಡು ವಿಚಾರಮಗ್ನನಾದ. ರಾಜ್ಯದಲ್ಲೆಲ್ಲ ಶಿವಾಜಿಯ ಶೋಧ ನಡೆಯಬೇಕು ಎಂದು ಅಪ್ಪಣೆ ಹೊರಡಿಸಿದ. ಅಷ್ಟರಲ್ಲಿ ಶಿವಾಜಿ ಸಾಮಾನ್ಯವಾಗಿ ಮೂರು ಇಡೀ ದಿನಗಳಲ್ಲಿ ಕ್ರಮಿಸಬಹುದಾದಷ್ಟು ದೂರವನ್ನು ಒಂದೇ ರಾತ್ರಿಯಲ್ಲಿ ಕ್ರಮಿಸಿ

ಬಿಟ್ಟಿದ್ದ. ಅವನು ಹಿಡಿದ ಹಾದಿ ಪರ್ವತ-ಅರಣ್ಯಗಳ ನಡುವೆ ಇದ್ದುದರಿಂದ ಅವನನ್ನು ಹಿಡಿಯುವುದು ಅಸಂಭವವೇ ಆಗಿತ್ತು.

ಒಂದು ಸಾಧುಗಳಲ್ಲಿ ಕಣ್ಣಿನ ಹುಬ್ಬುಗಳ ಸಹಿತ ತಮ್ಮ ಪ್ರತಿಯೊಂದು ಅಂಗದ ಮೇಲಿನ ಕೂದಲನ್ನು ಪೂರ್ತಿ ಬೋಳಿಸಿಕೊಳ್ಳುವ ವರ್ಗವೊಂದಿದೆ. ಇವರನ್ನು ಮುಂಡಾ ಸಾಧುಗಳು ಎಂದು ಕರೆಯುತ್ತಾರೆ. ದಿಲ್ಲಿಯಿಂದ ೬೦ ಮೈಲು ದೂರದಲ್ಲಿರುವ ಕ್ಷೇತ್ರವೊಂದರಲ್ಲಿ ಈ ಸಾಧುಗಳು ಒಂದು ಪರ್ವದ ದಿನ ಕಲೆಯುತ್ತಾರೆ. ಆ ದಿನ ಅಲ್ಲಿ ಸುಮಾರು ೨೫ ಸಾವಿರಕ್ಕಿಂತ ಹೆಚ್ಚು ಸಾಧುಗಳು ನೆರೆದಿರುತ್ತಾರೆ. ಎಲ್ಲರೂ ರಾಜಾ ಜಯಸಿಂಹನ ಕಿರಿಯ ಮಗ ಕೀರ್ತಿಸಿಂಹನ ರಾಜ್ಯದ ಗಡಿಯಲ್ಲಿರುವ ಒಂದು ವಿಶಾಲ ಸರೋವರದಲ್ಲಿ ಸ್ನಾನ ಮಾಡುತ್ತಿದ್ದರು.








ಇಂಥ ಒಂದು ಪರ್ವ ಸಮಯದಲ್ಲಿ ಓರ್ವ ಮುದಿ ಮಾಂತ್ರಿಕಳು "ನನ್ನ ಆಜ್ಞೆಯನ್ನು ಮನ್ನಿಸಿದರೆ ನಿಮ್ಮನ್ನು ದಿಲ್ಲಿ ನಗರದ ಸ್ವಾಮಿಗಳನ್ನಾಗಿ ಮಾಡುತ್ತೇನೆ. ಈಗ ದಿಲ್ಲಿಯಲ್ಲಿ ಬಾದಶಾಹನ ಬಳಿ ೧೦,೦೦೦ ಕ್ಕಿಂತ ಹೆಚ್ಚು ಕುದುರೆ ಸವಾರರಿಲ್ಲ. ಅವನ ಸೈನ್ಯವೆಲ್ಲ ಶಿವಾಜಿಯ ಪಾರುಪತ್ಯಕ್ಕಾಗಿ ಶಾಹ ಆಲಮನ ಜೊತೆ ಹೋಗಿದೆ" ಎಂದು ಸಾಧುಗಳಿಗೆ ಹೇಳಿದಳು.

ಸಾಧುಗಳು ಅವಳ ಮಾತನ್ನೊಪ್ಪಿದರು. ಅವರು ವೇಗದಿಂದ ದಿಲ್ಲಿಯತ್ತ ಧಾವಿಸಿದರು. ಔರಂಗಜೇಬನಿಗೆ ಈ ಸುದ್ದಿ ತಿಳಿದಾಗ ಆತ ಗಾಬರಿಯಾಗಿ ತನ್ನ ಹತ್ತು ಸಾವಿರ ಕುದುರೆ ಸವಾರರನ್ನು ಸಾಧುಗಳನ್ನೆದುರಿಸುವುದಕ್ಕಾಗಿ ಕಳಿಸಿದ. ಆ ಮುದಿ ಮಾಂತ್ರಿಕಳಿಂದ ಪ್ರಭಾವಿತರಾದ ಸಾಧುಗಳು ಎಷ್ಟು ಶೌರ್ಯದಿಂದ ಕಾದಿದರೆಂದರೆ ಔರಂಗಜೇಬನ ಸೈನ್ಯ ಸೋತು ಸುಣ್ಣವಾಗಿಬಿಟ್ಟಿತು. ಈ ಸಮಾಚಾರ ಕೇಳಿ ಔರಂಗಜೇಬ ಇನ್ನಷ್ಟು ಗಡಬಡಿಸಿದ. ಮುಂಡಾ ಸಾಧುಗಳೀಗ ದಿಲ್ಲಿಯಿಂದ ಕೇವಲ ೨೫ ಮೈಲು ದೂರದಲ್ಲಿದ್ದರು. ಔರಂಗಜೇಬ ಸಾಧ್ಯವಿದ್ದಷ್ಟು ಸೈನ್ಯವನ್ನು ಕಲೆ ಹಾಕಿ ಅವರಿಗೆದುರಾಗಿ ಕಳಿಸಿ ಯುದ್ಧಸಾಮಗ್ರಿಗಳನ್ನು ಈ ಸೈನ್ಯಕ್ಕೆ ಸದಾ ಪೂರೈಸುತ್ತಿರುವಂತೆ ಆಜ್ಞೆ ಮಾಡಿದ. ಮಂತ್ರ-ತಂತ್ರಗಳ ಸಹಾಯವಿಲ್ಲದೆ ಸಾಧುಗಳು ಇಷ್ಟು ಶೌರ್ಯದಿಂದ ಎಂದೂ ಕಾದಲಾರರು ಎಂದು ಆತ ಗ್ರಹಿಸಿ ಸ್ವತಃ ನೂರಾರು ಕಾಗದಗಳನ್ನು ಬರೆದ. ಅವುಗಳನ್ನು ರಣರಂಗಕ್ಕೆ ಕಳಿಸಿ ಆನೆ-ಕುದುರೆಗಳ ಹಣೆಗೂ ಧ್ವಜಗಳ ಮೇಲೂ ಅಂಟಿಸಬೇಕೆಂದು ಅಪ್ಪಣೆಯಿತ್ತ.

ಕೆಲವರು ನನ್ನೀ ಮಾತುಗಳನ್ನು ನಂಬಲಿಕ್ಕಿಲ್ಲ. ಆದರೆ ಇತಿಹಾಸಕಾರರ ಭಾಗ್ಯವೇ ಹಾಗಿರುತ್ತದೆ. ಕೆಲವರು ಅವರ ಮಾತನ್ನು ನಂಬಿದರೆ ಕೆಲವರು ನಂಬುವುದಿಲ್ಲ. ಔರಂಗಜೇಬ ಸ್ವತಃ ಮಂತ್ರ-ತಂತ್ರಗಳಲ್ಲಿ ಪ್ರವೀಣನಾಗಿದ್ದ. ಅವನ

# ನಾಲ್ಕು ಔಷಧಗಳಿಂದ ಕೂಡಿದ

# 'ಅನಾಸಿನ್'

# ನೋವನ್ನು ಉಪಶಮನಗೊಳಿಸಲು ಅಧಿಕ ಉತ್ತಮವಾಗಿದೆ

**1.** 'ಅನಾಸಿನ್' ನೋವನ್ನು ಅತಿ ಶೀಘ್ರವಾಗಿ ಗುಣಪಡಿಸುತ್ತದೆ. ಡಾಕ್ಟರರ ಸುರಕ್ಷಿತ ಔಷಧದಂತೆ ಶಾಸ್ತ್ರೀಯ ಕ್ರಮದಲ್ಲಿ ಸಮ್ಮಿಲಿತವಾದ ನಾಲ್ಕು ಔಷಧಗಳಿಂದ ಕೂಡಿದ ಅನಾಸಿನ್ ತಲೆನೋವು, ಶೀತ, ಜ್ವರ, ಹಲ್ಲುನೋವು ಮತ್ತು ಸ್ನಾಯುಗಳ ನೋವನ್ನು ಸಂಪೂರ್ಣವಾಗಿ ಅತಿ ಶೀಘ್ರವಾಗಿ ಉಪಶಮನಗೊಳಿಸುತ್ತದೆ.

**2.** 'ಅನಾಸಿನ್' ಗಾಬರಿಗೊಳಿಸುವ ದುರ್ಬಲ ನರಗಳಿಗೆ ಶಾಂತತೆಯನ್ನೀಯುತ್ತದೆ. ಅನಾಸಿನ್ ನರಗಳ ಬಿಗಿತವನ್ನು ಬಹಳ ಪ್ರಭಾವಪೂರ್ಣವಾಗಿ ತೆಗೆದು ನೀವು ಆರಾಮದಲ್ಲಿರುವಂತೆ ಮಾಡುತ್ತದೆ.

**3.** 'ಅನಾಸಿನ್' ನಿರುತ್ಸಾಹವನ್ನು ಹೋಗಲಾಡಿಸುತ್ತದೆ. ಹೆಚ್ಚಾಗಿ ನೋವಿನೊಡನೆ ಬರುವ ನಿರುತ್ಸಾಹವನ್ನು ಅನಾಸಿನ್ ಹೋಗಲಾಡಿಸುತ್ತದೆ.

**4.** 'ಅನಾಸಿನ್' ಜ್ವರವನ್ನು ಕಡಿಮೆ ಮಾಡುತ್ತದೆ. ಅನಾಸಿನ್‌ನ ತಯಾರಿಕೆಯಲ್ಲಿ ಕ್ವಿನಿನ್ ಸೇರಿರುವುದರಿಂದ ಔಷಧಗಳ ಆ ಸಮ್ಮಿಲನವು ಜ್ವರವನ್ನು ತಗ್ಗಿಸುವುದಕ್ಕೆ ಅತ್ಯುತ್ತಮವಾಗಿದೆ.

* ನಿರ್ಮಲವಾಗಿ ಸೀಲ್ ಮಾಡಿದ ಸೆಲೋಫೇನ್ ಪ್ಯಾಕ್‌ನಲ್ಲಿ 2 ಬಿಲ್ಲೆಗಳೂ, ಭದ್ರವಾಗಿ ಪಿಲ್ಫರ್-ಪ್ರೂಫ್ ಕ್ರಮದಲ್ಲಿ ಮುಚ್ಚಲ್ಪಟ್ಟ ಸೀಸೆಯಲ್ಲಿ 32 ಬಿಲ್ಲೆಗಳೂ,–ಮನೆಗಳಲ್ಲಿ ಉಪಯೋಗಿಸಲು ಅನುಕೂಲವಾಗುವಂತೆ—ದೊರೆಯುತ್ತವೆ.






Registered User: GEOFFREY MANNERS & CO. LIMITED.

KAN.2 44.(A)

ಆಳಿಕೆಯಲ್ಲಿ ಇಂಥ ಕಠಿನ ಪ್ರಸಂಗ ಅವನ ಮೇಲೆ ಬಂದಿರಲಿಲ್ಲ. ಔರಂಗಜೇಬನ ಮಂತ್ರದ ಕಾಗದಗಳ ಪರಿಣಾಮ ಸಾಧುಗಳ ಮೇಲೆ ಆಯಿತು. ಒಂದು ಯುದ್ಧವನ್ನು ಗೆದ್ದಿದ್ದರೂ ಮುದುಕಿ ಎಷ್ಟು ಹೇಳಿದರೂ ಅವರು ಈಗ ಮುಂದುವರಿಯಲು ನಿರಾಕರಿಸಿದರು. ಔರಂಗ-ಜೇಬನ ಮಾಟ ಮುದುಕಿಯ ಮಾಟವನ್ನು ಗೆದ್ದಿತು. ಮುಂಡಾ ಸಾಧುಗಳ ಮತ್ತು ಮುದು-ಕಿಯ ಶಿರಗಳು ಕತ್ತರಿಸಲ್ಪಟ್ಟವು.

ಈ ಘಟನೆಯ ನಂತರ ಔರಂಗಜೇಬನಿಗೆ ಸಿದ್ಧ ಫಕೀರನ ಕೀರ್ತಿ ಲಭಿಸಿತು, ಆತ ತನ್ನ ಮಾಟ ದಿಂದ ಸಾಧುಗಳನ್ನು ಗೆದ್ದಿದ್ದನೊ ಎನ್ನುವಂತೆ.

ದಕ್ಷಿಣದ ವಿಜಾಪುರ ರಾಜ್ಯದ ಸಮಸ್ಯೆಯನ್ನು ಸುಲಭದಲ್ಲಿ ಬಗೆಹರಿಸುವುದು ಸಾಧ್ಯವಿಲ್ಲೆಂದು ಕಂಡುಕೊಂಡು ಔರಂಗಜೇಬನು ಅದರ ಮಗ್ಗುಲ ರಾಜ್ಯವಾದ ಗೋವಳಕೊಂಡದೊಡನೆ ಒಪ್ಪಂದ ಮಾಡಿಕೊಂಡ. ಬಳಿಕ ತನ್ನೆಲ್ಲ ಬಲವನ್ನು ಪ್ರಯೋಗಿಸಿ ವಿಜಾಪುರದ ಕೊನೆಯ ಬಾದಶಾಹ ಸಿಕಂದರನು (ಈತ ಕೇವಲ ೧೫ ವರ್ಷದ ಹುಡುಗನಿದ್ದ) ತನ್ನ ಹನ್ನೆರಡು ಸಾವಿರ ಸೈನಿಕ ರೊಂದಿಗೆ ಶರಣು ಬರುವಂತೆ ಮಾಡಿದ.

ಔರಂಗಜೇಬ ಸಿಕಂದರನನ್ನು ತನ್ನ ಶಿಬಿರ ದಲ್ಲಿ ಬಂಧಿಸಿಟ್ಟ. ಆತನಿನ್ನೂ ಹುಡುಗನಾಗಿದ್ದ-ರಿಂದಲೂ ಸ್ವಧರ್ಮೀಯನಾಗಿದ್ದರಿಂದಲೂ ಸಿಕಂದರನನ್ನು ಔರಂಗಜೇಬ ಕೊಲ್ಲಿಸಲಿಲ್ಲ.

ವಿಜಾಪುರದ ಮೇಲಿನ ದಾಳಿ ೧೬೭೦ ರಲ್ಲಿ ಶುರುವಾಗಿ ೧೬೮೬ ರ ವರೆಗೂ ನಡೆಯಿತು. ಯುದ್ಧಪ್ರಾರಂಭವಾದಾಗಿನ ಕಾಲದಲ್ಲಿ ಶಿಬಿರದ ಹೊರಗೆ ಓಡಾಡುವ ಮೊಗಲರೇನಾದರೂ ಕೈಗೆ ಸಿಕ್ಕಿದರೆ ವಿಜಾಪುರದವರು ಅವರನ್ನು ಕೊಲ್ಲದೆ ಅವರ ಮೂಗನ್ನು ಕೊಯ್ಯುತ್ತಿದ್ದರು. ಮೂಗು ಕೊಯ್ಸಿಕೊಂಡು ರಕ್ತ ಸುರಿಸುತ್ತ ಇವರು ಶಿಬಿ ರಕ್ಕೆ ಮರಳಿದಾಗ ದೇಶಿ ವೈದ್ಯರು ಅವರ ಹಣೆಯ ಮೇಲಿನ ಚರ್ಮವನ್ನು ಕೊಯ್ದುಕೊಯ್ದುಮೂ-ಗಿನ ಮೇಲೆ ಅದನ್ನು ಅಂಟಿಸುತ್ತಿದ್ದರು. ಆಮೇಲೆ ಬೇರೆ ಔಷಧಿಗಳಿಂದ ಗಾಯ ಮಾಯ್ದಾಗ ಮೊದ ಲಿನ ಮೂಗನ್ನು ಹೋಲುವಂಥ ಅವಯವ-ವೊಂದು ಅಲ್ಲಿ ತಯಾರಾಗುತ್ತಿತ್ತು. ಹಣೆಯ ಮೇಲಿನ ಚರ್ಮವನ್ನು ಕೊಯ್ದದ್ದರಿಂದ ಅಲ್ಲೊಂದು ತೂತು ಬಿದ್ದಿರುತ್ತಿದ್ದರೂ ಅದರಿಂದಾಗಿ ಅವ ರೇನೂ ಮೂಗಿಲ್ಲದವರಷ್ಟು ಅಸಹ್ಯರಾಗಿ ಕಾಣಿ-ಸುತ್ತಿರಲಿಲ್ಲ. ಇಂಥ ಮೂಗುಳ್ಳ ಅನೇಕರನ್ನು ನಾನು ನೋಡಿದ್ದೇನೆ.

ವಿಜಾಪುರದ ಪತನದಿಂದ ಔರಂಗಜೇಬನಿಗೆ ತುಂಬ ಸಂತೋಷವಾಯಿತು. ವಿಜಾಪುರದಲ್ಲಿ ಹಿಂದಿನ ಬಾದಶಾಹರು ಏನಿಲ್ಲೆಂದರೂ ೨೫,೦೦೦ ಕುದುರೆ ಸವಾರರನ್ನಿಟ್ಟಿರುತ್ತಿದ್ದರು. ತನ್ನ ಯೋ-ಜನೆ ಅರ್ಧ ಫಲಿಸಿದ ಮೇಲೆ ಔರಂಗಜೇಬನು ಯಾವ ಅನುಮಾನವಿಲ್ಲದೆ ತನ್ನ ಶಕ್ತಿಯನ್ನು ಸಂಭಾಜಿಯಮೇಲೆ ಪ್ರಯೋಗಿಸುವಂತಾಯಿತು. ಇಷ್ಟರಲ್ಲಿ ಶಿವಾಜಿ ಪರಲೋಕವಾಸಿಯಾಗಿದ್ದ.

ಸಂಭಾಜಿಯ ರಾಜ್ಯ ಮೊಗಲರ ರಾಜ್ಯ ಮತ್ತು ಸಂಸ್ಥಾನಿಕರಿಂದ ಸುತ್ತುವರಿಯಲ್ಪಟ್ಟಿದ್ದರಿಂದ ಅವನನ್ನು ಗೆಲ್ಲುವುದು ಕಠಿನವಲ್ಲ ಎಂದು ಔರಂಗ ಜೇಬ ತಿಳಿದಿದ್ದ. ಆದರೆ ತನ್ನ ಅಪಾರ ಸೈನ್ಯ ಬಲದಿಂದ ಸಂಭಾಜಿಯನ್ನು ಗೆಲ್ಲುವುದು ಸಾಧ ವಿಲ್ಲೆಂದು ಅವನಿಗೆ ಅನುಭವಕ್ಕೆ ಬಂತು. ಸಂಭಾಜಿ ರಣರಂಗದಲ್ಲಿ ಜೀವದಹಂಗು ತೊರೆದು ಕಾದುವ ವೀರ ಭಟನಾಗಿದ್ದ. ಅಲ್ಲದೆ ಇಂದು ಇಲ್ಲಿ ಆಕ್ರಮಣ ಮಾಡಿದರೆ ನಾಳೆ ಅಲ್ಲಿ ಮಾಡು ತ್ತಿದ್ದ. ಒಂದೆಡೆಯಲ್ಲಿ ಹೆಚ್ಚು ದಿನಗಳ ವರೆಗೆ ಇರುತ್ತಲೇ ಇರಲಿಲ್ಲ. ಅಲ್ಪ ಆಹಾರ ಸಿಕ್ಕಿದರೂ ದೂರದೂರ ವೇಗದಿಂದ ಓಡಬಲ್ಲ ಕುದುರೆಗಳು ಅವನ ಬಳಿ ಇದ್ದವು. ಸಂಭಾಜಿ ಮೊಗಲರನ್ನು ತ್ರಾಹಿ ತ್ರಾಹಿ ಮಾಡಿಬಿಟ್ಟಿದ್ದ. ಏನಾದರೂ ತಂತ್ರ ಹೂಡದೆ ಸಾಧ್ಯವಿಲ್ಲೆಂದು ಯೋಚಿಸಿ ಔರಂಗಜೇಬನು ಸಂಭಾಜಿಯ ಮಂತ್ರಿಯಾದ

ಕಾಬ ಕಾಲಿಷನಿಗೆ ಅನೇಕ ಪತ್ರಗಳನ್ನು ಬರೆದ. ಲಂಚವೆಂದು ಅಮೂಲ್ಯ ಕಾಣಿಕೆಗಳನ್ನು ಕಳಿಸಿ ಕೊಟ್ಟು ಸಂಭಾಜಿಯನ್ನು ಜೀವಂತ ತನ್ನ ಕೈ-ಗೊಪ್ಪಿಸುವಂತೆ ಅವನ ಮನವೊಲಿಸಿದ.

ಮನುಷ್ಯನ ಚಟ ಅವನ ಸ್ವಭಾವವಾಗಿಬಿಡುತ್ತದೆ. ಒಮ್ಮೆ ದುಷ್ಟಚಟ ಹತ್ತಿತೆಂದರೆ ಪ್ರಯತ್ನಿಸಿಯೂ ಆತ ಅದನ್ನು ಕಳೆದುಕೊಳ್ಳಲಾರ ಎಂದು ಹೇಳುತ್ತಾರೆ. ಸಂಭಾಜಿಯ ಹಾಡೂ ಇದೇ ಆಗಿತ್ತು. ಪರಸತಿಯರನ್ನು ಕೆಡಿಸುವ ದುಶ್ಚಟ ಅವನದಾಗಿತ್ತು. ತನ್ನ ಶೌರ್ಯ ಪ್ರಕಟಿಸಬೇಕಾಗಿದ್ದ ಈ ಸಮಯದಲ್ಲಿ ಕೂಡ ಅವನದನ್ನು ಬಿಡಲಾರದೆ ಹೋದ. ಈ ಚಟಕ್ಕಾಗಿಯೆ ಆತ ತನ್ನ ಸ್ವಾತಂತ್ರ್ಯ ಮತ್ತು ಪ್ರಾಣವನ್ನು ತೆರಬೇಕಾ-ಯಿತು. ಕಾಬ ಕಾಲಿಷ್ ಇದರ ಲಾಭವನ್ನು ಹೊಂದಿದ.

“ ಇಲ್ಲಿಂದ ಮೂರು ಮೈಲು ದೂರದ ಹಳ್ಳಿಯಲ್ಲಿ ಓರ್ವ ಸುಂದರ ವಿವಾಹಿತ ಸ್ತ್ರೀ ಇದ್ದಾಳೆ” ಎಂದು ಕಾಬ ಕಾಲಿಷ್ ಒಂದು ದಿನ ಸಂಭಾಜಿಗೆ ಹೇಳಿದ. ಸಂಭಾಜಿಯ ಮೋಹ ಕೆರಳಿತು. ಆ ಹಳ್ಳಿಗೆ ಹೋಗಲು ಅವನು ನಿರ್ಧರಿಸಿರುವುದನ್ನು ಕಾಬಕಾಲಿಷ್ ಔರಂಗಜೇಬನಿಗೆ ಹೇಳಿಕಳಿಸಿದ. ಐದು ಸಾವಿರ ಕುದುರೆ ಸವಾರರನ್ನು ಕಳಿಸಿ-ದರೆ ಸಂಭಾಜಿ ಸೆರೆ ಸಿಗುತ್ತಾನೆ ಎಂದು ತಿಳಿಸಿದ.

ಬಾದಶಾಹ ಕೂಡಲೆ ಸೈನಿಕರನ್ನು ಕಳಿಸಿದ. ಅವರು ಹಳ್ಳಿಯ ಸಮೀಪ ಅಡಗಿ ಕುಳಿತು ಸಂಭಾಜಿಯ ಹಾದಿ ಕಾಯತೊಡಗಿದರು. ಸಂಭಾಜಿ ತನ್ನ ಸೈನಿಕರನ್ನು ಹಿಂದೆ ಬಿಟ್ಟು ಕೆಲವು ಜನರೊಂದಿಗೆ ತನ್ನ ವಿನಾಶದತ್ತ ಧಾವಿಸಿದ. ಆತ ಆ ಊರನ್ನು ಇನ್ನೂ ಮುಟ್ಟಿದ್ದನೊ ಇಲ್ಲವೊ ಅಷ್ಟರಲ್ಲಿ ಶತ್ರುಗಳು ನಾಲ್ಕೂ ಕಡೆಯಿಂದ ಅವನನ್ನು ಮುತ್ತಿದರು. ಸೆರೆ ಹಿಡಿದು ಔರಂಗಜೇಬನ ಶಿಬಿರಕ್ಕೆ ತಂದರು.

ಈ ಬಾದಶಾಹ ಜನರು ತಮಗೆ ಸಹಾಯ ಮಾಡುವವರಿಗೆ ಯಾವ ರೀತಿ ಬಹುಮಾನ ಕೊಡುತ್ತಿದ್ದರು ನೋಡಿ. ಸಂಭಾಜಿಯ ಬಂಧ-ನದ ಮೊದಲನೆಯ ಪೆಟ್ಟು ಕಾಬ ಕಾಲಿಷನಿಗೇ ಬಿತ್ತು. ಕಾಬ ಕಾಲಿಷನ ಭಯಾನಕ ಮೃತ್ಯು ಜಗತ್ತಿಗೆಲ್ಲ ಔರಂಗಜೇಬನ ಕ್ರೌರ್ಯದ ಪರಿಚ-ಯವನ್ನು ಮಾಡಿಕೊಟ್ಟಿತು. ಔರಂಗಜೇಬನ ಆಮಿಷಗಳಿಗೆ ಮರುಳಾಗಿ ತಾನು ಇಂಥ ಭೀಷಣ ದ್ರೋಹವೆಸಗಿದೆನೆಂದು ಆತ ಒಡನುಡಿಯದಿರಲಿ ಎಂದು ಅವನ ನಾಲಿಗೆಯನ್ನೆ ಬುಡಸಹಿತ ಕೀಳಿಸಿ ಔರಂಗಜೇಬ ಅವನ ವಧೆ ಮಾಡಿಸಿದ.

ಸಂಭಾಜಿಗೆ ತನಗಿನ್ನು ಮೃತ್ಯುವೇ ಗತಿ ಎಂದು ತಿಳಿದಿತ್ತು. ಆದರೆ ಅದಕ್ಕೂ ಮೊದಲು ತನ್ನ ಪಾಲಿಗೆ ಬರಬಹುದಾದ ಆಪತ್ತಿನ ಕಲ್ಪನೆ ಕೂಡ ಅವನಿಗಿರಲಿಲ್ಲ. ಸಂಭಾಜಿಯನ್ನು ಒಂಟೆಯ ಬೆನ್ನಿಗೆ ಬಿಗಿಯಾಗಿ ಕಟ್ಟಲು ಔರಂಗ ಜೇಬ ಆಜ್ಞಾಪಿಸಿದ. ಸಂಭಾಜಿಯ ತಲೆಗೆ ಅನೇಕ ಗಂಟೆಗಳನ್ನು ಕಟ್ಟಿದ್ದ ಒಂದು ಟೊಪ್ಪಿಗೆಯನ್ನು ಹಾಕಿದ್ದರು. ಹೀಗೆ ಸಿಂಗರಿಸಿದ ಸಂಭಾಜಿಯನ್ನು ಶಿಬಿರದಲ್ಲೆಲ್ಲ ಮೆರವಣಿಗೆ ಮಾಡಲು ಅಪ್ಪಣೆಯಾಯಿತು. ಒಂಟೆಯನ್ನು ಓಡಿಸಿದಾಗ ಟೊಪ್ಪಿಗೆಯ ಗಂಟೆಗಳು ಜೋರಾಗಿ ಬಾರಿಸ ಹತ್ತಲು ಸದ್ದು ಕೇಳಿ ಡೇರೆಯೊಳಗಿದ್ದ ಜನರೆಲ್ಲ ಹೊರಗೆ ಬಂದು ನೋಡತೊಡಗಿದರು. ಸಂಭಾಜಿಯ ಶರೀರ ಹಣ್ಣು ಹಣ್ಣಾಗಿ ಹೋಯಿತು. ಒಂಟೆಯನ್ನು ಶಿಬಿರದಲ್ಲೆಲ್ಲ ಓಡಿಸಿದ ಬಳಿಕ ಸಂಭಾಜಿಯನ್ನು ತನ್ನೆದುರು .ಎಳೆತರಲು ಔರಂಗಜೇಬ ವಿಧಿಸಿದ. ಕೊಡಲಿಯಿಂದ ಸಂಭಾಜಿಯ ಎದೆಯನ್ನು ಸೀಳಿಸಿ ಅವನ ಹೃದಯವನ್ನು ಹೊರಗೆಳಿಸಿ ಹಾಕಿದ. ಶರೀರವನ್ನು ಕಸದ ರಾಶಿಯ ಮೇಲೆ ಚೆಲ್ಲಿಸಿದ. ನಾಯಿಗಳು ಆ ದೇಹವನ್ನು ಹರಿದು ತಿಂದವು. ಕಾಮುಕ ಸಂಭಾಜಿಗೆ ತನ್ನ ಪಾಪದ ಫಲ ಸಿಕ್ಕಿತು. *

ಪ್ರತಿವಾರವೂ ಹೊಸ [redacted]

ಮನೋರಂಜಕ ಲೇಖನಗಳು

ವಿಷಯವೈವಿಧ್ಯ

ಸಚಿತ್ರ ರಾಷ್ಟ್ರೀಯ ಸಾಪ್ತಾಹಿಕ

# ಕರ್ಮವೀರ

ಶ್ರೀ ಕೃಷ್ಣಮೂರ್ತಿ ಪುರಾಣಿಕರ ಕಾದಂಬರಿ 'ಮಂದಾರ ಮಂದಾಕಿನಿ'

ಕೆಲ ವೈಶಿಷ್ಟ್ಯಗಳು:

- ಫ್ಯಾಂಟಮನ ಸಾಹಸ
- ಎಳೆಯರಿಗಾಗಿ ಬಾಲಪ್ರಪಂಚ
- ಮುಂಬಯಿ-ಮದ್ರಾಸದ ತಾಜಾ ಸಿನೆಮಾ ಸುದ್ದಿಗಳು
- ವ್ಯಕ್ತಿವಿಶೇಷಗಳು
- ಸಚಿತ್ರ ಲೇಖನಗಳು

ಇಪ್ಪತ್ನಾಲ್ಕು ಪುಟಗಳು ಬೆಲೆ ೨೦ ನಯೆ ಪೈಸೆ

ಪ್ರತಿ ಬುಧವಾರ ನಿಮ್ಮ ಕೈ ಸೇರುವುದು

ಲೋಕಶಿಕ್ಷಣ ಟ್ರಸ್ಟಿನ ಪ್ರಕಟನೆ

This Magazine owned by The Loka Shikshana Trust, Hubli is printed and published by Shri H. R. Purohit at the Samyukta Karnatak Press, Koppikar Road, Hubli.

ಶ್ರೀ ದಿವಾಕರ ರಂಗರಾಯರ **ಗೀತೆಯ ಗುಟ್ಟು** ೫ ನೇ ಆವೃತ್ತಿ

ಪುಟ : ೨೬... (ಅ. ವೆ. ಪ್ರತ್ಯೇಕ)

ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ ಹಾಗೂ ೨, ರೆಸಿಡೆನ್ಸಿ ರೋಡ್ ಬೆಂಗಳೂರು-೧



Regd. No. B



KASTU

A KANNA
MONTHLY D

*Circulates thro*
*the Mysore*
*and outside wh*
*Kannada is sp*

*Command*
*the highest nu*
*of reader*

*Caters to all*

75nP.

A Loka Shiks
Trust Public